ಸಂಪಾದಕ, ಪ್ರಕಾಶಕ:

**ಹನುಮಂತರಾವ ಕುಲಕರ್ಣಿ**

**ಗೊರಾಬಾಳ.**

ಸಂಚಾಲಕ ಮಂಡಲ.

# ಅರ್ಪಣೆ

ಶ್ರೀ ಮಜ್ಜಗನ್ನಾಥ ದಾಸಾರ್ಯರ ವಿದ್ಯಾ ಗುರುಗಳಾದ

ಶ್ರೀ ವರದೇಂದ್ರ ತೀರ್ಥ ಶ್ರೀ ಪಾದಂಗಳವರ

ಹೃತ್ಕಮಲನಿವಾಸಿ

ಶ್ರೀ ಮಧ್ವೇಶನ ಅಡಿದಾವರಿಗಳಲ್ಲಿ

ಮುದ್ರಕರು:

**ಶ್ರೀ. ಪಿ. ಎಸ್. ಹೊಂಬಾಳಿ**

ನ್ಯೂ ಗದಗ ಪ್ರಿಂಟರಿ, ಗದಗ.

## ಶ್ರೀ ವಿಜಯದಾಸರು



ಅಜ್ಞಾನತಿಮಿರಚ್ಛೇದಂ ಬುದ್ಧಿ ಸಂಪತ್ಪ್ರದಾಯಕಮ್ ॥
ವಿಜ್ಞಾನವಿಮಲಂ ಶಾಂತಂ ವಿಜಯಾಖ್ಯ ಗುರುಂ ಭಜೇ ॥
ಘೋರವ್ಯಾಧಿಗಳ ನೋಡಿ, ವಿಜಯರಾಯ ।
ಭೂರಿಕರುಣವ ಮಾಡಿ ತೋರಿದರು (ಜ. ವಿ.)

ಪುಣ್ಯದಿನ, ಶಾಲಿವಾಹನ ಶಕೆ ೧೬೭೭ ಯುವ ಸಂವತ್ಸರ ಕಾರ್ತಿಕ ಶು॥ ೧೦

ಶ್ರೀ ಗಣೇಶಾಂಶ ಸಂಭೂತರಾದ

## ಗೋಪಾಲದಾಸರಾಯರ ಉಪಾಸ್ಯ

ಶ್ರೀವಿಜಯ ವಿಠ್ಠಲದೇವರು. ಸಾಲಗ್ರಾಮಾದಿಗಳು,ಗೋಪಾಳಬುಟ್ಟಿ,ತಂಬೂರಿ.



ವಿಜಯವಿಠ್ಠಲರೇಯಾ ಅಸ್ಮದ್ಗುರೋರ್ಗುರು ವಿಜಯರಾಯರ ಪ್ರೀಯ
(ಗುರು ಗೋಪಾಲ ವಿಠ್ಠಲರು.)

ದಾಸರ ವಂಶಜ ಶ್ರೀ ವೆಂಕೋಬದಾಸರು ವೇಣಿ ಸೋಮಪುರ (ಗದ್ವಾಲ)
ಇವರಿಂದ ಅನುಗ್ರಹಿಸಿದ್ದು.

## — ನಿವೇದನ —

ನಮ್ಮ ಮಂಡಲದಿಂದ ಈವರೆಗೆ ೬೬ ಪ್ರಕಟನೆಗಳು ವಿವಿಧ ವಿಷಯಗಳಲ್ಲಿ ಹೊರಟು ಸಜ್ಜನರ ಮನಾನಂದಗೊಳಿಸಿವೆ. ದೊರೆತ ಸುಳಾದಿಗಳೆಲ್ಲವೂ ದಾಸಾರ್ಯರ ಸ್ತೋತ್ರಪದಗಳೆಲ್ಲವೂ ಪ್ರಕಟವಾಗಿವೆ. ಶ್ರೀದಾಸರಾಯರು ಪ್ರೇರಿಸಿದಂತೆ, ಮಂಡಲದ ಆಜ್ಞೆಯಂತೆ ಈ ವರ್ಷ ಅಪರೋಕ್ಷ ಜ್ಞಾನಿಗಳಾದ ಶ್ರೀಮಜ್ಜಗನ್ನಾಥದಾಸಾರ್ಯರು ರಚಿಸಿದ ಶ್ರೀಹರಿಕಥಾಮೃತ ಸಾರ ೫ ಟೀಕಾಗಳನ್ನು ಪ್ರಕಟಿಸುವ ಮಹತ್ಕಾರ್ಯವನ್ನು ಕೈಕೊಂಡಿದೆ.

ಶ್ರೀಹರಿಕಥಾಮೃತಸಾರದ ಮಹಿಮೆ ಶ್ರೀ ಕರ್ಜಗಿದಾಸರು ಇಂತು ವರ್ಣಿಸಿರುವರು.

ಶ್ರುತಿಗೆ ಶೋಭನವಾಗದೊಡೆ ಜಡ ।
ಮತಿಗೆ ಮಂಗಳ ವೀಯದಡೆ ಶ್ರುತಿ ।
ಸ್ಮೃತಿಗೆ ಸಮ್ಮತ ವಾಗದಿದ್ದಡೆ ನಮ್ಮ ಗುರುರಾಯ ॥
ಮಥಿಸಿ ಮಧ್ವಾಗಮಪಯೋಬ್ಧಿಯ ।
ಕ್ಷಿತಿಗೆ ತೋರಿದ ಬ್ರಹ್ಮವಿದ್ಯಾ ।
ರತರಿಗೀಪ್ಸಿತ ಹರಿಕಥಾಮೃತಸಾರವೆನಿಸುವದು ॥ ೬ ॥

ಬ್ರಹ್ಮವಿದ್ಯಾರತರಾದ ಶ್ರೀ ಹರಿಭಕ್ತರಿಗೆ ಬೇಡತಕ್ಕ ಮೋಕ್ಷವನ್ನು ಕೊಡುವ ಸದ್ಗ್ರಂಥ ಕನ್ನಡ ಹರಿದಾಸ ಸಾಹಿತ್ಯದಲ್ಲಿ ಈ ಗ್ರಂಥರಾಜವು ಅಣುಸುಧೆಯೆಂದು ಸುಪ್ರಸಿದ್ಧವಾಗಿದೆ.

ದಾಸಾರ್ಯರು ಈ ಗ್ರಂಥರಚಿಸಿ ಸುಮಾರು ೨೦೦ ವರ್ಷಗಳಾಗಿದೆ. ಈ ಅವಧಿಯಲ್ಲೇ ಒಬ್ಬರಿಂದೊಬ್ಬರು ಬರೆದುಕೊಂಡ ಹಸ್ತಪ್ರತಿಗಳು ಭಿನ್ನ ಭಿನ್ನವಾಗಿವೆ. ಅದರಂತೆ ೧೦–೧೨ ಕಡೆಗೆ ಮೂಲ ಪ್ರಕಟವಾಗಿವೆ.

ಇದೇ ಪರಿಪಾಠದಿಂದಲೇ ಆಧುನಿಕರಿಂದ ಬರೆದ ೪-೫ ಟೀಕಾ ಈವರೆಗೆ ಎರಡನೇ ಕಡಿಗೆ ಪ್ರಕಟವಾಗಿವೆ. ಅವು ಸಾಕಷ್ಟು ತೃಪ್ತಿಕರವಿಲ್ಲ. ಮೂಲ ಪದ್ಯಗಳಲ್ಲಿ ಬದಲಾವಣೆ ಸಂಧಿ ವ್ಯತ್ಯಾಸ ಕೆಲ ಪ್ರಮಾಣ ಪ್ರಮೇಯಗಳಿಗೆ ವಿರೋಧ ಸ್ವವ್ಯಾಹತಿದೋಷ, ಹೀಗಾಗಿ ಹರಿಕಥಾಮೃತಸಾರದ ನಿಜಸ್ಥಿತಿ ಅರಿಯದಂತಾಗಿದೆ.

ಮೂಲಶುದ್ಧ ಪ್ರತಿ ಸಾಕ್ಷಾತ್‌ದಾಸರ, ಶಿಷ್ಯರು ಶ್ರೀಪ್ರಾಣೇಶ ವಿಠ್ಠಲರ ಪರಂಪರೆಯಲ್ಲಿ ಬರೆದಿಟ್ಟ, ಮತ್ತು ಕಂಪಲಿ ಶ್ರೀಗುರು ಶ್ರೀಶವಿಠ್ಠಲರು ಸ್ವತಃ ಆಗಿನ ಕಾಲ ತಾವೇ ಬರೆದ ಮುದ್ದಾದ ಶುದ್ಧಿ ಪ್ರತಿಗಳ ಮೇಲಿಂದ ಶ. ೧೮೭೩ ರಲ್ಲಿ ಮೂಲ ಹರಿಕಥಾಮೃತಸಾರ ಪ್ರಕಟಗೈಸಿದೆ. ಆ ಪ್ರತಿಗಳೆಲ್ಲವೂ ಖರ್ಚಾಗಿಹೋಗಿವೆ. ಈ ಕಾರಣದಿಂದ ಸಂಶೋಧನದಲ್ಲಿ ೩೦-೩೫ ವರ್ಷದ ಹಿಂದೆ ದೊರಕಿದ ಅಪರೋಕ್ಷಜ್ಞಾನಿಗಳಿಂದ ಬರೆದ ೫ ವ್ಯಾಖ್ಯಾನಗಳನ್ನು ಈ ಪುಸ್ತಕದಲ್ಲಿ ಪ್ರಕಟಿಸಲಾಗುತ್ತದೆ. ಈ ಐವರು ಅಪರೋಕ್ಷಜ್ಞಾನಿಗಳ ವ್ಯಾಖ್ಯಾನದಿಂದ ಶ್ರೀಹರಿಕಥಾಮೃತಸಾರದ ನಿಜಾರ್ಥವು ತೋರುವದರಲ್ಲಿ ಸಂದೇಹವಿಲ್ಲ. ವೇದಾಂತ, ಗ್ರಂಥ ಟೀಕೆಯಂತೆ ವ್ಯಾಖ್ಯಾನ ರಚಿಸಿರುವರು. ಸಕಲವಿಘ್ನ ಪರಿಹಾರಾರ್ಥ ಶ್ರೀ ಸ್ವಾದಿರಾಜರು ರಚಿಸಿದ ಶ್ರೀ ನೃಸಿಂಹ ದೇವರ (೨) ಸುಳಾದಿಗಳು ಮತ್ತು ಜಗನ್ನಾಥದಾಸಾರ್ಯರ ಉಪಾಸ್ಯ ಗರುಡವಾಹನ ಶ್ರೀ ಲಕ್ಷ್ಮೀನೃಸಿಂಹದೇವರ ಸ್ತೋತ್ರಪದ ಶ್ರೀ ಗರುಡವಾಹನ ಶ್ರೀ ಲಕ್ಷ್ಮೀನೃಸಿಂಹದೇವರ ಚಿತ್ರ ಮೊದಲಿಗೆ ಕೊಟ್ಟಿದೆ.

ಶ್ರೀ ಜಯಜ್ಜಗನ್ನಾಥದಾಸಾರ್ಯರ ವಿದ್ಯಾಗುರುಗಳಾದ ಶ್ರೀವರದೇಂದ್ರ ಗುರುರಾಜರ ಸ್ತೋತ್ರ ಅಷ್ಟಕಗಳನ್ನೂ ವೃಂದಾವನ ಚಿತ್ರವನ್ನು ಕೊಡುತ್ತ ಶ್ರೀಗುರುಗಳಂತರ್ಗತ ಮಧ್ವೇಶನಿಗೆ ಗ್ರಂಥ ಅರ್ಪಿಸಲಾಗಿದೆ. ಹಿಂದೆ ಶ್ರೀ ವ್ಯಾಸರಾಜರು ಶ್ರೀ ಪುರಂದರದಾಸರಿಗೆ ದಾಸಸಾಹಿತ್ಯ ಪ್ರಚಾರಕ್ಕೆ ಪ್ರೋದ್ಬಲ ವಿತ್ತಂತೆ, ಶ್ರೀ ಜಗನ್ನಾಥದಾಸರಿಗೆ ಸಾಕ್ಷಾತ್ತಾಗಿ ವಿದ್ಯಾ ಉಪದೇಶಿಸಿ ದಾಸ ಸಾಹಿತ್ಯಕ್ಕೆ ಉತ್ಸಾಹನೀಡಿ, ತಾವೂ ಸ್ವತಃ ಕನ್ನಡದಲ್ಲಿ ತಂತ್ರಸಾರರಚಿಸಿದರು. ಇಂಥ ಮಹತ್ಮರು ಅರ್ವಾಚೀನರಾದ ಶ್ರೀ ಪ್ರಾಣೇಶದಾಸರಿಗೊಲಿದು ಶ್ರೀ ಬಣವಿಬುಡದಲ್ಲಿ ಮನುಜಪ್ರಮಾಣ ತುಳಸಿವೃಕ್ಷ ರೂಪದಿಂದ ಒಲಿದು ಬಂದು ಈಗಲೂ ವೃಂದಾವನಗತರಾಗಿ ಮಹತ್ಮೆ ಪ್ರಕಟಿಸುತ್ತ, ಇಂದು ಈ ಹರಿದಾಸಸಾಹಿತ್ಯ ಪ್ರಚಾರಕ್ಕೆ ಮೂರ್ತಿಮಂತರಾಗಿ ಬೆಂಬಲವೀಯುತ್ತಲಿದ್ದಾರೆ.

## ಗ್ರಂಥರಚನಾಕ್ರಮ

ಮೊದಲಿಗೆ, ಸಕಲಸಜ್ಜನರಿಗೆ ವಿದಿತವಾಗಲು ೧ ಪ್ರತಿಯೊಂದು ಸಂಧಿಯಸಾರ ಪದ್ಯಗಳ ಸಂಬಂಧ ಅವತರಣಿಕಾ; ೩ ಮೂಲ ಪದ್ಯಗಳು ದೊಡ್ಡ ಅಕ್ಷರದಲ್ಲಿ, ಸುಲಭವಾದ ಪ್ರತಿಪದ್ಯಾರ್ಥವು ಕೊಡಲಾಗಿದೆ.



## ಟೀಕೆಗಳು

(೧) ಶ್ರೀ ತಾಮ್ರಪರ್ಣೀಯ ಆಚಾರ್ಯರಿಂದ ರಚಿತವಾದ ಸಂಸ್ಕೃತ ಟೀಕಾ. ೧ ಸಂಧಿ ಪೂರ್ತಿ ೨ನೇ ಸಂಧಿ (೧೭) ಪದ್ಯದವರೆಗೆ ೩೦ ವರ್ಷದ ಹಿಂದೆ ( ಶ್ರೀ ಗೋಪಾಲಕೃಷ್ಣರಾವ ಹೈದರಾಬಾದ ಇವರಿಂದ ದೊರೆತದು) ಅದರಡಿ ಕನ್ನಡಾರ್ಥ ಸಹ.

(೨) ಶ್ರೀಗುರು ವಿಜಯವಿಠಲರು ಮೊದಲಕಲ್ ಶೇಷದಾಸರಿಂದ ರಚಿತವಾದ ಪಲ್ಲವಿ ಮತ್ತು ಎರಡೇ ಪದ್ಯಗಳಿಗೆ ಮಾತ್ರ ವ್ಯಾಖ್ಯಾನ ಶ್ರೀ ದ್ಯಾಮಪುರದ || ಕಿಸನರಾವ ಮುರಡಿ ಇವರಿಂದ).

(೩) **ಶ್ರೀಗುರು ಶ್ರೀಶವಿಠಲರು**– ( ಕುಂಟೋಜಿದಾಸರು ) ಇವರ ಶಿಷ್ಯರ ಟೀಕಾ (೧ನೇ ಸಂಧಿ ಪೂರ್ತಿ ೩ ನೇ ಸಂಧಿ ೧೩ ಪದ್ಯ ೫ ನೇ ಸಂಧಿ ೧೨ ಪದ್ಯ- ೧೪ನೇ ಸಂಧಿ ೧೪ ಪದ್ಯ ಇನ್ನಿತರ ಕೆಲ ಸಂಧಿಗಳಲ್ಲಿಯ ಕೆಲ ಪದ್ಯಗಳು ಅಲ್ಲಲ್ಲೆ ದೊರೆತವೆ ( ಶ್ರೀ ವೈ. ವಾ. ಪಾಂಡುರಂಗ ದಾಸರು ಕಂಪಲಿ ಇವರಂದ ) ಈ ಗ್ರಂಥ ಪೂರ್ತಿ ದೊರಕಿಸಲು ಪ್ರಯತ್ನ ನಡೆದದೆ.

(೪) **ದ್ರೌಪದೀಶ ಪತಿ ವಿಠಲರ ಟೀಕಾ**—೧೫ಸಂಧಿ ಪೂರ್ತಿ (ಶ್ರೀ ವೈ. ವಾ. ವೆ. ನರಸಿಂಹಾಚಾರ್ಯರು ಕನಕಗಿರಿ ಗುಡಗುಂಟಿ ಇವರಿಂದ ೩೫ ವರ್ಷದ ಹಿಂದೆ ದೊರತಿದೆ. ) ಇದು ಬಹು ಚಿಕ್ಕ ಟಿಪ್ಪಣಿಯಾದರೂ ಒಳ್ಳೇ ಗೂಡಾರ್ಥ ಬೋಧಕವಾಗಿ ಸನ್ಮಾರ್ಗ ದೀಪಿಕೆಯಾಗಿದೆ. ಈ ಮಹಾಜ್ಞಾನಿಗಳಾರೆಂಬುದು ಗೊತ್ತಾಗಿಲ್ಲ.

(೫) **ಶ್ರೀಜಂಬುಖಂಡಿ ವಾದಿರಾಜಾಚಾರ್ಯರವು**– ಎರಡುಟೀಕಾ (೧) ಭಾವಸೂಚನ ಕನ್ನಡ ಸಂಸ್ಕೃತ ಮಿಶ್ರ ಈ ಪ್ರತಿ ಶ್ರೀ ವೆ. ರಾಮಾಚಾರ್ಯ ಜಂಬುಖಂಡಿ ಇವರಿಂದ ೩೫ ವರ್ಷದ ಹಿಂದೆ ಪೂರ್ತಿ ದೊರತಿದೆ. (೨) ವ್ಯಾಸದಾಸ, ಸಿದ್ಧಾಂತ ಕೌಮುದಿ, ಸಂಸ್ಕೃತ ಟೀಕಾ ೩೨ ಸಂಧಿ ಮಹಾಗಾಂಭೀರ್ಯ ಪದಲಾಲಿತ್ಯ ಶಾಸ್ತ್ರಾರ್ಥ ಪ್ರಮೇಯ ಯುಕ್ತವಾದುದು. ಇದರ ಎರಡು ಪ್ರತಿಗಳು ದೊರೆತವೆ. ೧. ಬೆಳಗಾಂವಿ ಪ್ರತಿ ಶ್ರೀ ವೆ. ಮ. ಶಾ. ಸ. ಪೂಜ್ಯ ವಾಂಯಿಕೃಷ್ಣಾಚಾರ್ಯರು ಬೆಂಗಳೂರಿಂದ ಇದೇ ವರ್ಷ ದೊರೆತದೆ.

೨ ನೇ ಪ್ರತಿ ಸಂಪೂರ್ಣ ಶ್ರೀ ವೆ. ಮ. ಶಾ. ಸ. ಪೂಜ್ಯ ರಂಗಾಚಾರ್ಯ ಪುರಾಣಿಕ ಹುನಗುಂದ ಬಳ್ಳಾರಿ ಇವರಿಂದ ಈ ಕಾರ್ಯ ಪ್ರಾರಂಭಕ್ಕೆ ಉಪ ಬಲಬ್ಧವಾಗಿದೆ.ಈತರದ ಜ್ಞಾನ ಪ್ರಚಾರಕ ಕಾರ್ಯದಲ್ಲಿ ನೆರವಾದ ಮೇಲ್ಕಂಡ ಎಲ್ಲ ಮಹನೀಯರಿಗೂ, ಅವರ ವಂಶಜರಿಗೂ ಮಂಡಲವು ಚಿರಋಣಿಯಾಗಿ ವಂದನೆಗಳನ್ನರ್ಪಿಸುತ್ತದೆ.

**ಶ್ರೀತಾಮ್ರಪರ್ಣೀಯಾ**– ಸಂಸ್ಕೃತ ವ್ಯಾಖ್ಯಾನ ಶ್ರೀ ಜಂಬುಖಂಡಿ ವಾದಿರಾಜೀಯ ವ್ಯಾಸದಾಸ ಸಿದ್ಧಾಂತ ಕೌಮುದಿ ಈ ಎರಡು ಸಂಸ್ಕೃತ ಟೀಕೆ ಗಳಿಗೆ, ಪಂಡಿತವರ್ಯರು ಶ್ರೀ ವ್ಯಾಸದಾಸ ಸಾಹಿತ್ಯದಲ್ಲಿ ನುರಿತವರೂ ಶ್ರಿಮತ್ ಪೂಜ್ಯ ವೆ.ಮ.ಶಾ.ಸ. **ಶ್ರೀ ಕೇಶವಾಚಾರ್ಯ ಗುರುಚಾರ್ಯ ಸಾತ್ವಿಕ ಜಾಲಿಹಾಳ** ಮುಕ್ಕಾಂ ಗದಗ ಇವರು, ಶ್ರೀ ಮಧ್ವೇಶನ ಸೇವೆ ಯೆಂದು ಭಾವಿಸಿ, ಅನೇಕ ವೇದಾಂತ ಗ್ರಂಥಗಳನ್ನು ಪರಿಶೋಧಿಸಿ, ಕನ್ನಡದಲ್ಲಿ ಸರಳ ಅನುವಾದವನ್ನು ಗೈದು ಸಂಸ್ಕೃತ ಟೀಕೆಗಳ ಭಾವ ನಿಜಾರ್ಥವನ್ನು ಬಹು ಪರಿಶ್ರಮದಿಂದ ಬರೆದು ಕೊಟ್ಟು, ಲೋಕೋಪಕಾರ ಮಾಡಿದ್ದಾರೆ. ಮತ್ತು ಸಂಕ್ಷಿಪ್ತವಾಗಿಯೂ ಅರ್ಥಗರ್ಭಿತವಾಗಿಯೂ ಪೀಠಿಕೆ ಶ್ರೀದಾಸರ ರಾಯರ ಚರಿತ್ರೆ ಬರೆದು ದಯಪಾಲಿಸಿರುವರಲ್ಲದೆ, ಅಚ್ಚಾಗುವ ಕಾಲ ಬಹು ಶ್ರಮವನ್ನು ಒಹಿಸಿ ಶುದ್ಧವಾಗಿ ಪರಿಶೋಧಿಸಿರುವರು. ಇಂಥ ಮಹತ್ಮರೂ ನಿರಪೇಕ್ಷಿಗಳೂ, ಏಕಾಂತ ಭಕ್ತರಾದ ಪೂಜ್ಯರ ಅಡಿದಾವರೆಗಳಲ್ಲಿ ಅನಂತ ಪ್ರಣಾಮಗಳನ್ನರ್ಪಿಸಿ ಮಂಡಲವು ಪೂಜ್ಯರಿಗೆ ಚಿರಋಣಿಯಾಗಿದೆ. ಅವರ ಮಹದುಪಕಾರ ಎಂದಿಗೂ, ಮರೆಯುವಂತಿಲ್ಲ. ಪಂಡಿತರ ಪರಿಶೋಧನೆಯಿಂದ ಸಾಕಷ್ಟು ಶುದ್ಧವೂ ತೃಪ್ತಿಕರವೂ ಆಗಿದೆ. ೧ ನೇ ಸಂಧಿಗೆ ಎಲ್ಲ ಅಪರೋಕ್ಷ ಜ್ಞಾನಿಗಳ ವ್ಯಾಖ್ಯಾನ ವಿಶದವಾಗಿರುವದರಿಂದ ಪ್ರಯೊಬ್ಬರ ವ್ಯಾಖ್ಯಾನಗಳು ಬೇರೆಬೇರೆ ಯಾಗಿ ಕೊಡಲಾಗಿದೆ. ಮುಂದೆ ಎರಡನೇ ಸಂಧಿಯಿಂದ ಪ್ರತಿಪದ್ಯ ಗಳ ಕೆಳಗೆ ಕಾಲಾನುಸಾರ ರಚಿಸಿದ ಎಲ್ಲ ಟೀಕೆಗಳನ್ನು ಕೊಡಲಾಗಿದೆ.

೧. ಶ್ರೀ ತಾಮ್ರಪರ್ಣೀಯಾ, ಸಂಸ್ಕೃತ ಮತ್ತು ಕನ್ನಡಾರ್ಥ.
೨. ಶ್ರೀ ಗುರುಶ್ರೀಶ ವಿಠಲರ ಶಿಷ್ಯರ ಟೀಕಾ ಕೆಲ ಪದ್ಯಗಳು.
೩. ಶ್ರೀ ದ್ರೌಪದೀಶಪತಿ ವಿಠಲರ ಚಿಕ್ಕ ಟಿಪ್ಪಣಿ.
೪. ಶ್ರೀ ಜಂಬುಖಂಡಿ ವಾದಿರಾಜೀಯ ಭಾವಸೂಚನ.



೫. ಶ್ರೀ ,, ,, ವ್ಯಾಸದಾಸ ಸಿದ್ಧಾಂತಕೌಮುದಿ ಕನ್ನಡಾರ್ಥ ಸಹ ಕೊಟ್ಟಿದೆ. ತಾಮ್ರಪರ್ಣೀಯ ವ್ಯಾಖ್ಯಾನಕಾರರು ೨ ನೇ ಸಂಧಿ ೧೭ ಪದ್ಯಗಳವರೆಗೆ ಪ್ರತಿಪದಾರ್ಥ ಕೊಟ್ಟಿರುವರು. ಕಾರಣ ೨ನೇ ಸಂಧಿ ೧೮ನೇ ಪದ್ಯದಿಂದ ಸುಲಭವಾದ ಪ್ರತಿಪದಾರ್ಥ ಕೊಟ್ಟಿದೆ.

ಗ್ರಂಥವು ಬಹು ವಿಶದವಾಗಹತ್ತಿದೆ. ಸಂಧಿಯ ಸಾರದಿಂದ ಸ್ತ್ರೀಪುರು ಷರು ಸಹ ಓದಿ ಆನಂದಪಡಲು ಅನುಕೂಲ. ಎಲ್ಲ ಅಪರೋಕ್ಷ ಜ್ಞಾನಿಗಳ ವಿಶದವಾದ ಟೀಕೆಗಳನ್ನು ಬೇಸರಿಯದೇ ಪುನಃ ಪುನಃವಾಗಿ ಓದುತ್ತ ಮನ ಮುಟ್ಟಿ ಭಕ್ತಿಯಿಂದ ವಿಷಯ ವಿವೇಚನ ಮನನ ಮಾತುತ್ತ ಭಗವತತ್ವಗಳನ್ನು ಗ್ರಂಥಮಹತ್ಮೆಯನ್ನೂ ತಿಳಿದರೆ, ನಮ್ಮ ಇಂಥ ಮಹತ್ವಸೇವೆ ಸಫಲವೆಂದು ಭಾವಿಸಿ, ಸಕಲ ಸಜ್ಜನರನ್ನು ಪ್ರಾರ್ಥಿಸುತ್ತೇವೆ.

ಇನ್ನು ಶ್ರೀದಾಸಾಚಾರ್ಯ ಉಪಾಸ್ಯ ಗರುಡ ವಾಹನ ಶ್ರೀ ಲಕ್ಷ್ಮೀ ನೃಸಿಂಹ ಪ್ರತಿಮಾ ಫೋಟೋ ತೆಗೆಯುವಂತಿಲ್ಲ. ಕಾರಣ ಪ್ರಸಂಗಾನುಸರಿಸಿ ತಕ್ಕ ೧೪ ಚಿತ್ರಗಳನ್ನು ಸುಂದರವಾಗಿ ಬರೆದುಕೊಟ್ಟ ಶ್ರೀ ವೇ. ರಾಘವೇಂದ್ರಾ ಚಾರ್ಯರು ಗುಡಿ ಡ್ರಾಯಿಂಗ ಮಾಸ್ತರ ಧಾರವಾಡ ಇವರಲ್ಲಿ ಕೃತಜ್ಞತೆ.

ಮತ್ತು ಈ ಮಹತ್ಕಾರ್ಯ ಕೈಕೊಳ್ಳಲು ನಿಯೋಜಿಸಿದ ನಮ್ಮ ಮಂಡಲ, ಅಧ್ಯಕ್ಷರು ಉಪಾಧ್ಯಕ್ಷರಲ್ಲಿಪ್ಪ ಆ ಲೋಕಾಧ್ಯಕ್ಷನಲ್ಲಿ ಅನಂತ ಪ್ರಣಾಮಗಳನ್ನರ್ಪಿಸಿ, ಈ ಮಹತ್ಕಾರ್ಯದಲ್ಲಿ ನೆರವಾದ ಎಲ್ಲ ಚಂದಾದಾರರ ಉಪಕಾರ ಸ್ಮರಿಸುತ್ತದೆ.

## ದಾಸರಲ್ಲಿ ಕೊನೆಯ ಪ್ರಾರ್ಥನೆ

ದಾಸರೇ ಇಂಥ ಮಹತ್ಕಾರ್ಯ ಮಾಡಲು ಪ್ರೇರಿಸುವಿರಿ. ಇಂಥ ಅಸಾಧ್ಯ ಕಾರ್ಯ ಹೇಗೆ ಮಾಡುವದೆಂಬ ಅಧೈರ್ಯ ತಂದುಕೊಡುವಿರಿ. ನಾನು ಅಜ್ಞಾನಿಯು, ಬಹು ಕಷ್ಟಕಾರ್ಯ ಹೇಗೆ ಆಗುವದೆಂದು ಹಿಂಜರಿ ಯಲು, ಎನ್ನ ದುಷ್ಕರ್ಮಾನುಸಾರ ನಾನಾತರದ ರೋಗಗಳಿಂದ ಪೀಡಿತ ನನ್ನಾಗಿ ಮಾಡುವಿರಿ. ಸ್ನಾನಾಹ್ನೀಕಗಳು ಸಹ ಮಾಡದ ರೋಗೋಪದ್ರವ ಅರ್ಧಾಂಗವಾತವಿಕಾರದಲ್ಲಿಯೇ ಪುನಃ ಧೈರ್ಯವಿತ್ತು ಕಾರ್ಯೋನ್ಮುಖ ಮಾಡಿಸಿದ ದಾಸರೇ ತಾವು ಕರುಣಿಗಳು ಈವರೆಗೆ ನಾಲ್ಕುಸಲ ಈ ಪರಿ ಬಾಧೆಗಳಲ್ಲಿ ಎಚ್ಚರವಿತ್ತರೂ ನಿಮ್ಮ ಮಹಾಮಹಿಮೆ ನಾನರಿಯೆ ? ಇಳಿಯ

ವಯಸ್ಸು ಅನೇಕ ರೋಗೋಪದ್ರವಗಳ ಬಾಧೆ ಇಂದ್ರಿಯ ಕ್ಷೀಣತೆ ಆಶಕ್ತತೆ
ಮನೋ ಅಧೈರ್ಯ ಇಂಥ ಪರಿಸ್ಥಿತಿಯಲ್ಲಿಯೂ ತಾವೇ ನಿಂತು ಈ ಮಹ
ತ್ಕಾರ್ಯ ಮಾಡಿಸುವಿರೆಂಬ ಸುಜ್ಞಾನ ದೃಢವಾಗಿರಲಿ. ದೇಶ ದೇಶ ತಿರುಗಿ
ಪುಸ್ತಕ ಮತ್ತು ಹಣ ಸಂಗ್ರಹಿಸುವದು ಬಹುಕಷ್ಟ, ಸಕ್ರಮವಾಗಿ ಸಂಶೋಧಿಸಿ
ಬರೆಯುವದು, ಪಂಡಿತರುಗಳ ಸಹಾಯದಿಂದ ಪರಿಶೋಧಿಸುವದು ಅಚ್ಚಿ
ನಾಲಯ ಬಾಗಿಲವನ್ನು ಕಾಯುವ ವೇಳೆ, ನಾನಾತರದ ಕಷ್ಟಗಳನ್ನು ಅನು
ಭೋಗಿಸುವದು ಸಾಧಾರಣವಲ್ಲವಾದರೂ, ದಾಸರೇ ಸ್ಥೈರ್ಯ-ಧೈರ್ಯವಿತ್ತು
ಕಾರ್ಯ ಸಾಗಿಸುತ್ತಿರುವಿರು. ನಿಜ ನಿಜ ನಿಜ. ಇದೇ ತಪಸ್ಸು, ಇದೇಯೋಗ
ಈ ರೋಗ ಎನ್ನ ಪ್ರಾರಬ್ಧ ಅನುಭೋಕ್ತವ್ಯವಾದರೂ, ಆಗಲಿ ಇದನು ನಾನರಿ
ಯೆ ? ಆದರೆ ಇದೊಂದೇ ಬೇಡುವೆ ಆರೋಗ್ಯಭಾಗ್ಯ, ಸುಜ್ಞಾನವಿತ್ತು ಅಳಲಿ
ಬಳಲಿಸದೆ ಆಜೀವ ಪರಿಯಂತರವಾಗಿ ನಿಮ್ಮ ಸೇವೆಯನ್ನು ಮಾಡಿಸಿಕೊಳ್ಳಿ
ರೆಂದು ಪುನಃ ಪುನಃ ದಾಸರನ್ನೆ ಮೊರೆಯಿಡುವೆ. ಅದೈನ್ಯಂ ದೇಹದಾರ್ಢ್ಯಂ
ಚತ್ವತ್ಪಾಂಬುಜ ಸದ್ರಿತಂ ॥ ಇದನೆ ಬೇಡುವೆ.

ಸಜ್ಜನರು ಇದರಲ್ಲಿಯ ಗುಣ ದೋಷಗಳು ಲೋಪವಾದ ವಿಷಯಗ
ಳನ್ನು ತಿಳಿಸಿದರೆ ಮುಂದಿನ ಭಾಗದಲ್ಲಿ ಸರಿಪಡಿಸುತ್ತದೆ.

ದಾಸರ ದಾಸರ ದಾಸ,

**ಹನುಮಂತ ಗೋರಾಬಾಳ,**

**ಸಂಚಾಲಕ ಮಂಡಲ.**

---

॥ ಶ್ರೀಗುರು ರಾಜೋ ವಿಜಯತೇ ॥

# ಪೀಠಿಕೆ.

ಶ್ರೀ ಹರಿಕಥಾಮೃತವು ಸಾವು ನೋವುಗಳ ನೆಲೆಬೀಡಾಗಿರುವ ಬಾಳು
ಕಾಳ್ಗಿಚ್ಚಿನಲ್ಲಿ ಬೆಂದು ಬೆಂಡಾಗಿರುವವರಿಗೆ ದಿವ್ಯ ಸಿದ್ಧೌಷಧವಾಗಿರುತ್ತದೆ
ವಿಷಯ ವಿಷಸರ್ಪಗಳ ಸುಳಿವನ್ನೂ ಸಹ ನಿರ್ಮೂಲಗೊಳಿಸುವ ಮಹಾಮಂತ್ರ
ವಾಗಿರುತ್ತದೆ. ವೈಕುಂಠದ ಪ್ರಥಮಸೋಪಾನವಾಗಿರುತ್ತದೆ. ಪುಣ್ಯಶ್ರವಣ
ಕೀರ್ತನನಾದ ಪರಮಾತ್ಮನ ಪರಮ ಮಂಗಲ ಕಥೆಗಳಿಂದ ಪಾಪ-ಅಜ್ಞಾನ
ಮುಂತಾದ ಸಕಲ ದೋಷಗಳೂ ಕಲಿಕಲ್ಮಷಗಳೂ ಅಳಿದು ಹೋಗುವವು.
ಇದರಲ್ಲಿ ಯಾವ ಸಂದೇಹವೂ ಇರುವದಿಲ್ಲ. "ತಾರಕವಿದು ಹರಿಕಥಾಮೃತ"
ಎಂದು ಮಹಾಮಹಿಮರು ಬಿಗಿದುಬ್ಬಿದ ಕಂಠದಿಂದ ಹಾಡಿರುವರು. "ಭವೌ
ಷಧಾತ್ ಶ್ರೋತ್ರ ಮನೋಭಿರಾಮಾತ್ ಉತ್ತಮ ಶ್ಲೋಕ ಗುಣಾನುವಾ
ದಾತ್ ॥ ವಾಸುದೇವ ಕಥಾ ಪ್ರಶ್ನಃ"। ಎಂದು ಶ್ರೀಭಾಗವತ ಭಾರತಾಚಾರ್ಯರ
ಅಮರ ಸಂದೇಶ.

ಹೃದಯದಲ್ಲಿ ಕವಿದ ಅಜ್ಞಾನ ಕತ್ತಲೆಯನ್ನು ಕಳೆದು, ತಿಳಿವಿನ ಬೆಳ
ಕನ್ನು ಪಳಗಿಸಿರುವ ಗುರುಗಳ ಕರುಣೆಯನ್ನು ಪಡೆಯಬೇಕು. ಅವರನ್ನು
ತನು-ಮನ-ಧನಗಳಿಂದ ಆರಾಧಿಸಿ, ಅವರ ಒಲುಮೆಯನ್ನು ಗಳಿಸಿ, ಸದಯ
ಪ್ರಸಾದದಿಂದ ಉಪದಿಷ್ಟವಾದ ಶಾಸ್ತ್ರಗಳನ್ನು ನಿರ್ಮಳ ಭಕ್ತಿಯಿಂದ ಶ್ರವಣ
ಮಾಡಬೇಕು. ಸಂತತವಾದ ಶಾಸ್ತ್ರಶ್ರವಣ ಮನನಗಳಿಂದ ಉದಯಿಸಿದ ದೃಢ
ತರವಾದ ತತ್ವನಿಶ್ಚಯದಿಂದ ಭಗವಂತನನ್ನು ಅಖಂಡವಾಗಿ ಧ್ಯಾನಿಸಬೇಕು.
ಶ್ರೀಹರಿಯ ಪರಮ ಮಂಗಲ ಗುಣ-ನಾಮ-ರೂಪಗಳನ್ನು ಸಕಲ ಕ್ರಿಯೆಗಳಲ್ಲಿ
ಚಿಂತಿಸಿ, ಬಿಗಿದ ಕಂಠದ ಆನಂದ ಬಾಷ್ಪಗಳಿಂದ ಪುಲಕಿತನಾಗಿ, ಮೈಮರೆದು,
ಭಗವಂತನ ತತ್ವಸಾಕ್ಷಾತ್ಕಾರದ ಸುಧಾಸಮುದ್ರದ ತುಂಗತರಂಗಗಳಲ್ಲಿ ಮಿಂದು
ಮಿಂದು ವಿಹರಿಸಿ, ತನ್ಮಯತೆಯಿಂದ ಹರಿಯ ಪಾದಾರವಿಂದದಲ್ಲಿ ಸಮಾಧಿ
ಗ್ರಸ್ತನಾಗುವದೇ ಜೀವನದ ಧ್ಯೇಯ. ಶೃಣ್ವನ್ ಗೃಣನ್ ಸಂಸ್ಮರಯಂಶ್ಚ
ಚಿಂತಯನ್ ನಾಮಾನಿ ರೂಪಾಣಿ ಚ ಮಂಗಲಾನಿ ತೇ॥ ಕ್ರಿಯಾಸು ಯಸ್ತ್ವ
ಚ್ಚರಣಾರವಿಂದಯೋಃ ಆವಿಷ್ಟ ಚಿತ್ತೋ ನ ಭವಾಯ ಕಲ್ಪತೇ ॥ ಎಂದು ಶ್ರೀ

ಮದ್ಭಾಗವತ. "ಫಲವಿದು ಬಾಳುದಕೆ" । "ಶಿರಿನಿಲಯನ ಗುಣಗಳ ತಿಳಿದು ಭಜಿಸುವದೆ" ॥ ಎಂದು ಶ್ರೀ ಜಗನ್ನಾಥ ದಾಸರಾಯರ ಉಪದೇಶಸುಧೆ. ಇದೇ ವೇದ ಶಾಸ್ತ್ರ ಪುರಾಣೇತಿಹಾಸಗಳ ಪರಮಸಾರ; ಶ್ರೀ ಮದಾನಂದ ತೀರ್ಥ ಭಗವತ್ಪಾದರ ಸರಸ ಮಧುರ ಸಂದೇಶ.

ಇದಕ್ಕಾಗಿಯೇ ಇಂಥ ನಿಶ್ಚಲ, ನಿರ್ಮಲ ಭಕ್ತಿಯನ್ನು ಹುಟ್ಟಿಸುವ ಶಾಸ್ತ್ರಗಳಲ್ಲಿ- ಬ್ರಹ್ಮಮೀಮಾಂಸೆಯಲ್ಲಿ ಜ್ಞಾನಿಗಳು ಮಗ್ನರಾಗುತ್ತಾರೆ. ಇದೇ ಆತ್ಮೋನ್ನತಿಯ ಹೆದ್ದಾರಿ. ಈ ಸನ್ಮಾರ್ಗದಲ್ಲಿ ಸುಜನರನ್ನು ಪ್ರವರ್ತಿಸಲು ಪರಮ ಕರುಣಾಮಯರಾದ ಶ್ರೀಹರಿ ಶ್ರೀ ವಾಯುದೇವರುಗಳು ಭೂಮಿಯಲ್ಲಿ ಅವತರಿಸಿ, ಜ್ಞಾನರೂಪಗಳಿಂದ ಪವಿತ್ರ ಶಾಸ್ತ್ರಗಳನ್ನು ನಿರ್ಮಿಸಿ, ಉಪದೇಶಿಸಿದರು. ಶ್ರೀ ಸಮೀರದೇವನು ಉಪದೇಶಿಸಿದ ಮಾರ್ಗವನ್ನೇ ಅನುಸರಿಸಿರುವ ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ ಮುಂತಾದವರು ಈ ಭಕ್ತಿಮಾರ್ಗವನ್ನು ಪ್ರಚುರಪಡಿಸಿದರು.

ಕಲಿಯುಗದ ಕನ್ನಡಿಗರ ಸುದೈವದಿಂದ ಶ್ರೀ ನಾರದ ಮಹರ್ಷಿಗಳೇ ಪುರಂದರದಾಸರಾಗಿ ಅವತರಿಸಿ, ಇದೇ ತತ್ವಸಾಧನ ಮಾರ್ಗವನ್ನು ಪ್ರದರ್ಶಿಸಿದರು. ಪ್ರಹ್ಲಾದರಾಜರೇ ಶ್ರೀ ವ್ಯಾಸರಾಜರಾಗಿ ಜನಿಸಿ, ತತ್ವಜ್ಞಾನವನ್ನು ಪ್ರಸಾರಮಾಡಿದರು. ತತ್ವನಿರ್ಣಯದಲ್ಲಿ ಬದ್ಧಪರಿಕರರಾದ ಶ್ರೀಭೃಗುಮುನಿಗಳೇ ವಿಜಯದಾಸರಾಗಿ ಅವತರಿಸಿ, ಶ್ರೀಮನ್ಮಧ್ವಶಾಸ್ತ್ರದ ರಹಸ್ಯಗಳನ್ನು ಸುಗಮವಾಗಿ ಸುಳಾದಿಗಳಲ್ಲಿ ಬಣ್ಣಿಸಿರುತ್ತಾರೆ. ಜ್ಞಾನಸಾಮ್ರಾಜ್ಯವನ್ನೇ ಆಳುತ್ತಿರುವ ಶ್ರೀ ಜಯತೀರ್ಥರು, ಶ್ರೀ ರಘುನಾಥರು, ಶ್ರೀಪಾದರಾಜರು, ಶ್ರೀ ವ್ಯಾಸರಾಜರು, ಶ್ರೀ ವಾದಿರಾಜರು, ಶ್ರೀ ರಾಘವೇಂದ್ರರು, ಶ್ರೀ ಕೃಷ್ಣದ್ವೈಪಾಯನರು, ಶ್ರೀ ಸತ್ಯಬೋಧರು, ಶ್ರೀ ವರದೇಂದ್ರರು ಮುಂತಾದ ಮಹಾಮುನಿಗಳು ತೋರಿಸಿದ ರೀತಿಯಲ್ಲಿ, ಪಂಡಿತ ಪಾಮರ ಸಾಧಾರಣವಾಗಿ ಸಕಲರಲ್ಲಿಯೂ ವಿಷ್ಣುಭಕ್ತಿ ಮುಂತಾದವುಗಳ ಉದಯವಾಗಲೆಂದು ಶ್ರೀ ಜಗನ್ನಾಥದಾಸರು ಶ್ರೀ ಹರಿಕಥಾಮೃತಸಾರವನ್ನು ವಿರಚಿಸಿ ಉಪದೇಶಿಸಿದರು.

ಶ್ರೀ ಜಗನ್ನಾಥದಾಸರ ಈ ಹರಿಕಥಾಮೃತಸಾರದ ಮಹಿಮೆಯನ್ನು "ಇಷ್ಟೇ" ಎಂದು ಬಣ್ಣಿಸಲಾಗುವದಿಲ್ಲ. ಮರಳು ಬುದ್ಧಿಯ ವಕ್ರ ತಾರ್ಕಿಕರಿಗೆ ಈ ಸೊಲ್ಲು ಸಲ್ಲದು. ಉಪನಿಷತ್ತುಗಳ ಗಾನ ಸುಧಾಸರೋವರದಲ್ಲಿ



ಮಿಂದು ವಿಹರಿಸುವ ದಿಗ್ಗಜ ಪಂಡಿತರಿಗೆ ಇದು ಶಿರೋಭೂಷಣವಾಗುವ ಪ್ರೌಢಪ್ರಬಂಧವೆಂದರೆ ಅತಿಶಯೋಕ್ತಿಯಾಗದು. ಸರಸ ಮಧುರ ಸರಲ ಪದ ಬಂಧುರವಾದ ಸಹಜ ಸುಂದರವಾದ ಭಾಮಿನೀಷಟ್ಪದಿಯಲ್ಲಿರುವ ಪದ್ಯಗಳಲ್ಲಿ ಒಂದೆಡೆಗೆ ಸಾಹಿತ್ಯದ ವೈಖರಿಯೂ, ಇನ್ನೊಂದೆಡೆಗೆ ಅಲಂಕಾರಗಳ ವಿಸ್ತಾರವೂ, ಪ್ರಾಸಗಳ ಸುರಿಮಳೆಗಳೂ, ಪುರಾಣ ಕಥೆಗಳ ಸಾರಸಂಗ್ರಹಗಳೂ, ಉಪನಿಷತ್ತುಗಳ ರಹಸ್ಯ ವಿಷಯಗಳೂ, ಧರ್ಮಶಾಸ್ತ್ರದ ವಿವಿಧ ಶಾಸನಗಳೂ, ನೀತಿನಯಗಳೂ, ಕವಿ ಸಂಪ್ರದಾಯ ಸಮಯಗಳೂ, ಪ್ರಧಾನವಾದ ಭಗವದುಪಾಸನೆಯ ವಿವಿಧ ಬಗೆಗಳೂ ರಸಿಕ ಪಂಡಿತ, ಪುರಾಣಿಕ, ಕವಿ, ವೇದಾಂತಿ ಬ್ರಹ್ಮವಾದಿಗಳೆಲ್ಲರಿಗೂ ಸ್ಫುಟವಾಗಿ ತೋರಿ ಬರುವವು.

ಸಕಲ ದರ್ಶನಗಳಲ್ಲಿ ನಿಷ್ಣಾತರಾಗಿರುವ ಶ್ರೀ ಜಗನ್ನಾಥದಾಸಾರ್ಯರ ಹರಿಕಥಾಮೃತಸಾರವು ಶ್ರೀ ಮನ್ನ್ಯಾಯ ಸುಧೆಯ ಪ್ರತೀಕದಂತಿರುವದು, ಎಂದು ಹೇಳಿದರೆ ಅತಿಶಯೋಕ್ತಿಯಾಗದು. ಇದರ ಮಹಿಮೆಯನ್ನು ಕರ್ಜಗಿಯ ಶ್ರೀ ದಾಸಪ್ಪ ದಾಸರು ಬಹು ಯಥಾರ್ಥವಾಗಿ ಬಣ್ಣಿಸಿರುತ್ತಾರೆ.

"ಸಾಧು ಸಭೆಯೊಳ್ ಮೆರೆಯೆ ತತ್ವಸು ।
ಬೋಧ ವೃಷ್ಟಿಯ ಗರೆಯೆ ಕಾಮು ।
ಕ್ರೋಧ ಬೀಜವು ಹುರಿಯೆ ಖಳರೆದೆ ಬಿರಿಯೆ ಕರಕರಿಯು ॥
ವಾದಿಗಳ ಪಲ್ಮುರಿಯೆ ಪರಮ ವಿ ।
ನೋದಿಗಳ ಮೈಮರೆಯಲೋಸುಗ ।
ಹಾದಿದೋರಿದ ಹಿರಿಯ ಬಹು ಚಾತುರ್ಯ ಹೊಸಪರಿಯ"॥ಎಂದು.

ಇಲ್ಲಿ ಹೇಳಿರುವ ಒಂದೊಂದು ವಿಶೇಷಣವೂ ಅವರ ಕೃತಿಗೆ ಅತಿಶಯವಾಗಿ ಒಪ್ಪುತ್ತದೆ. ಶ್ರೀ ಹರಿಕಥಾಮೃತಸಾರದಿಂದ ಶ್ರೀ ದಾಸವರ್ಯರು ಮಾಡಿರುವ ಜಗದುಪಕಾರವನ್ನು ಅದೇ ದಾಸಪ್ಪದಾಸರವರೇ ರಸಭರಿತವಾಣಿಯಿಂದ ಮತ್ತೊಂದು ಪದ್ಯದಲ್ಲಿ ವರ್ಣಿಸಿರುತ್ತಾರೆ.

ಮಣಿಖಚಿತ ಹರಿವಾಣದಲಿ ವಾ ।
ರಣ ಸುಭೋಜ್ಯ ಪದಾರ್ಥ ಕೃಷ್ಣಾ ॥
ರ್ಪಣವೆನುತ ಪಸಿದವರಿಗೋಸುಗ ನೀಡುವಂದದಲಿ ॥

ಪ್ರಣತರಿಗೆ ಪೊಂಗನಡ ವರವಾಙ್ |
ಮಣಿಗಳಿಂ ವಿರಚಿಸಿದ ಕೃತಿಯೋ ||
ಉಣಿಸಿ ನೋಡುವ **ಹರಿಕಥಾಮೃತಸಾರವನುದಾರ** ||೧||

ಮಣಿಮಯ ಹರಿವಾಣದಲ್ಲಿ ಸರಸ ಮಧುರ ಭಕ್ಷ್ಯಭೋಜ್ಯಗಳನ್ನಿಟ್ಟು, ಕೃಷ್ಣಾರ್ಪಣ ಬುದ್ಧಿಯಿಂದ ಹಸಿದು ಬಂದವರಿಗೆ ಅನ್ನವನ್ನೀಯುವಂತೆ, ಜ್ಞಾನ ಪಿಪಾಸೆಯಿಂದ ಬಳಲಿರುವ ಭಕ್ತರಿಗೆ ಹೊಸಗನ್ನಡದ ಸುವರ್ಣ ಮಣಿಮಯ ತಳಿಗೆಯಲ್ಲಿ ಸಾರವಿಷಯಗಳ ಸುರಸ ಭೋಜನವನ್ನಿಟ್ಟು, ಪ್ರಸಾದಮಯ ಅಂತಃಕರಣದಿಂದ ಬುಧರಿಗೆ ಉಣಬಡಿಸಿ, ಕೃಷ್ಣಾರ್ಪಣವೆಂದು ಶ್ರೀ ಹರಿಯಲ್ಲಿ ಸಮರ್ಪಿಸಿರುವ ಜಗನ್ನಾಥದಾಸರ ಹರಿಕಥಾಮೃತಸಾರ ಭೋಜನ ದಾನವನ್ನು ಯಾವ ಮಾನವನೂ ಮರೆಯುವಂತಿಲ್ಲ. ಅಧಿಕ ಮಹಿಮೆಯನ್ನು ಫಲಶ್ರುತಿಗಳಲ್ಲಿ ಸಾಕಷ್ಟು ಕಾಣಬಹುದು.

ಖನಿಯಿಂದ ತೆಗೆದ ರತ್ನದಂತೆ ಅಗಾಧವಾದ ಶಾಸ್ತ್ರ ಸಾಗರದಿಂದ ಹೊರತೆಗೆಯಲ್ಪಟ್ಟಿರುವ ಹರಿಕಥಾಮೃತಸಾರವನ್ನು ಸುಜನಸುರರು ಸವಿಯಲಿ; ಎಂದು ಶ್ರೀಜಗನ್ನಾಥದಾಸರ ಶಿಷ್ಯರು ಇದನ್ನು ನಿತ್ಯದಲ್ಲಿ ಪಾಠಪ್ರವಚನಗಳಿಂದ ಭೂಮಿಯಲ್ಲಿ ಪ್ರಕಾಶಿಸಿದರು. ನಿತ್ಯ ಪಾರಾಯಣವನ್ನು ಸಂಪ್ರದಾಯದಲ್ಲಿ ಸೇರಿಸಿದರು. ಎಷ್ಟೋ ಮಹಾತ್ಮರು ವ್ಯಾಖ್ಯಾನಗಳನ್ನೂ ನಿರ್ಮಿಸಿದರು. ಅಲ್ಲಲ್ಲಿ ಶ್ರೀ ಹರಿಕಥಾಮೃತಸಾರದ ವಿಷಯಗಳು ವಿದ್ವದ್ಗೋಷ್ಠಿಯಲ್ಲಿ ಚರ್ಚೆಗೆ ಬಂದುದು ಅದರ ಹಿರಿಮೆಯನ್ನೂ ಮಹಿಮೆಯನ್ನೂ ವಿಕಾಸಗೊಳಿಸಿತು.

ಆದರೆ ಈ ವರೆಗೆ ದೊರೆತ ಮುದ್ರಿತ ವ್ಯಾಖ್ಯಾನಗಳಲ್ಲಿ ಅಷ್ಟು ಪ್ರಾಚೀನತೆಯಿರುವದಿಲ್ಲ; ಮತ್ತೂ ಸಾಂಪ್ರದಾಯಿಕ ಪರಿಶುದ್ಧಪಾಠ, ಅರ್ಥವಿವರಣ ವಿಷಯ ವಿವೇಚನ, ನಿಗಮನ, ಮುಂತಾದ ದೃಷ್ಟಿಯಿಂದ ಅವು ಸಾಕಷ್ಟು ಪೂರ್ಣವಿರುವದಿಲ್ಲ; ಮತ್ತು ಒಂದೆರಡನ್ನು ಉಳಿದು ಯಾವವೂ ಪ್ರಾಚೀನವಿರುವದಿಲ್ಲ. ಈ ಕುಂದನ್ನು ದೂರಮಾಡುವದಕ್ಕೆ, ಶ್ರೀ ವರದೇಂದ್ರ ಸಾಹಿತ್ಯ ಮಂಡಲದವರು ತಮ್ಮಲ್ಲಿ ಸಂಗ್ರಹೀತವಾದ ಹರಿಕಥಾಮೃತಸಾರದ ಸಂಸ್ಕೃತ ಕನ್ನಡ ವ್ಯಾಖ್ಯಾನಗಳನ್ನು ಪ್ರಕಟಿಸಲು ಈ ಮಹತ್ಕಾರ್ಯವನ್ನು ಕೈಕೊಂಡಿರುತ್ತಾರೆ. ಶ್ರೀಜಗನ್ನಾಥ ದಾಸರಾಯರ ಪ್ರಿಯಶಿಷ್ಯರಾದ ಶ್ರೀಪ್ರಾಣೇಶದಾಸರು, ಶ್ರೀಶವಿಠಲರು, ಶ್ರೀದವಿಠಲರು, ಮುಂತಾದವರ ಸ್ವಂತ ಕೈಬರಹದ ಶುದ್ಧ ಪ್ರತಿ



ಗಳನ್ನು ಅನುಸರಿಸಿ, ಹರಿಕಥಾಮೃತಸಾರ ಹಾಗೂ ಅದರ ಐದು ವ್ಯಾಖ್ಯಾನಗಳನ್ನು ಈ ಹೊತ್ತಿಗೆಯಲ್ಲಿ ಮುದ್ರಿಸಿರುತ್ತದೆ.

**ಶ್ರೀಹರಿಕಥಾಮೃತಸಾರದ ಕನ್ನಡ ವ್ಯಾಖ್ಯಾನಗಳು**

**ಶ್ರೀಗುರುವಿಜಯವಿಠಲರಟೀಕಾ**-ಇದನ್ನು ರಚಿಸಿದವರು ಶ್ರೀ ಮೊದಲುಕಲ್ ಶೇಷದಾಸರು. ಇವರಿಗೆ "ಗುರುವಿಜಯ ವಿಠಲ" ಎಂದು ಅಂಕಿತ ವಿದ್ದುದರಿಂದ ಇದೇ ಹೆಸರೇ ಹೆಚ್ಚಾಗಿ ಬಳಿಕೆಯಲ್ಲಿ ಬಂದಿದೆ. ಇವರ ವ್ಯಾಖ್ಯಾನದಲ್ಲಿ ಪ್ರತಿಪದಾರ್ಥವಿರದಿದ್ದರೂ ವಿಸ್ತಾರವಾದ ವಿಷಯ ವಿವೇಚನೆಯು ತುಂಬಿ ತುಳುಕುತ್ತದೆ. ಪಲ್ಲವಿ ಹಾಗೂ ಮೊದಲಿನ ಎರಡು ಪದ್ಯಗಳಿಗೆ ಮಾತ್ರ ಇರುವ ಈ ವ್ಯಾಖ್ಯಾನದಲ್ಲಿ ಸಂಕ್ಷಿಪ್ತವಾಗಿ ಸಕಲ ವಿಷಯಗಳೂ ವಿಮರ್ಶದಲ್ಲಿ ಬಂದಿರುತ್ತವೆ. ಪ್ರಮಾಣಗಳನ್ನೂ ಯುಕ್ತಿಗಳನ್ನೂ ಉದಾಹರಿಸಿ, ವಿವಿಧ ರೀತಿಗಳಲ್ಲಿ ವಿಷಯಗಳನ್ನು ವಿವರಿಸಿ ಬರೆದಿರುವ ಇವರ ಬರಹವು ಓದುಗರ ಹೃದಯದಲ್ಲಿ ವಿಷಯಗಳನ್ನು ಸಾಕಷ್ಟು ಬಿಂಬಿಸುವದೆಂಬಲ್ಲಿ ಸಂದೇಹವಿಲ್ಲ.

(೨) **ಗುರು ಶ್ರೀಶ ವಿಠಲರ ಶಿಷ್ಯರ ಟೀಕಾ**- ಕುಂಟೋಜೀ ದಾಸರು ಶ್ರೀಗುರು ಶ್ರೀಶವಿಠಲರು. ಇವರ ಬಗ್ಗೆ ಯಾವ ಸಂಗತಿಯೂ ತಿಳಿದು ಬಂದಿರುವದಿಲ್ಲ. ಇವರ ಶಿಷ್ಯರೊಬ್ಬರು ದಾಸರಾಯರ ಉಪನ್ಯಾಸವನ್ನು ಅಕ್ಷರಶಃ ಬರೆದುಕೊಂಡು, ವ್ಯಾಖ್ಯಾನರೂಪವಾಗಿ ಮಂಡಿಸಿರುವದೆಂದು ಇದನ್ನು ಓದಿದರೆ ಕಂಡು ಬರುವದು. ಹರಿಕಥಾಮೃತಸಾರಕ್ಕೆ ಫಲಶ್ರುತಿಯನ್ನು ಬರೆದ, ಶ್ರೀಜಗನ್ನಾಥ ದಾಸರ ಸಾಕ್ಷಾತ್ ಶಿಷ್ಯರಾದ ಶ್ರೀಗುರು ಶ್ರೀಶವಿಠಲರು ಕನ್ನಡ ದಾಸರ ನಾಲಿಗೆಯಲ್ಲಿ ನಲಿದಾಡುತ್ತಿದ್ದಾರೆ. ಅವರ ಶಿಷ್ಯರ ಈ ವ್ಯಾಖ್ಯಾನವು ಸಂಪ್ರದಾಯವನ್ನು ಅನುಸರಿಸಿ ಬಂದ ಅಸಂಖ್ಯ ರಹಸ್ಯವಿಷಯಗಳನ್ನು ಒಳಗೊಂಡಿರುತ್ತದೆ. ಇದು ಓದುಗರಿಗೆ ಒಳ್ಳೆಯ ಸಹಾಯವನ್ನು ನೀಡುವದು.

(೩) **ದ್ರೌಪದೀಶಪತಿವಿಠಲರಟೀಕಾ**– ಈಚಿಕ್ಕಟಿಪ್ಪಣೆಯನ್ನು ಎಷ್ಟು ಬಣ್ಣಿಸಿದರೂ ಸಾಲದು. ಅಲ್ಲಲ್ಲಿ ಸಂಗ್ರಹಿಸಿ ಬರೆದ ಈ ಟಿಪ್ಪಣೆಯು ಬಹಳ ವಿಷಯಗಳನ್ನು ಒಂದೇ ಪದದಿಂದ ತಿಳಿಸುವ ಸೂತ್ರದಂತೆ ಇರುತ್ತದೆ. ಇದೊಂದು ಇವರ ಅಸಾಧಾರಣ ಬರಹ ಸರಣಿಯು.

(೪) **ಭಾವಸೂಚನ**– ಉತ್ತರ ಕರ್ನಾಟಕದಲ್ಲಿ ಸುಪ್ರಸಿದ್ಧರಾಗಿ ಮೆರೆದ ಜಂಬುಖಂಡೀ ವಾದಿರಾಜಾಚಾರ್ಯರು ಇದನ್ನು ರಚಿಸಿದವರು.

ಪ್ರಮಾಣಗಳ ಸಮಾಖ್ಯೆಯೊಡನೆ ವಿಷಯಗಳನ್ನು ಸಯುಕ್ತಿಕವಾಗಿ ನಿರ್ಣ
ಯಿಸಿ ವಿವರಿಸುವದು ಇವರ ಬರಹದ ವಿಶಿಷ್ಟತೆ. ಪ್ರಾಚೀನದಾಸರ ಪದ
ಸುಳಾದಿಗಳನ್ನೂ, ಪುರಾಣ ವಚನಗಳನ್ನೂ, ಪರಸ್ಪರ ಉಚಿತವಾಗಿ ಹೊಂದಿಸಿ
ಬರೆಯುವದರಿಂದ ಕುಂದಣದಿಂದೊಪ್ಪುವ ಸುವರ್ಣದಂತೆ ಈ ವ್ಯಾಖ್ಯಾನವು
ಸಹೃದಯರಿಗೆ ಮನೋಹರವಾಗಿರುತ್ತದೆ.

ಸಂಸ್ಕೃತ ದರ್ಶನ ಭಾಷೆಯಲ್ಲಿರುವ ಪ್ರಬಂಧಗಳಿಗೆ ಕನ್ನಡದಲ್ಲಿ
ಅನುವಾದ ಮುಂತಾದವುಗಳಿರಬಹುದು. ಆದರೆ ಕನ್ನಡದಲ್ಲಿಯೇ ಇರುವ
ಮೂಲ ಗ್ರಂಥವನ್ನು ಸಂಸ್ಕೃತದಲ್ಲಿ ವ್ಯಾಖ್ಯಾನಿಸುವದು ತೀರ ವಿರಳ .ಶ್ರೀಹರಿ
ಕಥಾಮೃತಸಾರಕ್ಕೆ ಎರಡು ಸಂಸ್ಕೃತ ವ್ಯಾಖ್ಯಾನಗಳ ರಚನೆಯಾಗಿರುವದು
ಕನ್ನಡಿಗರ ಸುದೈವದ ಹೆಮ್ಮೆಯ ಸಂಗತಿಯಾಗಿರುತ್ತದೆ. ಎರಡೂ ಸಂಸ್ಕೃತ
ವ್ಯಾಖ್ಯಾನಗಳನ್ನು ಈ ಪುಸ್ತಕದಲ್ಲಿ ಮುದ್ರಿಸಿ ಪ್ರಕಾಶಿಸಿರುತ್ತದೆ.

೧. **ಶ್ರೀ ತಾಮ್ರಪರ್ಣೀಯಾ**—ಇದಕ್ಕೆ "ಪದ ಪ್ರಕಾಶಿಕಾ" ಎಂದು
ಎರಡನೆಯ ಹೆಸರು. ಇದನ್ನು ರಚಿಸಿದವರ ಹೆಸರು ಸಹ ತೀರ ಅಪರಿಚಿತವಿದೆ.
ದಕ್ಷಿಣ ದೇಶದ ತಾಮ್ರಪರ್ಣೀ ನದೀ ತೀರದ ಅಗ್ರಹಾರದಲ್ಲಿ ನೆಲಸಿದ್ದ ಸುಪ್ರ
ಸಿದ್ಧ ಟಿಪ್ಪಣೀಕಾರರ ವಂಶೀಯರೆಂದು ಸಾಮಾನ್ಯವಾಗಿ ಊಹಿಸಬಹುದು.
ಬಹಳ ವಿಷಯಗಳನ್ನು ಬೆಳೆಯಿಸಿ ಹೊಂದಿಕೆಯಾಗುವಂತೆ ಸರಳಶೈಲಿಯಲ್ಲಿ
ಬರೆದಿರುವ ಇವರ ವ್ಯಾಖಾನದಿಂದ ಟೀಕಾಕಾರರ ಉಭಯ ಸಾಹಿತ್ಯದ
ಪಾಂಡಿತ್ಯವೆಷ್ಟು ? ಎಂಬುದು ವಿಶದವಾಗುತ್ತದೆ.

೨. **ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ:**— ಭಾವಸೂಚನ
ವನ್ನು ರಚಿಸಿದ ಜಂಬುಖಂಡೀ ವಾದಿರಾಜಾಚಾರ್ಯರೇ ಇದನ್ನು ರಚಿಸಿರು
ತ್ತಾರೆ. ವ್ಯಾಸದಾಸ ಸಿದ್ಧಾಂತಗಳಿಗೆ ಇದು ಚಂದ್ರಿಕೆ (ಬೆಳದಿಂಗಳು)ಯಂತೆ
ಪ್ರಕಾಶಿಕೆಯಾಗಿರುವದರಿಂದ ಇದಕ್ಕೆ " ವ್ಯಾಸದಾಸ ಸಿದ್ಧಾಂತ ಕೌಮುದೀ "
ಎಂದು ಹೆಸರನ್ನು ಇಟ್ಟಿದ್ದಾರೆ.

ಇವರ ಬರಹವು ಬಲು ಬಿಗುವಿನಲ್ಲಿರುತ್ತದೆ. ಮೇಲೆ ಶ್ಲೇಷ ರೂಪಕ
ಮುಂತಾದ ಅಲಂಕಾರಗಳಿಂದ ಬಂಧುರವಾದ ಪದ್ಯಗಳನ್ನೂ ಒಳಗೊಂಡಿರು
ತ್ತದೆ. ನಾರಿಕೇಲಪಾಕದಂತಿರುವ ಇವರ ಬರಹ ಸರಣಿಯು ಕವಿತಾರ್ಕಿಕ
ಚೂಡಾಮಣಿ ಶ್ರೀ ಹರ್ಷನ " ಗ್ರಂಥ ಗ್ರಂಥಿರಿಹ ಕ್ವಚಿತ್ ಕ್ವಚಿದಪಿ ನ್ಯಾಸಿ



ಪ್ರಯತ್ನಾನ್ಮಯಾ ॥ " ಎಂಬ ವಾಕ್ಯವನ್ನು ನೆನಪಿಸುತ್ತದೆ. ಗುರುಸಂಪ್ರ
ದಾಯದ ಸರ್ಪಕಾವಲದಲ್ಲಿ ಸುಭದ್ರವಾಗಿರುವ ರಹಸ್ಯ ವಿಷಯ ಮಣಿಗಳನ್ನು
ಹೊರತಂದು, ವ್ಯಾಸಸಾಹಿತ್ಯದ ದರ್ಶನ ಸ್ವರೂಪದಲ್ಲಿ, ಕಾವ್ಯವಾಣಿಯ
ಸುವರ್ಣದ ಮೆರುಗಿನಲ್ಲಿ ಹೊಳೆಯುವಂತೆ ವಿಶದಪಡಿಸಿರುವ ಇವರ ಬರಹಕ್ಕೆ
ಕಾಠಿಣ್ಯವೂ ಒಂದು ಭೂಷಣವೆಂದು ಹೇಳಬಹುದು. ಶ್ರೀ ವೇದ ಶಾಸ್ತ್ರೇ
ತಿಹಾಸ ಪು ರಾ ಣ ಗ ಳಿ ಗೂ ಶ್ರೀ ಸುಳಾದಿ ಪದ ಹರಿಕಥಾಮೃತಸಾರ
ಮುಂತಾದ ದಾಸರಾಯರ ವಚನಗಳಿಗೂ ಇರುವ ಪರಸ್ಪರ ಸಂಬಂಧವನ್ನು
ತೋರಿಸಿ ಕೊಡುವದೇ ಈ ವ್ಯಾಖ್ಯಾನದ ಮುಖ್ಯ ಉದ್ದೇಶ.

ಶ್ರೀ ಮದಾಚಾರ್ಯರ ಸತ್ಸಿದ್ಧಾಂತದ ಮೂಲ ಸಂಪ್ರದಾಯವನ್ನು
ಅರಿಯದವರ ಅಪಾರ್ಥಗಳನ್ನು ಜರೆದು, ಮೂಲ ಶಾಸ್ತ್ರದ ನೆರಳಿನಂತೆ ನಡೆಯು
ವದೇ ದಾಸಸಾಹಿತ್ಯದ ಹೆಗ್ಗುರಿ; ಎಂಬುದನ್ನು ಸ್ಫುಟ ಪಡಿಸಲು ಈ ವ್ಯಾಖ್ಯಾನ
ಕಾರರ ಭಗೀರಥ ಪ್ರಯತ್ನ. ತತ್ವವನ್ನು ತಿಳಿಯದ ಅರ್ಧಮರ್ಧ ಓದಿದವರ
ಹಿಡಿತದಿಂದ ವಿರುದ್ಧ ದಿಶೆಯಲ್ಲಿ ಹರಿಯ ಹೊರಟಿರುವ ದಾಸವಚನಗಳ ನದಿ
ಗಳನ್ನು ವ್ಯಾಸಸಾಹಿತ್ಯಪಯೋನಿಧಿಯೊಡನೆ ಸಂಗಮಿಸಿ, ಈ ಗಂಗಾ ಸಾಗರ
ದಲ್ಲಿ ಸಜ್ಜನರ ಅವಗಾಹನ ಸ್ನಾನ ಮುಂತಾದ ಪರ್ವೋತ್ಸವವನ್ನು ನೋಡಿ
ನಲಿಯುವದೇ ಇವರ ಹೆಗ್ಗುರಿ; ಎಂದು ತೋರದಿರಲಾರದು. ಶ್ರೀಜಂಬುಖಂಡಿ
ಆಚಾರ್ಯರ ಈ ಮಹೋಪಕಾರವನ್ನು ಉಭಯ ಸಂಪ್ರದಾಯದವರು ಎಂದಿಗೂ
ಮರೆಯುವಂತಿಲ್ಲ.

ಜಂಬುಖಂಡೀ ಆಚಾರ್ಯರು ಮೊದಲು ಶ್ರೀ ಸತ್ಯ ಪರಾಕ್ರಮ ತೀರ್ಥ
ರಲ್ಲಿ ಓದಿದರು. ಅನಂತರ ಶ್ರೀ ವಿದ್ಯಾಧೀಶರಲ್ಲಿ ವ್ಯಾಸಂಗ ಮಾಡಿದರು. ಶ್ರೀ
ಸೋದಾರಾಜರ(ಶ್ರೀ ವಾದಿರಾಜರ) ಅನುಗ್ರಹದಿಂದ ಹುಟ್ಟಿದ ಈ ಆಚಾರ್ಯರು
ದಾಸರಾಯರ ಹರಿಕಥಾಮೃತಸಾರವನ್ನು ನಿತ್ಯದಲ್ಲಿ ಪಾರಾಯಣ ಮಾಡುತ್ತಿ
ದ್ದರು. ಇದನ್ನು ತಿಳಿದ ಅವರ ಗುರುಗಳು "ಇದೇನು ಕನ್ನಡಗ್ರಂಥ ? ಪಾರಾ
ಯಣವೇಕೆ ?" ಎಂದು ಜರಿದು ನುಡಿದರು. ಶ್ರೀ ಗುರುಗಳಿಗೆ ಹರಿಕಥಾಮೃತ
ಸಾರದ ಪ್ರೌಢಿಮೆಯನ್ನು ತೋರಿಸಿ ಕೊಡಲು ಓದುವಾಗಲೇ ಈ ವ್ಯಾಸದಾಸ
ಸಿದ್ಧಾಂತ ಕೌಮುದೀ ಟೀಕೆಯನ್ನು ವಿರಚಿಸಿ, ಗುರುಗಳ ಅಡಿಗಳಲ್ಲಿಅರ್ಪಿಸಿದರು.
ಆಗ ಗುರುಗಳು ಆಚಾರ್ಯರ ಪಾಂಡಿತ್ಯಕ್ಕೂ, ಹರಿಕಥಾಮೃತಸಾರದ ಪ್ರೌಢಿ

ಮೆಗೂ ಬೆರಗಾಗಿ ಹರುಷಬಟ್ಟರೆಂದು ಐತಿಹ್ಯ ವಿರುತ್ತದೆ.

ಇವರು ಶ್ರೀ ಜಗನ್ನಾಥದಾಸರಾಯರ ಸಂಪ್ರದಾಯದಲ್ಲಿರುವ ಮೂಲ ಪ್ರತಿಗಳಲ್ಲಿರುವಸಂಧಿ-ಪದ್ಯಗಳ ಕ್ರಮವನ್ನು ಅನುಸರಿಸಿಯೇ ವ್ಯಾಖ್ಯಾನವಮಾಡಿ ರುತ್ತಾರೆ.

ಶ್ರೀ ತಾಮ್ರಪರ್ಣೀ ಆಚಾರ್ಯರವರು ಒಂದು ಸಂಧಿ ೧೭ ಪದ್ಯಗಳ ವರೆಗೆ ಮಾತ್ರ ಪದ್ಯದ ಪ್ರತಿಪಧಾರ್ಥವನ್ನು ಬರೆದಿರುತ್ತಾರೆ. ಆದರೆ ಮುಂದೆ ಪದ್ಯಗಳ ಸರಳ ಅರ್ಥವನ್ನು ಸುಬೋಧವಾಗಿ ಯಾರೂ ಬರೆದಿರುವದಿಲ್ಲ. ಆದುದರಿಂದ ಶ್ರೀ ಪದ್ಯದ ಪ್ರತಿಪದಾರ್ಥವನ್ನೂ ಕೊಡಲಾಗಿರುತ್ತದೆ. ಮತ್ತು ಸಂಧಿಯಲ್ಲಿ ಬಂದ ಸಕಲ ವಿಷಯಗಳು ಹೃದಯದಲ್ಲಿ ನಿಲ್ಲುವಂತೆ ಸಂಗ್ರಹ ರೂಪವಾಗಿ "ಸಂಧಿಸಾರ"ವನ್ನೂ ಸಂಚಾಲಕರು ಬರೆದು ಕೊಟ್ಟಿದ್ದಾರೆ.

ಇನ್ನು ವ್ಯಾಖ್ಯಾನಕಾರರ ಬಗ್ಗೆ ಯಾವ ಚರಿತ್ರಗಳೂ ಇದುವರೆಗೆ ದೊರೆ ತಿರುವದಿಲ್ಲ. ದೊರೆತರೆ ಮುಂಗಿನ ಸಂಪುಟದಲ್ಲಿ ಸಂಗ್ರಹಿಸಿ ಪ್ರಕಾಶಿಸಲಾಗು ತ್ತದೆ.

ಈ ಎರಡೂ ಸಂಸ್ಕೃತ ವ್ಯಾಖ್ಯಾನಗಳ ಹಸ್ತಲಿಖಿತ ಪ್ರತಿಗಳು ಒಂದೊಂ ದೇ ದೊರೆತುದರಿಂದಲೂ, ಬರಹವು ಅಕ್ಷರಗಳ ಲೋಪ-ಆಧಿಕ್ಯ-ವಾಕ್ಯಪ್ಲುತಿ ಪದ್ಯವ್ಯತ್ಯಾಸ ಮುಂತಾದ ಬಹು ದೋಷಯುಕ್ತವಾದುದರಿಂದಲೂ ಶುದ್ಧ ಪ್ರತಿಯನ್ನು ಸಿದ್ಧಪಡಿಸಲು ಬಹಳ ಪ್ರಯಾಸವಾಗಿರುತ್ತದೆ.

ಕೈಬರಹದ ಅಶುದ್ಧಿಯ ಮೂಲಕ ಮುದ್ರಣದಲ್ಲಿ ಅನೇಕ ದೋಷ ಗಳು ಸಂಭವಿಸಿರಬಹುದು, ಅವುಗಳನ್ನು ಸಾರಸೇವಿಗಳಾದ ರಸಿಕ ಪಂಡಿ ತರು ಕ್ಷಮಿಸಬೇಕು. ಮತ್ತು ಅಶುದ್ಧಿಗಳನ್ನು ತಿಳಿಸಿದಲ್ಲಿ ಪುನರ್ಮುದ್ರಣ ದಲ್ಲಿ ಶುದ್ಧಮಾಡಲಾಗುವದೆಂದು ಪಂಡಿತರಲ್ಲಿ ನಮ್ರವಾಗಿ ಬೇಡುತ್ತೇವೆ.

ಮೂಲದಲ್ಲಿ ಉದಾಹೃತವಾಗದ ಉಪನಿಷತ್ತುಗಳು, ಬೃಹತೀಸಹಸ್ರ, ಪ್ರಕಾಶ ಸಂಹಿತೆ, ಅರ್ಧನಾರೀ ನಾರಾಯಣ ತಂತ್ರ, ಗುರುವೃತ್ತ, ವಾಯು ಪ್ರೋಕ್ತ ಮುಂತಾದ ಹೆಸರನ್ನೂ ಕೇಳದ ಅತ್ಯಪರಿಚಿತ ಗ್ರಂಥಗಳಲ್ಲಿ ಹೇಳಿ ರುವ ವಿಷಯಗಳಿಂದ ತುಂಬಿರುವ ಈ ಸಂಸ್ಕೃತವ್ಯಾಖ್ಯಾನಗಳನ್ನು ಕನ್ನಡ ದಲ್ಲಿ ಅನುವಾದಿಸುವಾಗ ಈ ಗ್ರಂಥಗಳು ಸಿಗಲಿಲ್ಲ; ಹೆಚ್ಚಿನ ಸಹಾಯ ಗಳೂ ಒದಗಲಿಲ್ಲ. ಹೀಗೆ ಗ್ರಂಥ, ಸಹಾಯ, ಸಮಯ ಮುಂತಾದವುಗಳ



ಕೊರತೆಯಿಂದ ಮತ್ತು ಪ್ರಮಾದ ಅಜ್ಞಾನಗಳಿಂದ ಎಸಗಿರುವ ಲೋಪ ದೋಷಗಳನ್ನು ಕ್ಷಮಿಸಬೇಕೆಂದು ಇನ್ನೊಮ್ಮೆ ಪಂಡಿತರಲ್ಲಿ ಬಾಗುವೆವು.

ಇಂಥ ಅಮೌಲ್ಯವಾದ ಗ್ರಂಥ ರತ್ನಗಳನ್ನು ಹಳೆಯ ಕೋಶಗಳಿಂದ ಹೊರತೆಗೆದು, ಅವುಗಳನ್ನು ಬೆಳಕಿಗೆ ತರುವ ಮಹಾಕಾರ್ಯವನ್ನು ಕೈಕೊಂಡಿ ರುವ ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದ ಸಾಹಸವು ಬಹಳ ದೊಡ್ಡದು ಮತ್ತು ಅತ್ಯಂತ ಅಭಿನಂದನೀಯ. ಸಂಚಾಲಕರಾದ ಶ್ರೀ ಗೊರಬಾಳ ಹನಮಂತರಾಯರ ಪರಿಶ್ರಮದ ಸೇವೆಯು ಆದರ್ಶವಾಗಿರುತ್ತದೆ. ಇದರಂತೆ ಇದಕ್ಕೂ ಹೆಚ್ಚಾಗಿ ಸೇವೆಯನ್ನು ಸಲ್ಲಿಸಲು ಶ್ರೀ ರಾಯರಿಗೆ ದೀರ್ಘಾಯುರಾರೋಗ್ಯೈಶ್ವರ್ಯವನ್ನು ಶ್ರೀ ಹರಿಯು ಕರುಣಿಸಲಿ" ಎಂದು ಶ್ರೀಶನಲ್ಲಿ ಪ್ರಾರ್ಥಿಸುತ್ತೇವೆ.

ಎಲ್ಲಕ್ಕೂ ಮೊದಲು ಈ ಅನುವಾದ ಕಾರ್ಯಕ್ಕೆ ನಮ್ಮನ್ನು ಪ್ರಚೋ ದಿಸಿ, ಸಮಯೋಚಿತ ಸಲಹೆಗಳಿಂದ ಉತ್ಸಾಹಿಸಿರುವ ನಮ್ಮ ಪರಮ ಮಿತ್ರ ರಾದ ಶ್ರೀ ಪದ್ಮನಾಭಾಚಾರ್ಯ ಹೊಂಬಾಳಿಯವರಿಗೆ ಹೃತ್ಪೂರ್ವಕ ಧನ್ಯ ವಾದಗಳು.

ಈ ಅಲ್ಪ ಸೇವೆಯಿಂದ ಶ್ರೀಶನು ಪ್ರಸನ್ನನಾಗಲಿ" ಎಂದು ಪ್ರಾರ್ಥಿಸಿ ವಿರಮಿಸುತ್ತೇವೆ.

**ಶಕೆ ೧೮೮೧ ವಿಕಾರಿ ಸಂ||**
ಶ್ರಾವಣ ಶುಕ್ಲ ದ್ವಿತೀಯಾ
ಗುರುವಾರ. **ಜಾಲೀಹಾಳ ಕೇಶವಾಚಾರ್ಯಃ**

---

# ಶ್ರೀ ಜಗನ್ನಾಥದಾಸರಾಯರ ಅವತಾರ ಚರಿತ್ರ

ಶ್ರೀ ಜಗನ್ನಾಥದಾಸರು ಮೂಲದಲ್ಲಿ ಕರ್ಮಜ ದೇವತೆಗಳಿಗೆ ಸಮಾನರಾದ ಪಾರ್ಷದರು. "ಆದಿಯುಗದಲ್ಲಿ ಮಹ ಆದಿತೇ ಯನೊಬ್ಬ । ಮೇದಿನಿಯೊಳ್ ಸ್ವರ್ಣಕಶಿಪು ನಾಮದಿ । ಸಾಧಿಸಿ ಬಂದನು ಅವನಿಗೊಬ್ಬ । ಸೋದರ ಸ್ವರ್ಣಾಂಬಕನೆನಿಸಿ । ಮೇದಿನಿ ಚೋರನೆನಿಸಿ ಹತನಾದನು । ಆದಿಶೇಷನು ವಿಷ್ವಕ್ಸೇನವಾಯು ತನುಜ। ತಾ। ನಾದ ಪ್ರಲ್ಹಾದ ಮುಖ್ಯ ಪ್ರಾಣಾವೇಶದಿಂದ ಸೋದರ ಜೀವಾಂಶ **ಅಪಾನಾವಿಷ್ಟ ಸಹ್ಲಾದ ನಾಮಕ"** ಎಂದು ಶ್ರೀಗುರು ಜಗನ್ನಾಥ ವಿಠಲರ ಸುಳಾದಿಯಲ್ಲಿ ಹೇಳಲಾಗಿರುತ್ತದೆ.

ಶ್ರೀ ಜಗನ್ನಾಥದಾಸರ ಮೊದಲನೆಯ ಶಿಷ್ಯರಾದ ಶ್ರೀ ಪ್ರಾಣೇಶದಾಸರು ತಮ್ಮ ಗುರುಗಳ ಸ್ವರೂಪವನ್ನೂ ಜನ್ಮಗಳನ್ನೂ ಈ ಪದ್ಯದಲ್ಲಿ ಬಹು ಯಥಾವತ್ತಾಗಿ ಬಣ್ಣಿಸಿರುತ್ತಾರೆ.

ತಿಳಿಯನು ಎಂದೆಂದಿಗನ್ಯ ರಂಗವೊಲಿದ ದಾಸರು ಜಗನ್ನಾಥನ್ಯ ॥ ಅಲವ ಮಹಾತ್ಮರೆಂಬ ಪುಣ್ಯಶ್ರವಣ ಕೀರ್ತಿ ನಿತ್ಯ ಕೇಳ್ವ ನರ ಧನ್ಯ ॥ ಪಲ್ಲ ॥ ಹಿರಣ್ಯಕಶಿಪುಜ **ಸಹ್ಲಾದ ನೀವೆ!** ಎರಡನೇ ಜನ್ಮ **ಶಲ್ಯನಾದ ॥ ಗುರುವಾದಿರಾಜರ ನರ್ಚಿಸೀದ । ಪುರಂದರ ದಾಸರಾಯರಲ್ಲುದಿಸಿದ ॥೧॥** ಐದನೆಯ ರೂಪ ವೀಗಿದಂತೆ । ಬಹುದು ಏಳು ಜನ್ಮ ಮುಂದಂತೆ । ಮೋದಾಭಿವೃದ್ಧಿಗೇನೋ ಅಂತೆ ಎಂಬೋ । ವಾದಿಗೆಲ್ಲ ಅಂತಿಗಂತೆ ॥ ೨ ॥ ದಾಸಕೂಟಸ್ಥರಿಗೀ ಮಾತು ಹಲವು ದೇಶಗಳಲ್ಲಿ ಅನುಭವವಾಯ್ತು ॥ ಈ ಸುಕಥಾಲಾಪವಲ್ಲಾಯ್ತು ! **ಶ್ರೀ ಪ್ರಾಣೇಶವಿಠಲನಲ್ಲಿ**ಹನಾತು ॥ ೩೦ ॥

ಹೀಗೆ ಕೃತಯುಗದಲ್ಲಿ **ಸಹ್ಲಾದ,** ದ್ವಾಪರಯುಗದಲ್ಲಿ **ಶಲ್ಯ,** ಮೂರನೆಯ ಜನ್ಮದಲ್ಲಿ **ಶ್ರೀ ವಾದಿರಾಜರ ದೂತ ಕೊಂಡಪ್ಪ** ನಾಲ್ಕನೇ ಜನ್ಮದಲ್ಲಿ **ಶ್ರೀ ಪುರಂದರದಾಸ ರಾಯರ** ಮಕ್ಕಳು, **ಅಭಿನವ ಪುರಂದರರು,** ಐದನೆಯ ಜನ್ಮದಲ್ಲಿ ಶ್ರೀ ಜಗನ್ನಾಥದಾಸರು ಮುಂದೆ ೭ ಜನ್ಮಗಳು ಬರುವವೆಂದು ಶ್ರೀ ಪ್ರಾಣೇಶದಾಸರು ಪದಗಳಲ್ಲಿ ಹೇಳಿರುತ್ತಾರೆ.

ಶ್ರೀ ಜಗನ್ನಾಥದಾಸರೇ ಶ್ರೀಹರಿಕಥಾಮೃತಸಾರದ ೩೨ ನೆಯ ಸಂಧಿಯಲ್ಲಿ ೩೪ನೆಯ ಪದ್ಯದಲ್ಲಿ "ಓದಿಸುವ ಗುರುಗಳನ್ನು ಜರಿದು, ಸಹೋದರರಿಗುಪದೇಶಿಸಿದ " ಎಂದು ಪ್ರಹ್ಲಾದರಾಯರ ಸ್ತೋತ್ರದಲ್ಲಿ "ಸಹೋದರ" ಎಂಬ



ಪದದಿಂದಲೂ, ಅದರಂತೆ ಶ್ರೀ ರಾಘವೇಂದ್ರರ ಸ್ತೋತ್ರದಲ್ಲಿ **" ಬಾಲಕನ** ಬಿನ್ನಪವ ಲಾಲಿಸೋ ಮುನಿಪ " ಎಂಬಲ್ಲಿ "ಬಾಲಕ" ಎಂಬ ಪದದಿಂದಲೂ, ತಮ್ಮ ಸಹೋದರ ಭಾವವನ್ನು ಸೂಚಿಸಿರುತ್ತಾರೆ. ಇನ್ನೂ ಹೆಚ್ಚಾಗಿರುವ ಆಧಾರಗಳನ್ನು ಪದಸುಳಾದಿಗಳಲ್ಲಿ ನೋಡಬಹುದು.

## ಜೀವನ ಪರಿಚಯ

ಕೃಷ್ಣಾ-ತುಂಗಭದ್ರಾ ನದಿಗಳ ನಡುವೆ "ಮಾನವಿ" ಎಂಬ ಚಿಕ್ಕ ನಗರವಿದೆ. ಮಾನವಿಯು ರಾಯಚೂರ ಜಿಲ್ಹೆಯಲ್ಲಿ ಸೇರಿದ ತಾಲೂಕು ಸ್ಥಳವು ಆಗಿರುತ್ತದೆ. ಈ ತಾಲೂಕಿಗೆ ಒಳಪಟ್ಟ "ಬ್ಯಾಗವಾಟ" ಎಂಬ ಗ್ರಾಮದಲ್ಲಿ ಶ್ರೀ ಜಗನ್ನಾಥದಾಸರ ಪೂರ್ವಜರು ಇರುತ್ತಿದ್ದರು. ಶ್ರೀ ರಂಗದೇವರ ನಿವಾಸಸ್ಥಾನವಾದ ಈ ಗ್ರಾಮದಲ್ಲಿ "ನಾರಾಯಣಾಚಾರ್ಯ" ರೆಂಬುವವರು ಕರ್ಣಿಕ ವೃತ್ತಿಯಿಂದ ಇರುತ್ತಿದ್ದರು. ಇವರು ಹರಿತ್ಸ ಗೋತ್ರದವರು, ಹಾಗು ಯಜುಃಶಾಖಾಧ್ಯಾಯಿಗಳಾಗಿದ್ದರು. ಇವರಿಗೆ ಶ್ರೀ ಅನಂತಾಚಾರ್ಯರು ಮಕ್ಕಳು. ಶ್ರೀ ಅನಂತಾಚಾರ್ಯರಿಗೆ ನರಸಿಂಹಾಚಾರ್ಯ (ನರಸಪ್ಪನವರು) ರೆಂಬುವವರು ಮಕ್ಕಳಿದ್ದರು. ನರಸಪ್ಪನವರು ಬಹಳ ಸತ್ವವೃತ್ತಿಯವರಾದುದರಿಂದ ವಿಶೇಷ ಲೌಕಿಕವನ್ನು ತೊರೆದು, ಶ್ರೀ ರಂಗನ ಆರಾಧನೆಯಲ್ಲಿಯೇ ಕಾಲವನ್ನು ಕಳೆಯುತ್ತಿದ್ದರು. ಕುಲಪರಂಪರೆಯಂತೆ ನರಸಪ್ಪನವರು ಶ್ರೀ ಮನ್ಮಂತ್ರಾಲಯ ರಾಯರ ಮಠದ ಪೀಠಾ ಧಿಷ್ಠಿತರಾದ ಶ್ರೀ ಸುಮತೀಂದ್ರತೀರ್ಥ ಶ್ರೀ ಪಾದಂಗಳವರಲ್ಲಿ ಚನ್ನಾಗಿ ವ್ಯಾಸಂಗ ಮಾಡಿದ್ದರು. ಇದಲ್ಲದೆ ಇವರು ಗಂಧರ್ವ ವಿದ್ಯೆಯಲ್ಲಿ ಅತಿ ಕುಶಲರಿದ್ದುದರಿಂದ ಶ್ರೀ ಸತ್ಯಪೂರ್ಣ ಶ್ರೀ ಪಾದಂಗಳವರಿಂದ "ಪರಾವಸು" ನಾಮಕ ಗಂಧರ್ವರೆಂದು ಪ್ರಶಸ್ತಿಯನ್ನು ಪಡೆದು ಪ್ರಸಿದ್ಧರಾಗಿದ್ದರು. ಇಹಾಮುತ್ರ ವಿಷಯ ವಿರಕ್ತರಾದ ಶ್ರೀ ನರಸಪ್ಪನವರು ತೀರ್ಥಯಾತ್ರೆ ಮುಂತಾದವುಗಳಿಂದ ಪುಟಕ್ಕೆ ಹಾಕಿದ ಚೊಕ್ಕ ಬಂಗಾರದಂತೆ ತೇಜಃಪುಂಜರಾಗಿ ಮೆರೆದು ಬರುವ ಸುದ್ಧಿಯನ್ನು ಕೇಳಿ, ಶ್ರೀ ಉಪೇಂದ್ರತೀರ್ಥರು, ಅವರನ್ನು ಕರೆಯಿಸಿ, ಅವರಿಗೆ ಸನ್ಮಂತ್ರೋಪಗಳನ್ನು ಉಪದೇಶಿಸಿ, ಅಲ್ಲದೆ ಗರುಡವಾಹನ ಲಕ್ಷ್ಮೀನರಸಿಂಹ ಪ್ರತಿಮಾ,ನರಸಿಂಹಶಾಲಗ್ರಾಮ ಮುಂತಾದವುಗಳನ್ನು ಕೊಟ್ಟು ಅನುಗ್ರಹಿಸಿದರು. ಮುಂದೆ ಕೆಲ ದಿವಸಗಳು ಕಳೆದ ನಂತರ ಶ್ರೀ ನಾರದಾಂಶರಾದ

ಶ್ರೀ ಪುರಂದರದಾಸರು ಸ್ವಪ್ನದಲ್ಲಿ ದರ್ಶನವಿತ್ತು, "ನರಸಿಂಹವಿಠಲ" ಎಂದು ಅಂಕಿತದಿಂದ ಅನುಗ್ರಹಿಸಿದರು. (ಜಗನ್ನಾಥ ವಿ॥)

ಇಂಥ ಮಹನೀಯರ ಪೂರ್ವವೃತ್ತವನ್ನೂ ಚರಿತ್ರವನ್ನೂ ಸರಿಯಾಗಿ ಓದದೇ ತಿಳಿಯದೇ ಅರ್ಥಮರ್ಥ ವಿಮರ್ಶೆಯಲ್ಲಿ ಮುಳುಗಿದ ಮಹಾತ್ಮರು ಇವರನ್ನು ಅಷ್ಟು ವಿದ್ಯಾವಂತರಲ್ಲವೆಂಬುದಾಗಿ ಊಹಿಸಿ ಬರೆದಿರುತ್ತಾರೆ. ಇದಲ್ಲದೇ ಚರಿತ್ರದಲ್ಲಿಯೂ ಎಷ್ಟೋ ವ್ಯತ್ಯಾಸವನ್ನು ಮಾಡಿರುತ್ತಾರೆ. ಈ ವಿಮರ್ಶಕರಿಗೆ ಸಂಶೋಧಕರಿಗೆ ಇದೇ ಮಂಡಲದಿಂದ ಮುದ್ರಿತವಾಗಿರುವ ಶ್ರೀ ಹರಿಕಥಾಮೃತಸಾರದ ಪೀಠಿಕೆಯಲ್ಲಿ ಬರೆದ ಚರಿತ್ರ ಹಾಗೂ ಶ್ರೀ ಜಗನ್ನಾಥ ದಾಸರ ಪದಸುಳಾದಿಗಳು ಹೀಗೆ ಗೋಚರಿಸಲಿಲ್ಲವೋ? ಅರಿಯದ ಸಂಗತಿಯಾಗಿರುತ್ತದೆ. ಇವರ ಸಂಕುಚಿತ ದೃಷ್ಟಿಗೆ ವಿಷಾದಪಡಬೇಕಾಗುತ್ತದೆ.

ಶ್ರೀ ನರಸಿಂಹಾಚಾರ್ಯರಿಗೆ ಶ್ರೀಲಕ್ಷ್ಮೀಬಾಯಿಯೆಂಬುವ ಧರ್ಮಪತ್ನಿ ಇದ್ದಳು. ಸಮಾನ ಕುಲಶೀಲಗಳಿಂದ ಸಂಪನ್ನರಾದ ಶ್ರೀ ಲಕ್ಷ್ಮಮ್ಮನವರ ಗುಣಗಳನ್ನುಬೇರೆ ಬಣ್ಣಿಸಬೇಕಿಲ್ಲ; ಪತಿಗೆಅನುರೂಪದಳಾದಸತಿಯುಲಕ್ಷ್ಮಮ್ಮ ಮಹಾ ಪತಿವ್ರತೆಯಾಗಿದ್ದಳು. ಪ್ರಾಯಶಃ ಮಹನೀಯರ ತಂದೆ ತಾಯಿಗಳು ಮಹನೀಯರಾಗಿ ಮಹಾ ತಪಸ್ಸಿನಿಂದ ಪುತ್ರರತ್ನಗಳನ್ನು ಪಡೆಯುವದು ಸ್ವಭಾವವಾಗಿರುತ್ತದೆ. ಅದರಂತೆ ತಪಸ್ಸಿನಿಂದ ಪುಣ್ಯವನ್ನು ಸಂಪಾದಿಸಿದ ಈ ದಂಪತಿಗಳಿಗೆ ಸುಪುತ್ರರತ್ನದ ಜನನವಾಯಿತು. (ಶಾ. ಶ. ೧೬೪೯ ಕೀಲಕ ಸಂ. ಶ್ರಾ. ಶುದ್ಧ ದ್ವಿತೀಯಾ) ಶ್ರೀ ತಿರುಪತಿ ಶ್ರೀನಿವಾಸನ ಪರಿಪರಿಯ ಸೇವಾ ಫಲರೂಪವಾಗಿ ಉದಯಿಸಿದ ಈ ಕುಮಾರನಿಗೆ "ಶ್ರೀನಿವಾಸ" ಎಂದು ನಾಮಕರಣವನ್ನು ಮಾಡಿದರು.

ಶುಕ್ಲಪಕ್ಷದ ಶಶಿಯಂತೆ ಬೆಳೆಯುವ ಈ ಕುಮಾರನು ತಕ್ಕವಯಸ್ಸಿಗೆ ಬರಲು ಚೌಲ, ಅಕ್ಷರಾಭ್ಯಾಸ, ಉಪನಯನಗಳನ್ನು ಮಾಡಿ, ಕೆಲಕಾಲ ತಾವೇ ಅಭ್ಯಾಸ ಮಾಡಿಸಿ, ಶ್ರೀನಿವಾಸನನ್ನು ಶ್ರೀಮದ್ವರದೇಂದ್ರತೀರ್ಥ ಶ್ರೀಪಾದಂಗಳವರ ಸನ್ನಿಧಾನದಲ್ಲಿ ನರಸಪ್ಪನವರು ಸಮರ್ಪಿಸಿದರು. ಶ್ರೀ ನರಸಪ್ಪನವರ ತೇಜೋವಿರಾಜಿತ ದಿವ್ಯ ಕ್ಷೇತ್ರದಲ್ಲಿ ತಪಸ್ಸಿನ ಪುಣ್ಯವೃಷ್ಟಿಯಿಂದ ಉದಯಿಸಿ, ಬೆಳೆದು ಬಂದ ಈ ಶ್ರೀನಿವಾಸನಿಗೆ ಶ್ರೀ ಮದ್ವರವೇಂದ್ರ ಶ್ರೀಪಾದಂಗಳವರ ಅನುಗ್ರಹದ ತತಿಯು ಒದಗಲು ಕೇಳಬೇಕೆ? ಸ್ವಾಭಾವಿಕವಾಗಿರುವ ಶ್ರೀನಿ



ವಾಸನ ವಿದ್ಯಾಲತೆಯು ಸ್ವಲ್ಪೇ ದಿನಸಗಳಲ್ಲಿ ಬೆಳೆದು, ಫಲಗಳಿಂದ ಶೋಭಿಸಹತ್ತಿತು. ಆರಂಭದಿಂದಲೇ ಗುರುಗಳ ಮನಸ್ಸನ್ನು ವಶಪಡಿಸಿ, ವಿದ್ಯಾರಹಸ್ಯಗಳನ್ನು ಗ್ರಹಿಸಿಯೇಬಿಡುವ ಶ್ರೀನಿವಾಸನ ವ್ಯಾಸಂಗದ ವ್ಯಾಸಂಗಶೈಲಿಯು ಶ್ರೀಮದ್ವರದೇಂದ್ರರಿಗೆ ಮತ್ತಷ್ಟೂ ಮುದವನ್ನು ಉಂಟು ಮಾಡಿತು. ಹೀಗೆ ಶೀಘ್ರವಾದ ಗುರುಪ್ರಸಾದದಿಂದ ತೀವ್ರದಲ್ಲಿಯೇ ಶ್ರೀನಿವಾಸನು ವಿದ್ಯಾಧಿವಾಸನಾಗಿ ವಿಬುಧ ವೃಂದದಲ್ಲಿ ಶೋಭಿಸಹತ್ತಿದನು.

ಶ್ರೀ ಗುರುಗಳಿಂದ ಅನುಜ್ಞೆಯನ್ನು ಪಡೆದು, ಶ್ರೀನಿವಾಸಾಚಾರ್ಯರು ಮನೆಗೆ ಮರಳಿ ಬಂದರು. ನರಸಪ್ಪನವರು ಪರಮಹರುಷ ಭರಿತರಾಗಿ ಶ್ರೀನಿವಾಸಾಚಾರ್ಯರಿಗೆ ಗ್ರಹಾಶ್ರಮವನ್ನು ಹಿಡಿಯಿಸಿದರು. ತರುಣಿ-ತಾರುಣ್ಯ, ವಿದ್ವತ್ತೆಗಳ ತ್ರಿವೇಣೀಸಂಗಮವಾಯಿತು. ಸಂಸಾರದ ಸುಖಧಾರೆಯು ಎಡೆಯಿಲ್ಲದೇ ಮುನ್ನಡೆಯಿತು. ವಂಶವೃಕ್ಷದ ಏಕಮೇವ ಆಧಾರರೂಪರಾದ ಶ್ರೀ ಶ್ರೀನಿವಾಸಾಚಾರ್ಯರ ಸಂಸಾರದ ತರಿಯು ಹುಮ್ಮಸದೊಡನೆ ಸಾಗಿತ್ತು. ಆದರೆ ವೇದಾಂತ ವಿದ್ಯಾವಿವೇಕವು ಮಾತ್ರ ಎಷ್ಟೂ ಕುಂದಲಿಲ್ಲ. ಅನವರತವಾಗಿ ಶತಶಃ ಶಿಷ್ಯರಿಗೆ ಪ್ರೌಢಪ್ರಬಂಧಗಳನ್ನು ಪಾಠ ಹೇಳುತ್ತ ಶ್ರೀಮಧ್ವಶಾಸ್ತ್ರ ಮಹಾಸಾಗರದ ತರಂಗಗಳನ್ನು ಚಂದ್ರಮನಂತೆ ಹೆಚ್ಚಿಗೆ ಉಕ್ಕೇರಿಸುತ್ತಿದ್ದರು. ಅಧ್ಯಾತ್ಮ ವಿದ್ಯಾಸುಧೆಯು ಪೂರ್ಣವಾಗಿ ಭಾಗೀರಥಿಯಂತೆ ಗಂಭೀರಸ್ವರೂಪದಿಂದ ಅವರ ಹೃದಯದಲ್ಲಿ ನೆಲೆಸಿ ನಿಂತಿತ್ತು. ಆದರೆ ಈ ಹರಿಕಥಾಮೃತ ಸುರನದಿಯು ಇಳೆಗೆ ಇಳಿಯುವದೆಂತು? ಎಂದು ಇಳೆಯ ಜಾಣರು ಕುತೂಹಲಿಗಳಾಗಿದ್ದರು.

ವ್ಯಾಸಸಾಹಿತ್ಯ ಸಮುದ್ರಗಳಲ್ಲಿರುವ ಮಹಾಮಹಾರತ್ನಗಳನ್ನು ಬಿಡಿ ಬಿಡಿಯಾಗಿ ಹೊರತೆಗೆದು, ಶ್ರೀ ವಿಜಯದಾಸವರೇಣ್ಯರು ಬಯಲಿಗೆ ತಂದಿಟ್ಟಿದ್ದರು; ಆದರೆ ಅವುಗಳನ್ನು ಸೂತ್ರದಲ್ಲಿ ಪೋಣಿಸಿ, ಹೆಣೆದು, ಮಾಲೆಯನ್ನು ಮಾಡುವ ಜಾಣನೊಬ್ಬನು ಧರೆಗೆ ದೊರೆಯದ ದರಿದ್ರಕಾಲವಾಗಿತ್ತು. ಸಮುದ್ರದಲ್ಲಿ ಮುಳುಗಿ ರತ್ನಗಳನ್ನು ಹೊರತೆಗೆಯುವವರಿಗೆ ನೆಲದ ಮೇಲಿರುವ ರತ್ನವು ಕಾಣದಿರುತ್ತದೆಯೇ? ಇದೊಂದು ಪಂಡಿತರತ್ನ; ಪ್ರಾರಬ್ಧದ ಗುಡಿಯಲ್ಲಿ ಹುದುಗಿಕೊಂಡಿರುವ ವಜ್ರಮಣಿ; ಎಂದು ಶ್ರೀ ವಿಜಯರಾಯರು ಈ ರತ್ನವನ್ನು ತಮ್ಮ ರತ್ನಗಳೊಡನೆ ಕೂಡಿಸಬೇಕೆಂಬ ಹರಿಯ ಆಜ್ಞೆಯಿಂದ

ಪ್ರೇರಿತರಾಗಿ ಶ್ರೀನಿವಾಸಾಚಾರ್ಯರಿರುವ ಗ್ರಾಮಕ್ಕೆ ಆಗಮಿಸಿದರು.

ಯೋಗ್ಯಗುರುಗಳಲ್ಲಿ ಓದಿರುವ ಯೋಗ್ಯ ಶಿಷ್ಯರುಗಳಿಗೆ ವಿದ್ಯೆಯು ಫಲಿಸುತ್ತದೆ. ಅವರಲ್ಲಿ ಕಾಮ, ಕ್ರೋಧ, ವಿಕಾರಗಳು ವಿದ್ಯೆಯ ಪ್ರಭಾವ ದಿಂದ ಕಡಿಮೆಯಾಗುವವು. ಇದು ಸಹಜವಾದರೂ ಮಹಾನುಭಾವರಿಗೂ ಸಹ ರಾಗದ್ವೇಷಗಳ ಕಲುಷವು ಹೃದಯದಲ್ಲಿ ನೆಲಸುವದುಂಟು. "ಪುಟ್ಟಿ ದಾರಭ್ಯ ಪರಮ ವೈಷ್ಣವಾಧ್ಯಕ್ಷರೆನಿಸಿ ಶಿಷ್ಟ ಸದಾಚಾರದಲ್ಲಿ ನಿರತರಾಗಿ" ಎಂದು ಶ್ರೀ ಶ್ರೀದವಿಠಲರು ಸ್ತುತಿಸಿದಂತೆ, ಶ್ರೀ ರಂಗವಲಿದ ನರಸಿಂಗದಾಸರ ಉದರದಲ್ಲಿ ಜನ್ಮವನ್ನು ತಾಳಿ, ಶ್ರೀ ವರದೇಂದ್ರ ಗುರುಗಳಲ್ಲಿ ವಿದ್ಯೋಪದೇಶ ವನ್ನು ಪಡೆದು, ಕಾಮ ಕ್ರೋಧಗಳನ್ನು ಜಯಿಸಿ, ಸುಧಾದಿ ಗ್ರಂಥಗಳನ್ನು ಪಾಠಹೇಳುವ ಈ ಶ್ರೀನಿವಾಸಾಚಾರ್ಯರಿಗೆ ಪಾಂಡಿತ್ಯ ಮದವಾಗಲೀ ತಾರುಣ್ಯದ ಮದದ ಉನ್ಮಾದವಾಗಲೀ ಇದ್ದಿಲ್ಲವೆಂಬುದನ್ನು ನಾವು ಗಮನಕ್ಕೆ ತಂದುಕೊಳ್ಳಬೇಕು. ಅದರಲ್ಲೂ ಸಾಧುಶಿಖಾಮಣಿಗಳಾದ ಶ್ರೀ ವಿಜಯ ದಾಸರಲ್ಲಿ ದ್ವೇಷ ಅಸೂಯೆಯಿಂದ ವರ್ತಿಸಿದರೆಂಬುದು ನಂಬುವದಕ್ಕೆ ಅರ್ಹ ವಾಗದ ಅಚ್ಚರಿಯ ಸಂಗತಿಯಾಗಿರುತ್ತದೆ. ಮೇಲಾಗಿ ಕೆಲವರಂತೂ ಮಠದ ದುಷ್ಟಪದ್ಧತಿಗಳೆಲ್ಲವು ಇನ್ನೂ ಶ್ರೀ ಜಗನ್ನಾಥದಾಸರನ್ನು ತೊಲಗಿ ಹೋಗಿರಲಿಲ್ಲವೆಂದೂ, ಅದರ ಪ್ರಭಾವದಿಂದ ದಾಸವರ್ಯರನ್ನು ಧಿಕ್ಕರಿಸಿದ ರೆಂದೂ ಬರೆದಿರುತ್ತಾರೆ, ಆದರೂ ಇದು ಸರಿಯೆನಿಸಲಾರದು. ಶ್ರೀವರದೇಂದ್ರ ರಂತಹ ಆದರ್ಶ ಲೋಕೋಚ್ಚ ಗುರುಗಳ ಸನ್ನಿಧಾನದಲ್ಲಿ ಇಂಥ ಡಂಭಾ ಚಾರಗಳಿಗೆ ಎಡೆಯೇ ಇರುವದಿಲ್ಲ. ಇಂದಿನ ಮಠದ ಪರಿಸ್ಥಿತಿಯನ್ನು ಕಂಡು ಹಿಂದಿನ ಮಠದ ಚಿತ್ರವನ್ನು ಊಹಿಸುವದು ಮೂಢತನ. ಆದುದರಿಂದ ಶ್ರೀ ವಿಜಯದಾಸರಲ್ಲಿ ಶ್ರೀನಿವಾಸಾಚಾರ್ಯರು ತೋರಿರುವ ಉದಾ ಸೀನತೆಯು ಕೇವಲ ಅವರ ಆತ್ಮೋದ್ಧಾರದ ವೈರಾಗ್ಯ ಸಾಧನಗಳ ಪರಿಪಾ ಕದ ಪ್ರಾದುರ್ಭಾವವನ್ನು ಮಾಡುವ ಒಂದು ಪಾರಬ್ಧಶೇಷವೆಂದು ಹೇಳ ಬೇಕು. ಹಾಗೆ ಅಪರಾಧವೇ ಖಂಡಿತವಿದ್ದರೆ ಎಷ್ಟು ಜನ್ಮ ಸೇವಾಮಾಡಿ ದ್ದರೂ ಶ್ರೀ ಭೃಗುಮುನಿಗಳಾದ ಶ್ರೀ ವಿಜಯದಾಸರ ತುಸು ಒಲುಮೆಯೂ ಆಗುತ್ತಿರಲಿಲ್ಲ. ಯಾದೃಚ್ಛಿಕವಾದ ಬಲವತ್ತರ ವಿಧಿಯಿಂದ ಒದಗಿ ಬಂದ ಶ್ರೀವಿಜಯದಾಸರಿಗೆ ದಯೆಯು ಉದಯಿಸುವ ಒಂದುಸುಂದರಸನ್ನಿವೇಶವೆಂದು



ತಿಳಿಯಬೇಕು. ಭಾರತ ಭಾಗವತ ಮುಂತಾದ ಪುರಾಣ ಶಾಸ್ತ್ರಗಳಲ್ಲಿ ಗುರು ಶಿಷ್ಯರಿಗೆ, ತಂದೆ-ಮಕ್ಕಳಿಗೆ, ಹಿರಿಯರು-ಕಿರಿಯರಿಗೆ, ಯಜಮಾನ-ಪುರೋ ಹಿತರಿಗೆ, ಅಳಿಯ-ಮಾವನಿಗೆ, ಯಾದೃಚ್ಛಿಕವಾಗಿ ವೈಮನಸ್ಯಗಳುಂಟಾಗಿ, ಮಹಾ ಮಹಾ ಲೋಕಹಿತಕರ ಕಾರ್ಯಗಳ ಅಭಿವ್ಯಕ್ತಿಯಾಗಿರುವದು ಅನೇಕ ದೃಷ್ಟಾಂತಗಳಿಂದ ವರ್ಣಿತವಾಗಿರುತ್ತವೆ.

ಆತ್ಮಾಹಂಕಾರವನ್ನು ತೆಗಳಿಕೊಳ್ಳುವದು ಜ್ಞಾನಿಗಳ ಸ್ವಭಾವವಾದುದ ರಿಂದ ಶ್ರೀ ಜಗನ್ನಾಥದಾಸರು ಪದಗಳಲ್ಲಿ ಶ್ರೀ ವಿಜಯದಾಸರನ್ನು ಹೊಗಳು ವಾಗ "ಅಹಂಕಾರದಿಂದ ಕೂಸೀ ಮಗ ದಾಸ! ಎಂದು ಬೈಯ್ದೆ" ಎಂದು ಮುಂತಾಗಿ ನುಡಿದಿರುತ್ತಾರೆ.

ಶ್ರೀ ವಿಜಯದಾಸರ ಕೃಪೆಯಾಗುವ ಕಾಲ. ಶ್ರೀ ವಿಜಯದಾಸರು ಶ್ರೀನಿವಾಸಾಚಾಯರಿಗೆ ಪ್ರಸಾದವನ್ನು ಸ್ವೀಕರಿಸಲು ಆಮಂತ್ರಿಸಿದರು. ದಾಸರ ಆಮಂತ್ರಣವು ಮಾನ್ಯವಿದ್ದರೂ ಯಾವದೋ ಅರಿಯದಂತಿರುವ ಅಜ್ಞಾನವು ಕವಿದು ಬಂದುದರಿಂದ ಹೊಟ್ಟೆ ಶೂಲಿಯೆಂದು, ಏನೋ ಒಂದು ನೆವದಿಂದಅದನ್ನ ತಿರಸ್ಕರಿಸಿದರು.ಹಿಂದೆಶಲ್ಯರಾಜರಾಗಿದುರ್ಯೋಧನನ.ದುರನ್ನ ವನ್ನು ಉಂಡದ್ದರಿಂದ, ಪ್ರಾರಬ್ಧದ ಬಲವತ್ತರ ಪ್ರಭಾವದಿಂದ ಅಭಿಮಾನವು ಕೂಡಲೇ ತಲೆಯೆತ್ತಿ, ಲಜ್ಜೆಯಿಂದ ಮುಖವನ್ನು ಕೆಳಗೆ ಮಾಡಿಸಿತು. ಮೂಢ ನಂತೆ ಬಿರುನುಡಿಗಳನ್ನು ನುಡಿಯಲು ನಾಲಿಗೆಯು ಅವಶವಾಗಿ ನಲಿದಾಡಿತು. ಶ್ರೀನಿವಾಸಾಚಾರ್ಯರ ಶುದ್ಧಶಾಸ್ತ್ರ ಜನಿತಜ್ಞಾನವು ಈ ಪ್ರಾರಬ್ಧದ ಎದುರು ನಿಲ್ಲದೇ ತಿರೋಹಿತವಾಗಿ ಹೋಯಿತು.

ಇಲ್ಲಿಂದ ಗುರುಶಿಷ್ಯರ ಮಹಿಮೋಪಬೃಂಹಕ ಇತಿಹಾಸಗಳ ಉಗಮ ವಾಯಿತು. ಶ್ರೀನಿವಾಸಾಚಾರ್ಯರಲ್ಲಿ ಆಧಿವ್ಯಾಧಿಗಳ ಸಂಚಾರದಿಂದ ಶರೀರ ದಲ್ಲಿ ಅಸ್ವಾಸ್ಥ್ಯವು ಬೇರೂರಿತು. ಶ್ರೀ "ಗುರುಗಳ ಅವಮಾನದ ಫಲವಿದು" ಎಂಬ ಸಭಯ ಭಕ್ತಿಯು ಶ್ರೀನಿವಾಸಾಚಾರ್ಯರ ಹೃದಯದಲ್ಲಿ ಮೂಡಿತು. ಕೂಡಲೇ ಶ್ರೀ ಮದ್ರಾಘವೇಂದ್ರ ತೀರ್ಥರ–ಶ್ರೀಮಂತ್ರಾಲಯ ನಿಲಯ ಶ್ರೀ ರಾಯರ ಅನುಗ್ರಹವನ್ನು ಪಡೆದು, ಅವರ ಪ್ರೇರಣೆಯಂತೆ ತಾಯಿಯೊಡನೆ ತಿರುಪತಿಗೆ ಬಂದು, ಅಲ್ಲಿರುವ ಶ್ರೀ ವಿಜಯದಾಸರಾಯರ ಅಡಿದಾವರೆಗಳಲ್ಲಿ ದಿಂಡುರುಕೆಗಳನ್ನು ಉರುಳಿದರು. "ವಜ್ರಾದಪಿ ಕಠೋರಾಣಿ ಮೃದೂನಿ

## ಶ್ರೀ ರಾಘವೇಂದ್ರ ಗುರುಸಾರ್ವಭೌಮರು



ಮೂಕೋಽಪಿ ಯತ್ಪ್ರಸಾದೇನ ಮುಕುಂದಶಯನಾಯತೇ ॥
ರಾಜರಾಜಾಯತೇ ರಿಕ್ತೋ ರಾಘವೇಂದ್ರಂ ತಮಾಶ್ರಯೇ ॥



ಕುಸುಮಾದಪಿ " ಎಂದು ಎಂಬಂತೆ ಕೋಮಲ ಮನಸ್ಸಿನ ಶ್ರೀವಿಜಯದಾಸವರ್ಯರ ಹೃದಯವು ಕರುಣಾ ರಸದಿಂದ ತೊಯ್ದು,ಪಂಡಿತರನ್ನು ಉದ್ಧರಿಸಲು ದಯಾರೂಪವಾಗಿ ಹರಿಯಹತ್ತಿತು. ಅಜ್ಞಾನ ನಿದ್ರೆಯಲ್ಲಿ ಪ್ರಜ್ಞೆಹೋಗಿ ಮಲಗಿರುವ ಶಿಷ್ಯರನ್ನು ಎಚ್ಚರಿಸುವದೇ ಸದ್ಗುರುಗಳ ಲಕ್ಷಣ. ಆದುದರಿಂದ ನಿಯತ ಗುರುಗಳ ದರ್ಶನ ಮಾಡಿಸಿ, ಅವರಿಂದ ಶ್ರೀನಿವಾಸಾಚಾರ್ಯರನ್ನು ಉದ್ಧರಿಸಬೇಕೆಂದು ಶ್ರೀ ದಾಸವರ್ಯರಿಗೆ ಕರುಣೆಯು ಮೂಡಿತು. ಶ್ರೀನಿವಾಸಾಚಾರ್ಯರ ನಿಯತ ಗುರುಗಳಾದ ಶ್ರೀಗಣೇಶಾಂಶ ಸಂಭೂತರಾದ ಶ್ರೀಗೋಪಾಲದಾಸರಾಯರ ಬಳಿಯಲ್ಲಿ ಉತ್ತನೂರಿಗೆ ಕಳುಹಿಸಿದರು. ಅದರಂತೆ ಶ್ರೀ ಗೋಪಾಲದಾಸರಾಯರಿಗೆ ಸ್ವಪ್ನದಿಂದ ಶಿಷ್ಯನ ಶರಣಾಗತಿಯನ್ನು ಸೂಚಿಸಿದರು.

ಗುರ್ವಾಜ್ಞೆಯನ್ನು ಮನ್ನಿಸಿ ಗೋಪಾಲದಾಸರು ಶ್ರೀನಿವಾಸಾಚಾರ್ಯರ ಬರುವನ್ನೇ ನಿರೀಕ್ಷಿಸುತ್ತಿದ್ದರು. ರೋಗಕ್ಕೆ ಸೋತು ಸೊರಗಿ ತಾಯಿಯೊಡನೆ ಬರುವ ಶ್ರೀನಿವಾಸಾಚಾರ್ಯರ ಕನಿಕರ ಸ್ವರೂಪವು ಸ್ವಾಪ್ನನಿದರ್ಶನದಂತೆ ಶ್ರೀ ಗೋಪಾಲದಾಸರಾಯರಿಗೆ ದೃಗ್ಗೋಚರವಾಯಿತು. ಶ್ರೀ ಗುರುಗಳ ಪಾದಪದ್ಮವನ್ನು ಅನುಸ್ಮರಿಸಿ, ಶ್ರೀ ಗೋಪಾಲದಾಸರು ಶ್ರೀನಿವಾಸಾಚಾರ್ಯರನ್ನು ಅಂತಃಕರಣದಿಂದ ಬರಮಾಡಿಕೊಂಡು, ಉತ್ತನೂರಿನ ತಮ್ಮ ಮನೆಯಲ್ಲಿ ಇಳಿಸಿಕೊಂಡು, ಮೊದಲು ತುಂಗ-ಭದ್ರಾ ನದಿಯಲ್ಲಿ ಸ್ನಾನಮಾಡಿಸಿದರು. ತೀರ್ಥ ವಿಧಾನದಿಂದ ಅವರ ಪಾಪವನ್ನು ಪರಿಹರಿಸಿ, ದೇಹ ಶುದ್ಧಿಯನ್ನು ಮಾಡಿಸಿದರು. ಅನಂತರ ರೋಗಪರಿಹಾರವಾಗಲೆಂದು ಶ್ರೀಧನ್ವಂತರಿ ನಾಮಕನನ್ನು ದಿಸದಂತೆ ಶ್ರೀ ಬಿಂಬನಲ್ಲಿ ಧ್ಯಾನಿಸಿ, ಒಂದು ಜೋಳದ ರೊಟ್ಟಿಯನ್ನು ನೈವೇದ್ಯದಿಂದ ಸಮರ್ಪಿಸಿದರು. ನಿವೇದನ ಮುಂತಾದ ಪೂಜಾ ವಿಧಾನವು ಮುಗಿದನಂತರ, ಶ್ರೀನಿವಾಸಾಚಾರ್ಯರನ್ನು ಕರೆದು, ತೀರ್ಥವನ್ನು ಕೊಟ್ಟು, "ಇದು ಈ ರೋಗಕ್ಕೆ ಪರಮಪಥ್ಯ ಆಹಾರ, ಇದನ್ನು ಸೇವಿಸಿರಿ" ಎಂದು ಹೇಳಿ, ಅದನ್ನು ಧನ್ವಂತರಿ ಮಂತ್ರದಿಂದ ಅಭಿಮಂತ್ರಿಸಿ, ಕೊಟ್ಟರು. ಅನಂತರ ತಾವು ಶ್ರೀ ಧನ್ವಂತರಿಯನ್ನು ಕಣ್ಣಾರೆ ಕಂಡು, ಬಿಗಿದ ಕಂಠದಿಂದ ಭಕ್ತಿಯ ಭರದಲ್ಲಿ ಈ ಹಾಡಿನಿಂದ ಬೇಡಿಕೊಂಡಿರುತ್ತಾರೆ.

ಶ್ರೀ ವಿಜಯದಾಸರು.   ಶ್ರೀ ವೆಂಕಟೇಶ.   ಶ್ರೀನಿವಾಸಾಚಾರ್ಯರು.

ಕುಂಡಲಾಗಿರಿಯಲ್ಲಿ-ವಿಪ್ರನು ಕಂಡು ವಿಜಯರಾಯರಾ ॥ ದಂಡನಮನವ ಮಾಡಿದ



ಶ್ರೀ ಗೋಪಾಲವಿಠಲರು ಶ್ರೀ ಜಗನ್ನಾಥದಾಸರ ಕ್ಷಯರೋಗ ಕಳೆಯಲು ಶ್ರೀ ಧನ್ವಂತರಿ ದೇವರ ಸ್ತೋತ್ರಗೈದು, ಕೆಂಜೋಳದ ರೊಟ್ಟಿ ಅಭಿಮಂತ್ರಿಸಿ ಕೊಟ್ಟು, ಶ್ರೀಜಗನ್ನಾಥದಾಸರಿಗೆ ೪೦ ವರ್ಷ ಆಯುಃ ಪ್ರದಾನ ಮಾಡಿದ ಸ್ತೋತ್ರ—

ಪದ ರಾಗ– ಕಲ್ಯಾಣಿ ಝಂಪಿತಾಳ

ಎನ್ನ ಬಿನ್ನಪಕೇಳು ಧನ್ವಂತ್ರಿ ದಯಮಾಡು ।
ಸಣ್ಣವನು ಇವ ಕೇವಲ ॥
ಬನ್ನಬಡಿಸುವ ರೋಗವನ್ನು ಮೋಚನ ಮಾಡಿ ।
ಚನ್ನಾಗಿ ಪಾಲಿಸುವದು ಸ್ವಾಮಿ ॥ ಪಲ್ಲ ॥
ಆರೋಗ್ಯ ಆಯುಷ್ಯ ಐಶ್ವರ್ಯ ಎಂಬ ಈ ।
ಮೂರು ವಿಧ ವಸ್ತುಂಗಳು ।
ನಾರಾಯಣನ ಭಜಕರಾದವರ ಸಾಧನಕೆ । ಪೂರಣವಾಗಿಪ್ಪವೂ ।
ಘೋರ ವ್ಯಭಿಚಾರ ಪರನಿಂದ್ಯೆಪರವಿತ್ತಅಪ ।
ಹಾರಮಾಡಿದ ದೋಷದಿ ।
ದಾರಿದ್ರರಾಗುವರು ಮೂರು ವಿಧದಿಂದಲಿ ।
ಕಾರಣನು ನೀನೆ ದುಷ್ಕರ್ಮ ಪರಿಹರಿಸುವದು ॥ ೧ ॥
ವಸುಮತಿಯ ಮೇಲಿನ್ನು ಅಸುರ ಜನರೇ ಬಹಳ ।
ವಶವಲ್ಲ ಕಲಿಯ ಬಾಧೆ ।
ಬಿಸಲಿಂದ ಪೀಡಿತವಾದ ಸಸಿಗಳಂತೆ ।ಶಿಶುಗಳು ನಾವಿಪ್ಪವೊ ॥
ಅಸುರಾರಿ ನಿನ್ನ ಕರುಣಾಮೃತದ ಮಳೆಗರೆದು ।
ಕುಶಲದಲಿ ಪಾಲಿಸುವದು ॥
ಕೆಸರಿಂದ ಕೆಸರು ತೊಳೆದಂತೆ ಕರ್ಮದ ಪಥವು ।
ಅಸುನಾಥ ಹರಿಯೆ ಪೊರೆಯೊ ಸ್ವಾಮಿ ॥ ೨ ॥
ಅನ್ಯರನ ಭಜಿಸದಲೆ ನಿನ್ನನೇ ತುತಿಸುತ್ತ ।
ನಿನ್ನ ಚಿನ್ಹಗಳ ಧರಿಸೀ ।
ನಿನ್ನವರವನು ಯೆನಿಸಿ ನಿನ್ನ ನಾಮೋಚ್ಚರಿಸಿ ।
ನಿನ್ನಿಂದ ಉಪಜೀವಿಸಿ ॥

ಅನ್ನ ಆರೋಗ್ಯ ಅಲ್ಪವು ಆಗಿ ಪರರಿಗೆ ।
ಇನ್ನು ಅಲ್ಪರಿಯಬೇಕೇ ।
ನಿನ್ನ ಸಂಕಲ್ಪ ಭಕ್ತರ ಪೋಷಕನೆಂಬ ।
ಘನ್ನ ಬಿರಿದಿನ್ನು ಉಳಹೋ ಸಲಹೋ ॥ ೩ ॥
ಆಧಿವ್ಯಾಧಿಗಳು ಉನ್ಮಾದ ವಿಭ್ರಮ ನಾನಾ ।
ಬಾಧೆಗೌಷಧವು ನೀನೆ ।
**ಈದಾವ ನಿನ್ನ ಕರದಲಿ ಕಲಶ ಸುಧೆಯೆರೆದು ।**
ಸಾಧುಗಳ ಸಂತೈಸುವಿ ॥
ಮೋದಬಡಿಸುವಿ ನಿನ್ನ ಸಾಧಿಸುವರಿಗೆ ಶು ।
ಭೋದಯಗಳ ನೀವಿ ।
ಆದರಿಸಿ ಇವಗೆ ತವ ಪಾದ ಧ್ಯಾನವನಿತ್ತು ।
ಸಾಧುಗಳೊಳು ನಿಲಿಸಿ ಮೋದ ಕೊಡು ಸರ್ವದ ॥ ೪ ॥
ನಿನ್ನವರಲ್ಲಿವಗೆ ಇನ್ನು ರತಿಯನೆ ಕಂಡು ।
ನಿನ್ನವನೆಂದು ಅರಿದು ।
ನಿನ್ನ ನಾ ಪ್ರಾರ್ಥಿಸಿದೆ ಅನ್ಯರಿಗೆ ಅಲ್ಪರಿಯೆ ।
ಎನ್ನ ಪಾಲಿಸುವ ಧೊರೆಯೆ ॥
ಎನ್ನ ಮಾತಲ್ಲವಿದು ಎನ್ನ ಹಿರಿಯರ ಮಾತು ।
ಮನ್ನಿಸಾ ಬೇಕು ಕರುಣೀ ।
ಅನಂತ ಗುಣ ಪೂರ್ಣ ಗೋಪಾಲ ವಿಠಲ ।
ಇನ್ನಿದನೆ ಲಾಲಿಸುವದು ಸ್ವಾಮಿ ॥ ೫ ॥

"ಈದಾವ ನಿನ್ನ ಕರದಲಿ ಕಲಶಸುಧೆಯೆರೆದು" ಎಂಬಲ್ಲಿ "ಈ ಎಂಬ" ಪ್ರಾತ್ಯಕ್ಷಿಕ ನಿದರ್ಶನದಿಂದ ಧನ್ವಂತರಿಯನ್ನು ಕಣ್ಣಾರೆ ಕಂಡು ಹಾಡಿರುತ್ತಾರೆ.

"ನಿನ್ನವರಲ್ಲಿಗೆ ಇನ್ನು ರತಿಯನು ಕಂಡು" ।

ಎಂಬ ಮಾತಿನಿಂದ ಶ್ರೀನಿವಾಸಾಚಾರ್ಯರಲ್ಲಿ ಬಹುಕಾಲದಿಂದ ಅರಿಯದೇ ಇರುವಂತೆ ನೆಲಸಿ ಬಂದಿರುವ ಮಹನ್ನಿಂದಾಭಿವ್ಯಂಜಕ ಪ್ರಾರಬ್ಧವನ್ನು ಕಳೆದು, ಭಗವದ್ಭಕ್ತರುಗಳಲ್ಲಿ ನಿರ್ವ್ಯಾಜ ದೃಢಭಕ್ತಿಯನ್ನು ಮಾ ಡು ವ

ಶ್ರೀ ಧನ್ವಂತರಿನಾಮಕ ಹರಿ
ಗೋಪಾಲದಾಸರು, ಶ್ರೀನಿವಾಸಾಚಾರ್ಯರಿಗೆ
ಜೋಳದರೊಟ್ಟಿ ಪ್ರದಾನ ಮಾಡುವದು.



ಎನ್ನ ಬಿನ್ನಪಕೇಳೋ ಧನ್ವಂತ್ರಿ ದಯಮಾಡೋ ಸಣ್ಣವನು ಇವ ಕೇವಲ
ಬನ್ನ ಬಡಿಸುವ ರೋಗವನ್ನೆ ಮೋಚನಮಾಡು.

ನಿರ್ಮಾಯವಾದ ಭಗವದನುವೃತ್ತಿಯನ್ನು ಕರುಣಿಸಬೇಕೆಂದು ಬೇಡಿಕೊಂಡಿರುತ್ತಾರೆ. ಶ್ರೀ ಗೋಪಾಲದಾಸರಾಯರ ಪರಮಾನುಗ್ರಹದ ವಿಶಿಷ್ಟತರಹವಿದು. ಶ್ರೀ ವಿಜಯದಾಸರ ಸ್ತುತಿಗರ್ಭಿತವಾಗಿಯೇ ಶ್ರೀ ಧನ್ವಂತರಿಯಲ್ಲಿ ಗೋಪಾಲದಾಸರು ಸ್ತುತಿಸಿರುತ್ತಾರೆ. "ಎನ್ನ ಮಾತಲ್ಲವಿದು, ಎನ್ನ ಹಿರಿಯರ ಮಾತು ಮನ್ನಿಸಬೇಕೋ ಕರುಣೀ !" ಎಂದು ಹಾಡಿ ಬೇಡುವಾಗ ಈ ಭಾವವನ್ನು ಸ್ಫುಟಪಡಿಸಿರುತ್ತಾರೆ.

"ಘೋರವ್ಯಾಧಿಗಳ ನೋಡಿ । ವಿಜಯರಾಯ। ಭೂರಿಕರುಣವ ಮಾಡಿ। ತೋರಿದವರೆ ಉದ್ಧಾರಕರೆಂದದಿ । ನಾರಭ್ಯದಿಂದಲಿ ಸೇರಿದೆ ತವಪಾದ ॥" ಎಂದು ಶ್ರೀ ಜಗನ್ನಾಥದಾಸರು ಗೋಪಾಲದಾಸರಾಯರ ಸ್ತುತಿಪದದಲ್ಲಿ ಹೊಗಳಿರುತ್ತಾರೆ.

ಹೀಗೆ ಗೋಪಾಲದಾಸರಾಯರ ಅನುಗ್ರಹದಿಂದ ಶ್ರೀನಿವಾಸಾಚಾರ್ಯರ ಘೋರವ್ಯಾಧಿಯು ಮಾಯವಾಯಿತು. ಉದಾರ ಹೃದಯದ ಶ್ರೀನಿವಾಸಾಚಾರ್ಯರ ಮನಸ್ಸು ಪಾಚೆಯಿಲ್ಲದ ಸ್ವಚ್ಛನೀರಿನಂತೆ ನಿರ್ಮಲವಾಯಿತು. ಹೊಸ ಪುರುಷರಂತೆ ಮನಃಪರಿವರ್ತನೆಯಾಯಿತು. ದಾಸಜನರ ಪಾದಧೂಳಿಯಲ್ಲಿ ಹೊರಳಾಡುವ ವಿನಮ್ರ ನಯವಂತರಾದರು.

ಗಾಳಿ ಬಿಸಿಲುಗಳಿಂದ ರಸಪರಿಪಾಕವನ್ನುಪಡೆದ ಸ್ವಭಾವ ಮಧುರವಾದ ಹಣ್ಣಿನಂತೆ ಶ್ರೀನಿವಾಸಾಚಾರ್ಯರ ಮನಸ್ಸು ಪಕ್ವವಾಯಿತು. ಪುಟಕ್ಕೆ ಹಾಕಿ ತೆಗೆದ ಸುವರ್ಣದಂತೆ ಮತಿಯು ಪರಿಶುದ್ಧವಾಯಿತು. ಹೆಚ್ಚಿಗೆ ವಿಸ್ತರಿಸುವದೇನು ? ಶ್ರೀಗೋಪಾಲದಾಸರಾಯರ ಒಲುಮೆಯಿಂದ ನೂತನ ಶುಭೋದಯವಾಯಿತು.

ಕ್ಷಯರೋಗವು ನಿರ್ಮೂಲವಾಗಿ ನಾಶವಾಯಿತು.ಆದರೆ ಶ್ರೀಗೋಪಾಲದಾಸರಾಯರು ಮಾತ್ರ ಅನುಗ್ರಹಿಸಲು ಇನ್ನೂ ನಿವೃತ್ತರಾಗಲಿಲ್ಲ; ಶ್ರೀವಿಜಯರಾಯರ ಆದೇಶಮಂತ್ರದ ರಹಸ್ಯವನ್ನು ಅರಿತ ಶ್ರೀಗೋಪಾಲದಾಸರು ಶ್ರೀನಿವಾಸಾಚಾರ್ಯರ ಇಹಲೋಕದ ಅವಧಿಯನ್ನು ನಿರ್ಣಯಿಸುವ ಆಯುಷ್ಯರೇಖೆಯನ್ನು ಓದಿದರು. ಗುರುಗಳ ಆಜ್ಞೆಯಿಂದ ಮಾಡಿದ ಮಹತ್ಕಾರ್ಯಕ್ಕೆ ಕ್ಷಣಿಕ ಫಲವಿರದೆ ಶಾಶ್ವತ ಫಲೋದಯವಿರುದದೆಂದು ತಿಳಿಸಲು,ಶ್ರೀಗೋಪಾಲದಾಸರು ತಮ್ಮ ಆಯುಷ್ಯದ ಶೇಷಭಾಗವನ್ನು ೪೦ (ವರ್ಷ) ಶ್ರೀನಿವಾಸಾ



ಚಾರ್ಯರಿಗೆ ಧಾರೆಯೆರೆದು ದಾನರೂಪದಿಂದ ಅನುಗ್ರಹಿಸಿದರು. ಯಾಕೆ? ಶ್ರೀ ವಿಜಯರಾಯರ ಅನುಗ್ರಹದಿಂದ ಈ ಶ್ರೀನಿವಾಸ ಸುಧಾಕರನು ಸಂಸಾರ ತಾಪದಿಂದ ಸಂತಪ್ತರಾದ ಸುಜನರಿಗೆ ಹರಿಕಥಾಮೃತವನ್ನು ಸುರಿಸಲಿಕ್ಕಲ್ಲವೇ?

"ಅಪಮೃತ್ಯುವಿನ ಪೊರೆದೆ॥ ಎನ್ನೊಳಗಿದ್ದ ಅಪರಾಧವ ಮರೆದೆ"॥ಎಂದು ಶ್ರೀ ಜಗನ್ನಾಥದಾಸರೇ ಗೋಪಾಲದಾಸರಾಯರನ್ನು ಕೊಂಡಾಡಿರುತ್ತಾರೆ. "ಎನ್ನೊಳಗಿದ್ದ ಅಪರಾಧ" ಎಂಬ ಪದದಿಂದ ತಾವು ಮಾಡಿದ ಶ್ರೀ ವಿಜಯಾರ್ಯರ ತೆಗಳುವಿಕೆಯನ್ನು ಸೂಚಿಸಿ, ಆದರಿಂದ ತಮ್ಮ ಆಯುಷ್ಯ ಕ್ಷೀಣವಾಯ್ತೆಂದು ತೋರಿಸಿಕೊಟ್ಟಿರುತ್ತಾರೆ. ಮತ್ತು ಇದರಿಂದ ಕ್ಷಯರೋಗವನ್ನು ಪರಿಹರಿಸುವಾಗಲೇ ಅಪಮೃತ್ಯುವಿನ ಪರಿಹಾರವೆಂಬುದು ಸ್ಪಷ್ಟವಾಗಿ ತೋರುತ್ತದೆ.

"ಕುಂಡಲಾಗಿರಿಯಲ್ಲಿ ವಿಪ್ರನು । ಕಂಡು । ವಿಜಯರಾಯರಾ। ದಂಡನಮನವ ಮಾಡಿ ಕೇಳ್ದನು । ದ್ದಂಡ ಕ್ಷಯರೋಗವ ಕಳೆ ತ್ವರಾ ॥ ೧ ॥
ಹರುಷದಿಂದುತ್ತನೂರು ಸೇರಲು । ಪರಿಹರಾಗುವದೆಂದನು ॥
ಬರಲು ಶಕ್ರಿಯ ಒಳಗೆ ನಾಲ್ವತ್ತು । ವರುಷ ಆಯುವನಿತ್ತನು ॥
ಭಜಿಸಿ ಬದುಕಿರೋ ಅಜನಪಿತ ಶ್ರೀ ವಿಜಯವಿಠ್ಠಲರಾಯನಾ ॥
ಭಜನ ಮಾಡುವ ವಿಜಯರಾಯರೆ ನಿಜಗುರುಗಳೆಂದೆನಿಪನು"॥ಪಲ್ಲ॥

## ಶ್ರೀ ಶ್ರೀ ತಂದೆ ಗೋಪಾಲ ವಿಠ್ಠಲರು

(ಶ್ರೀ ಗೋಪಾಲದಾಸರ ತಮ್ಮಂದಿರೂ ಅಪರೋಕ್ಷ ಜ್ಞಾನಿಗಳೂ ಆದ ಶ್ರೀ ರಂಗಪ್ಪದಾಸರು.)

ನಮ್ಮ **ಯೋಗಸಾಧನ** ಮುಂತಾದವುಗಳು ಅದ್ಭುತನಾಗಿರುತ್ತವೆ. ಇಂದಿನ ಅಸಂಸ್ಕೃತ ಪಾಶವೀ ವಾತಾವರಣದಲ್ಲಿ ಸ್ವೈರವಾಗಿ ವಿಹರಿಸುವ ನಮಗೆ ಶ್ರೀ ಗೋಪಾಲದಾಸರಾಯರ ಆಯುಷ್ಯದಾನವು ನಂಬಲಾಗದ ಕಂತೆಯ ಕತೆಯೆಂದು ಅನಿಸಬಹುದು. ಆದರೆ ಈ ಆಯುಷ್ಯ ದಾನದ ಬಗೆಯನ್ನು ತಿಳಿಯಲೂ ಸಹ ನಾವು ಸಮರ್ಥರಲ್ಲ; ಅಷ್ಟೂ ಸಹ ತಿಳಿಯುವಷ್ಟು ನುರಿತವರಲ್ಲವೆಂದು ವಿಷಾದಿಸುತ್ತೇವೆ. ನಮ್ಮ ಪ್ರಾಚೀನ ಸಂಸ್ಕೃತಿಯ ಚರಿತ್ರದ ಪುಟಗಳನ್ನು ತಿರುವಿ ನೋಡುತ್ತ ಹೋದರೆ ಇಂಥ ಸಂಗತಿಗಳು ಮನಸ್ಸಿಗೆ ತೃಪ್ತಿಯಾಗುವಷ್ಟು .ಕಣ್ಣುಮುಂದೆ ಕುಣಿದಾಡುತ್ತವೆ. ಯಯಾತಿಯ

ಮುಪ್ಪನ್ನು ಪೂರು ಮಹಾರಾಜನು ಸ್ವೀಕರಿಸಿದ್ದು ಸಾಮಾನ್ಯವೇ! ಭೀಷ್ಮ ಶತ್ರುವಾದ ಶಿಖಂಡಿಗೆ ಗಂಧರ್ವನೊಬ್ಬನು ತನ್ನ ಪುಂಸ್ತ್ವವನ್ನು ಕೊಡಲಿಲ್ಲವೇ! ಇನ್ನೂ ಎಷ್ಟೋ ಸಂಗತಿಗಳನ್ನು ಕಾಣಬಹುದು. ಭಗವಂತನನ್ನು ಅಪರೋಕ್ಷೀಕರಿಸುವ ವಿಜ್ಞಾನಿಗಳಿಗೆ, ಮಹಾ ಮಹಾ ದೇವಾಂಶ ಸಂಭೂತರಾದ ಮಹಾಪುರುಷರಿಗೆ ಅಸಾಧ್ಯವಾದುದು ಯಾವದು ? ಇದು ಅವರ ಅದ್ಭುತ ಶಕ್ತಿ. ದಧೀಚಿಯು ತನ್ನ ಅಸ್ತಿಗಳನ್ನು ದೇವೇಂದ್ರನಿಗೆ ದಾನ ಕೊಟ್ಟಂತೆ, ಪ್ರಹ್ಲಾದನುಶೀಲವನ್ನು ಇಂದ್ರನಿಗೆ ದಾನವಾಗಿ ಕೊಟ್ಟಂತೆ, ಕರ್ಣನು ತನ್ನ ಶರೀರದೊಡನೆ ಹುಟ್ಟುವಾಗಲೇ ಇದ್ದ ಕವಚ ಕರ್ಣ ಕುಂಡಲಗಳನ್ನು ಇಂದ್ರನಿಗೆ ಕೊಟ್ಟಂತೆ, ಶ್ರೀ ಗೋಪಾಲ ದಾಸರು ಶ್ರೀ ಜಗನ್ನಾಥದಾಸರಾಯರಿಗೆ ಕೊಟ್ಟರೆಂಬುದು ಇತಿಹಾಸ ಮುಂತಾದವುಗಳನ್ನು ಓದಿ ವಿಮರ್ಶಿಸುವವರಿಗೆ ಅಷ್ಟೊಂದು ಹೊಸದೆನಿಸುವದಿಲ್ಲ. ಹೀಗೆಯೇ ಋಷಿಗಳು ತಮ್ಮಪುಣ್ಯವನ್ನು ಇನ್ನೊಬ್ಬರಿಗೂ ಕೊಡುವ, ಅವರ ಧರ್ಮಗಳನ್ನುತಾವೂ ಸ್ವೀಕರಿಸಿರುವ ಚರಿತ್ರಗಳೂ ಸಾಕಷ್ಟು ಸಿಗುತ್ತವೆ. ಆದುದರಿಂದ ಈ ಚರಿತ್ರವು ಕೇವಲ ಕಟ್ಟುಕಥೆಯಲ್ಲ; ವೇದಶಾಸ್ತ್ರದ ತಳಹದಿಯಲ್ಲಿ ಶಾಸ್ತ್ರಬಂಧದಲ್ಲಿ ಕಟ್ಟಲಾಗಿರುವ ಶ್ರೀಹರಿಕಥಾಮಂದಿರವೆಂದು ನಿಶ್ಶಂಕವಾಗಿ ಹೇಳಬಹುದು.

ಹೀಗೆ ಶ್ರೀಮನ್ಮಂತ್ರಾಲಯ ಶ್ರೀಪಾದಂಗಳವರ ಅನುಗ್ರಹದಿಂದ, ತಿರುಪತಿಯ ವೆಂಕಟೇಶನ ಸಂದರ್ಶನವನ್ನು ಪಡೆದ ಶ್ರೀ ಶ್ರೀನಿವಾಸಾಚಾರ್ಯರು ಶ್ರೀವಿಜಯರಾಯರ ಒಲುಮೆಯನ್ನು ಪ ಡೆ ದು, ಅವರ ಆಜ್ಞೆಯಂತೆ ಶ್ರೀ ಗೋಪಾಲದಾಸರಾಯರಿಂದ ವ್ಯಾಧಿಯನ್ನು ಕಳೆದುಕೊಂಡು, ಅಪಮೃತ್ಯುವನ್ನು ನೀಗಿಸಿಕೊಂಡು, ಆಯುಷ್ಯವನ್ನು ಪಡೆದುಕೊಂಡರು.

ಆದರೆ ಮುಂದೇನು ? ಎಂದು ಶ್ರೀನಿವಾಸಾಚಾರ್ಯರು ಯೋಚಿಸತೊಡಗಿದರು. ಯಾರಿಗೋಸ್ಕರ ಈ ಜೀವನ ? ಎಂದು ಮುಂತಾದ ವಿಚಾರಗಳು ಮನಸ್ಸಿನಲ್ಲಿ ತಳಮಳಿಸಹತ್ತಿದವು. ತಂದೆಯಂತೆ ಪ್ರಾಣದಾಯಕರಾದ ಶ್ರೀ ಗೋಪಾಲದಾಸರು ವಿಜಯರಾಯರ ಸಂಕೇತದಂತೆ ಪಂಢರಪುರಕ್ಕೆ ಆಚಾರ್ಯರನ್ನು ಕಳಿಸಿದರು. ಅಂಕಿತವು ಗುರುಗಳ ಕೃಪಾರೂಪವಾಗಿ ಬರಬೇಕಾದುದು; ಆದರೂ ಶ್ರೀ ವಿಠಲಮೂರ್ತಿಯಿಂದ ಸಾಕ್ಷಾತ್ತಾಗಿ ಅಂಕಿತ ಸಿಗಬೇಕೆಂಬ ಧೋರಣೆಯಿಂದ ಶ್ರೀನಿವಾಸಾಚಾರ್ಯರಿಗೆ " ಪಂಢರಪುರದ

ಪಂಢರಪುರದಲ್ಲಿ ಚಂದ್ರಭಾಗದ ಶ್ರೀಪಾಂಡುರಂಗನಿಂದ ದಾಸರಿಗೆ ಪ್ರತ್ಯಕ್ಷವಾಗಿ ಅಂಕಿತ ಶಿಲಾ ಪ್ರದಾನ.




ಎಂದೂ। ಕಾಂಬೆನು ಪಾಂಡುರಂಗ ಮೂರುತಿಯಾ

ಇಂದು ಭಾಗ ನಿವಾಸ ನರನಾ ಸಾರಥಿಯಾ ||

ಭೀಮರಥಿಯಲ್ಲಿ ಮುಳುಗಿ ಮಿಂದುವಾಗ ಶ್ರೀ ವಿಠಲನು ಅಂಕಿತಕೊಡುವನು" ಎಂದು ಅಪ್ಪಣೆಯಿತ್ತು ಕಳುಹಿದರು. ಶ್ರೀನಿವಾಸಾಚಾರ್ಯರು ಆತುರರಾಗಿ ಪಂಢರಪುರಕ್ಕೆ ಬಂದರು. ದಾಸ ಜನರ ಮನದಭೀಷ್ಟಗಳನ್ನು ಪೂರೈಸಲು ಟೊಂಕಕಟ್ಟಿ ನಿಂತಿರುವ ಶ್ರೀವಿಠ್ಠಲನ ಪವಿತ್ರ ಕ್ಷೇತ್ರಕ್ಕೆ ಪಾದಚಾರಿಗಳಾಗಿ ಹೊರಟರು.

ಶ್ರೀ ವಿಠ್ಠಲನ ಸಂದರ್ಶನವನ್ನು ಹಂಬಲಿಸಿ ಆಚಾರ್ಯರು ಭೀಮರಥಿ ನದಿಗೆ ಧಾವಿಸಿದರು. ಆ ಕ್ಷೇತ್ರ ಸಂದರ್ಶನದೊಡನೆಯೇ ಈ ಕ್ಷೇತ್ರ ಸಂದರ್ಶನವಾಗಹತ್ತಿತು. ಭೀಮರಥಿಯಲ್ಲಿ ಮಿಂದು ಶ್ರೀನಿವಾಸಾಚಾರ್ಯರು ತಮ್ಮ ಮಾನಸ ತೀರ್ಥದಲ್ಲಿ ಮುಳುಗಿ ಧ್ಯಾನತರಂಗಗಳಲ್ಲಿ ನಲಿದಾಡಹತ್ತಿದರು. ವಿಠ್ಠಲನ ಮೂರ್ತಿಯುನ್ನು ಹೊರಗೆ ನೋಡಲು ಹವಣಿಸುವ ಆಚಾರ್ಯರ ಕಣ್ಣುಗಳು ಒಳಗೇ ಅಂತರ್ಮುಖವಾದವು. ಜ್ಞಾನಸೂರ್ಯನ ಕಿರಣಗಳಲ್ಲಿ ಹೃದಯ ಕಮಲದ ವಿಕಾಸವಾಗಿ ಕೋಟಿಭಾನುವಿನ ಕಾಂತಿಯನ್ನು ಕುಂದಿಸುವ ಶ್ರೀ ವಿಠ್ಠಲಮೂರುತಿಯು ಅಂತರಂಗದ ಕಣ್ಣುಗಳ ಮುಂದೆ ನಲಿದಾಡಹತ್ತಿತು.

"ಬಹುಕಾಲದ ಹಳೆಯ ಗೆಳೆಯನು ನಾನು; ನಿನ್ನನ್ನು ಬಿಟ್ಟಗಲುವದಿಲ್ಲ;" ಎಂದು ಆಶ್ವಾಸನವನ್ನಿಟ್ಟು ನಡುಮಧ್ಯದಲ್ಲಿ ಕೈಯಿಟ್ಟು ನಿಂತಿರುವ ಶ್ರೀವಿಠ್ಠಲ ಮೂರುತಿಯ ಚರಣಗಳಲ್ಲಿ ತಲೆಯಿಟ್ಟು ಗಟ್ಟಿಯಾಗಿ ಹಿಡಿದು, "ಎಂದೂ ಕಾಂಬೆನು ಪಾಂಡುರಂಗ ಮೂರುತಿಯ" ಎಂದು ಸಾರಿಸಾರಿ ಹಾಡಹತ್ತಿದರು. ನಾರದರಿಗೆ ಆದ ನಾರಾಯಣನ ದರ್ಶನದಂತೆ ಶ್ರೀ ವಿಠ್ಠಲಮೂರುತಿಯ ಸಂದರ್ಶನವು ಮಿಂಚಿನಂತೆ ಪುನಃ ಮಾಯವಾಯಿತು. ಆಚಾರ್ಯರು "ನಡುನೀರಿನಲ್ಲಿ ಮುಳುಗುವ ನನ್ನ ಕೈಹಿಡಿ! ಬಿಡಬೇಡ" ಎಂದು ಕೈಚಾಚಿ ಆರ್ತರಾಗಿ ಬೇಡಿಕೊಳ್ಳುತ್ತಿರಲು ಅವರ ಕೈಯಲ್ಲಿ ವಿಠ್ಠಲನು ಅಂಕಿತಶಿಲಾ ರೂಪದಿಂದ ಸಿಕ್ಕಿಕೊಂಡನು. ಧ್ಯಾನದೃಷ್ಟಿಯಲ್ಲಿ ಹೊಳೆದಿರುವ ಶ್ರೀ ವಿಠ್ಠಲನನ್ನು ಹೊರಗೆ ನೋಡಲು ಉತ್ಕಂಠರಾಗಿ, ಹಾತೊರೆಯುತ್ತಿರುವ ಹೃದಯದಿಂದ ಹಾಡುತ್ತಲೇ ಅಂಕಿತಶಿಲೆಯನ್ನು ತಲೆಯಮೇಲಿಟ್ಟು ವಿಠ್ಠಲನ ದೇವಾಲಯದ ಕಡೆಗೆ ಧಾವಿಸಿದರು.

ಶ್ರೀವಿಠ್ಠಲನೇ ಸ್ವಪ್ನದಲ್ಲಿ ಶ್ರೀವ್ಯಾಸರಾಜರ ಶ್ರೀ ಪುರಂದರದಾಸರ ದ್ವಾರಾಹರಿಕಥಾಮೃತಸಾರ ರಚಿಸಲು ಜಗನ್ನಾಥದಾಸರಿಗೆಪ್ರೇರಿಸಿದ್ದು



ವ್ಯಾಸತೀರ್ಥರೊಲುಮೆಯೋ ವಿಠಲೋಪಾಸಕ
ಪುರಂದರದಾಸರ ದಯವೋ

ಭಕ್ತಿಯ ಭಾರದಲ್ಲಿ ಆತುರದ ಹೃದಯದಿಂದ ಎಡವುತ್ತ ಮುಗ್ಗುತ್ತ ವಿಠ್ಠಲನ ಮಂದಿರಕ್ಕೆ ಬಂದು, ಪಾಂಡುರಂಗನ ಸಚ್ಚಿದಾನಂದಮಯ ವಿಗ್ರಹವನ್ನು ನೋಡಿ ನಮಸ್ಕರಿಸಿದ ನಂತರ ಬಿಂಬಾಪರೋಕ್ಷವು ನಿರಂತರವಾಗಿ ಸೂರ್ಯನ ಬೆಳಕಿನಂತೆ ಹೃದಯದಲ್ಲಿ ಹೊಳೆಯಹತ್ತಿತು.

ಶ್ರೀನಿವಾಸಾಚಾರ್ಯರು **"ಜಗನ್ನಾಥ ವಿಠ್ಠಲರಾದರು."** ಜಗನ್ನಾಥದಾಸರ ವಾಣಿಯು ಹೊಸ ರೂಪವನ್ನು ಹೊಂದಿತು. ಶ್ರೀ ವಿಜಯದಾಸರನ್ನೂ ಶ್ರೀ ಗೋಪಾಲದಾಸರನ್ನೂ ಕಾಣುವ ಹಿರಿಯಾಸೆಯು ಅವರನ್ನು ಆ ಕಡೆಗೆ ತೆರಳಿಸಿತು. "ರತುನಾ ದೊರಕಿತಲ್ಲ" ಎಂದು ಶ್ರೀ ಜಗನ್ನಾಥದಾಸರು ಅವರ ಗುಣಗಾನವನ್ನು ಮಾಡಿ ಅವರನ್ನು ಸಂದರ್ಶಿಸಿದರು. ತಮ್ಮ ನಿಯತ ಗುರುಗಳಾದ ಶ್ರೀಗೋಪಾಲದಾಸರನ್ನು ಕಂಡು, ಅವರಲ್ಲಿ "ಗೋಪಾಲದಾಸರಾಯಾ" ಎಂದು ಮುಂತಾಗಿ ಬೇಡಿಕೊಂಡರು.

ಜಗನ್ನಾಥದಾಸರು ಶ್ರೀ ವಿಜಯರಾಯರಲ್ಲಿ ಮಾಡಿದ ಭಕುತಿಯು ನಿರತಿಶಯವಾದುದು. ಒಂದೊಂದು ಪದಗಳಿಗೆ ಫಲವನ್ನು ಹೇಳಿ ಫಲಸ್ತುತಿಯ ಪುತ್ಥಳಿಯಲ್ಲಿ ಶ್ರೀ ವಿಜಯದಾಸರ ಗುಣಚಿತ್ರವನ್ನು ಚಿತ್ರಿಸಿರುತ್ತಾರೆ. ವಿಜಯರಾಯರಲ್ಲಿರುವ ಜಗನ್ನಾಥದಾಸರ ಭಕ್ತಿಯನ್ನುಬಣ್ಣಿಸಲು ಬೇರೊಂದು ಹೊತ್ತಿಗೆಯನ್ನೇ ಬರೆಯಬೇಕಾಗುತ್ತದೆ.

ನಿಯತ ಗುರುಗಳಾದ ಗೋಪಾಲದಾಸರಾಯರನ್ನು ಸಂಪೂರ್ಣವಾಗಿ ನಂಬಿ, ಅವರನ್ನು ಆರಾಧಿಸಿರುತ್ತಾರೆ. ಜಗನ್ನಾಥದಾಸರಾಯರ ಗುರುಭಕ್ತಿ, ದೈವಭಕ್ತಿ, ಅವರ ವೈರಾಗ್ಯ ಜ್ಞಾನ, ಇವುಗಳನ್ನು ಅವರ ಪದಗಳನ್ನೂ ಶ್ರೀಹರಿಕಥಾಮೃತಸಾರವನ್ನೂ ವ್ಯಾಸಂಗ ಮಾಡಿ ತಿಳಿದುಕೊಳ್ಳಬಹುದು.

ಶ್ರೀ ವಿಜಯದಾಸರ ಹರಕೆಯು ಕೈಗೂಡಿತು. ಹೊಡೆದು ಹಾಲು ಕುಡಿಸಿದಂತೆ ಭಕ್ತನ ಭಕ್ತಿ ಪರಾಙ್ಮುಖತೆ ವಿಷಯಲೋಲುಪತೆಗಳನ್ನು ತಪ್ಪಿಸಿ, ಶಿಕ್ಷಿಸಿ, ಸನ್ಮಾರ್ಗಕ್ಕೆ ಹಚ್ಚಿಸಿದ ಶ್ರೀ ವಿಜಯರಾಯರ ಸಂಕೇತವು ಸಫಲವಾಗುವ ಶ್ರೀಮತ್ಕಾಲವು ಒದಗಿತು.

ಶ್ರೀ ವರದೇಂದ್ರ ವಿದ್ಯಾ ಗುರುಗಳಲ್ಲಿ ಶ್ರೀವ್ಯಾಸ ಸಾಹಿತ್ಯ ಶಾಸ್ತ್ರಗಳನ್ನು ಓದಿ ಪಾರಂಗತರಾಗಿದ್ದ ಶ್ರೀಜಗನ್ನಾಥದಾಸರು ಶ್ರೀವಿಜಯರಾಯರಪದರತ್ನಗಳ ಸಂಗ್ರಹಕ್ಕಾಗಿ ವ್ಯವಸಾಯ ಮಾಡಿದರು. ವಿಜಯದಾಸರ ಪದ ಸುಳಾದಿ



ಗಳನ್ನು ಓದಿ ಮನನಮಾಡಿ ಅವುಗಳನ್ನು ನಿತ್ಯ ಕೀರ್ತನರೂಪವಾಗಿ ಪ್ರಕಟ ಮಾಡಹತ್ತಿದ್ದರು. ಶ್ರೀ ದಾಸಕೂಟವನ್ನು ಸೇರಿದ ನಂತರ ಶ್ರೀ ವ್ಯಾಸಕೂಟದಿಂದ ಜಗನ್ನಾಥದಾಸರಿಗೆ ಬಹಿಷ್ಕಾರವಾಯಿತೇ? ಇಲ್ಲ; ವ್ಯಾಸಕೂಟದ ಅಗ್ರಪಂಕ್ತಿಯಲ್ಲಿ ಮೊದಲನೆಯವರಾದ ಶ್ರೀಸತ್ಯಬೋಧರು ಶ್ರೀ ವರದೇಂದ್ರರು ಮುಂತಾದ ಮಹಾಮಹಾ ಮಹನೀಯರ ಆದರಕ್ಕೆ ಮುಖ್ಯ ಪಾತ್ರರಾಗಿದ್ದರು ಪದಗಳ ಸುಳಾದಿಗಳಲ್ಲಿರುವ ಆದರಾತಿಶಯವನ್ನು ಮೀರಿಸಿ ವೇದಶಾಸ್ತ್ರಗಳಲ್ಲಿ ಶ್ರೀಮನ್ಮಧ್ವಶಾಸ್ತ್ರಗಳಲ್ಲಿ ಆದರ ಭಕ್ತಿಗಳನ್ನು ಮಾಡುತ್ತಿದ್ದರು. ಶ್ರೀಮನ್ಮಧ್ವಶಾಸ್ತ್ರ ಶ್ರವಣ ಮುಂತಾದವುಗಳಲ್ಲಿ ಶ್ರೀ ಜಗನ್ನಾಥದಾಸರಾಯರ ಜ್ಞಾನ ಕರ್ಮೇಂದ್ರಿಯಗಳು ಸದಾ ನಿರತವಾಗಿಯೇ ಇದ್ದವು.

ಶ್ರೀಜಗನ್ನಾಥದಾಸರು ಸಕಲ ತೀರ್ಥ ಕ್ಷೇತ್ರಗಳನ್ನು ಸಂಚರಿಸಿದರು. ಬಹಳ ನದಿಗಳನ್ನೂ ಅವುಗಳ ಮಹಿಮೆಯನ್ನೂ ಬಣ್ಣಿಸಿದರು. ತೀರ್ಥಕ್ಷೇತ್ರಯಾತ್ರಾ ನಿಮಿತ್ತದಿಂದ ಅಲ್ಲಲ್ಲಿ ಇರುವ ಸುಜನ ಅಧಿಕಾರಿಗಳನ್ನು ಅನುಗ್ರಹಿಸಿ, ಅವರಿಗೆ ಸನ್ಮಾರ್ಗವನ್ನು ತೋರಿದರು.

ಶಿಷ್ಯ ಪ್ರಶಿಷ್ಯರುಗಳ ಪರಂಪರೆಯನ್ನು ಹರಡಿಸಿದರು. ಶ್ರೀಗೋಪಾಲದಾಸರ ಆದೇಶದಂತೆ ಹರಿದಾಸ ದೀಕ್ಷಾ ಮುಂತಾದವುಗಳನ್ನು ಪ್ರಚುರಪಡಿಸಿ, ಶ್ರೀಮದಾಚಾರ್ಯರ ಭಕ್ತಿಮಾರ್ಗವನ್ನು ಮತ್ತಷ್ಟೂ ಅಧಿಕವಾಗಿವಿಶದಪಡಿಸಿ, ಸುಗಮ ಮಾಡಿದರು. ಶ್ರೀ ಜಗನ್ನಾಥ ದಾಸರಾಯರ ಉಪಕಾರವನ್ನು ಮನುಷ್ಯ ಮಾತ್ರರು ಮರೆಯುವಂತಿಲ್ಲ; ಅದರಲ್ಲೂ ದಾಸಸಾಹಿತ್ಯದ ಜೀವಾಳವನ್ನೇ ಅವರು ಉಜ್ಜೀವನಗೊಳಿಸಿ ಬೆಳೆಯಿಸಿರುತ್ತಾರೆ. ಜಗನ್ನಾಥದಾಸರಾಯರ ಶಿಷ್ಯರು ಅನೇಕರಿರಬಹುದು. ಅವರಲ್ಲಿ ಮುಖ್ಯರಾದವರನ್ನುಮಾತ್ರ ಇಲ್ಲಿ ತಿಳಿಸುತ್ತೇವೆ. ಶ್ರೀ ಪ್ರಾಣೇಶವಿಠಲರು ಇವರು ಮೊದಲನೆಯವರು. ಶ್ರೀ ಶ್ರೀದವಿಠಲರು, ಶ್ರೀಶವಿಠಲರು, ಮುಂತಾದ ಹನ್ನೊಂದು ಶಿಷ್ಯರಿದ್ದರು.

ಜಗನ್ನಾಥದಾಸರ ಈ ಪ್ರವಚನಗಳಿಂದ ಜನರ ಅಜ್ಞಾನ ಕತ್ತಲೆಯು ಅಳಿದುಹೋಯಿತು. ಅಧ್ಯಾತ್ಮ ಜ್ಞಾನದ ಸೂರ್ಯನನ್ನು ಉದಯಗೊಳಿಸಲು ಶ್ರೀ ಹರಿಕಥಾಮೃತಸಾರದ ಅರುಣೋದಯವಾಯಿತು.

ಶ್ರೀ ಜಗನಾಥದಾಸರು ನಿದ್ರಾವಸ್ಥೆಯಲ್ಲಿ ಪ್ರಾಜ್ಞನಾಮಕ ಹರಿಯನ್ನು ಆಲಿಂಗಿಸಿ ಸುಖವಾಗಿ ಮಲಗಿದ್ದರು. ಐಹಿಕ ಅವತಾರದ ಮುಖ್ಯ ಕಾರ್ಯ

ವನು ಸೂಚಿಸಲು ಪ್ರಾಜ್ಞನು ತೈಜಸ ಮೂರುತಿಯ ಕಡೆಗೆ ಜಗನ್ನಾಥದಾಸರನ್ನು ಕಳುಹಿದನು. ಅದರಂತೆ ಶ್ರೀ ಜಗನ್ನಾಥದಾಸರಿಗೆ ಒಂದು ದಿವ್ಯಸ್ವಪ್ನವು ಕಾಣಿಸಿಕೊಂಡಿತು. ಪಂಢರಪುರದ ಪಾಂಡುರಂಗನು ಭಕ್ತರುದ್ಧಾರ ಕಾರ್ಯಕ್ಕೆ ಅಣಿಯಾಗಿ ನಿಂತಿದ್ದಾನೆ. ಎರಡೂ ಬದಿಗಳಲ್ಲಿ ಶ್ರೀವ್ಯಾಸರಾಜರು ಮತ್ತು ಶ್ರೀ ಪುರಂದರದಾಸರು ನಿಂತು, ನಿದ್ರೆಹೋಗಿರುವ ಜಗನ್ನಾಥದಾಸರನ್ನು ಅನುಲಕ್ಷಿಸಿ ಶ್ರೀ ಪಾಂಡುರಂಗನನ್ನು ಪ್ರಾರ್ಥಿಸುತ್ತಿದ್ದಾರೆ. ದಾಸರ ಮೇಲೆ ಪಾಂಡುರಂಗನ ಸದಯಾವಲೋಕವಾಗಲೆಂದು ಬೇಡಿಕೊಳ್ಳುತ್ತಿದ್ದಾರೆ" ಪ್ರಸಾದಮಯ ತಂಗಾಳಿಯಿಂದ ವಿಶ್ವನು ಜಗನ್ನಾಥದಾಸರಿಗೆ ಜಾಗ್ರತಿಯನ್ನು ಕರುಣಿಸಿದನು. ದಾಸವರ್ಯರು ಈ ಸ್ವಪ್ನದ ತತ್ವಸಾಕ್ಷಾತ್ಕಾರವನ್ನು ಮಾಡಿಕೊಂಡು ಶ್ರೀಹರಿಕಥಾಮೃತ ಸಾರವನ್ನು ರಚಿಸಿ ಶ್ರೀಹರಿಯ ಚರಣಗಳಲ್ಲಿ ಗುರುದ್ವಾರಾ ಸಮರ್ಪಿಸಿದರು.

"ವ್ಯಾಸತೀರ್ಥರ ಒಲುಮೆಯೋ ವಿಠಲೋಪಾಸಕಪ್ರಭುವರ್ಯ ಪುರಂದರ ।
ದಾಸರಾಯರ ದಯವೋ ತಿಳಿಯದೆ ಓದಿ ಕೇಳದಲೆ ॥
ಕೇಶವನ ಗುಣಮಣಿಗಳನು ಪ್ರಾಣೇಶಗರ್ಪಿಸಿ ವಾದಿರಾಜರ ।
ಕೋಶಕೊಪ್ಪುವ ಹರಿಕಥಾಮೃತಸಾರ ಪೇಳುವರೆ ॥

(ಶ್ರೀ ಶ್ರೀದ ವಿಠಲರು)

ವ್ಯಾಸದಾಸ ಸಾಹಿತ್ಯಗಳನ್ನು ಆಲೋಡಿಸಿ, ತಮ್ಮ ಅಪರೋಕ್ಷ ಜ್ಞಾನದ ಬೆಳಕಿನಲ್ಲಿ ತೆಗೆದಿಟ್ಟು, ಶ್ರೀಹರಿ ಕಥಾಮೃತಸಾರವನ್ನು ವಿರಚಿಸಿ ಶ್ರೀ ಜಗನ್ನಾಥದಾಸರು ಜಗನ್ಮಾನ್ಯರಾಗಿರುತ್ತಾರೆ. ಶ್ರೀವಿಜಯದಾಸರು ತಮಗೆ ಗೋಪಾಲದಾಸರಿಂದ ಕೊಡಿಸಿದ ಆಯುರ್ದಾನವನ್ನು ಮೇದಿನಿಯ ಸುರರಿಗೆಲ್ಲ ಹರಿಕಥಾಸುಧೆಯನ್ನು ಉಣಿಸಿ ಮರ್ತ್ಯರನ್ನುಅಮರರನ್ನಾಗಿಮಾಡಿಸಫಲಗೊಳಿಸಿರುತ್ತಾರೆ. ಇದು ಮಾನವನಾಗಿ ಬದುಕಿ ಬಾಳುವವನ ಆದರ್ಶ. ಅಂತೇ ಶ್ರೀ ಜಗನ್ನಾಥದಾಸರು "ಸಾಧನ ಶರೀರವಿದು"ಎಂದು ಸಾರಿರುತ್ತಾರೆ.ಕೊನೆಗೆಗುರು ವಾದಿರಾಜರ ದಯೆಯಿಂದ ಶ್ರೀಹರಿಕಥಾಮೃತಸಾರವನ್ನು "ಶ್ರೀ ವಾದಿರಾಜರ ಕೋಶಕೊಪ್ಪಿಸುವೆ." ಎಂದು ಸಮರ್ಪಿಸಿ ಧನ್ಯರಾಗಿರುತ್ತಾರೆ.

ತಪೋ: ವಿದ್ಯಾವಿರಕ್ತ್ಯಾದಿ ಸದ್ಗುಣೌಘಾಕರಾನಹಮ್ । ವಾದಿರಾಜಗುರೂನ್ ವಂದೇ ಹಯಗ್ರೀವದಯಾಶ್ರಯಾನ್ ॥




ವಾದಿರಾಜರ ಕೋಶಕೊಪ್ಪುವ ಹರಿಕಥಾಮೃತವ ॥

ತಮ್ಮ ಕಾರ್ಯವು ಮುಗಿದನಂತರ ಭೂಸಂಪರ್ಕವನ್ನು ಹೊಂದದಿರುವದು, ದೇವತೆಗಳ ರಹಸ್ಯಮಯ ವ್ಯಾಪಾರ. ಶುಕ್ಲ ಸಂವತ್ಸರ ಭಾದ್ರಪದ ಶುಕ್ಲಪಕ್ಷ ನವಮೀ ದಿವಸದಲ್ಲಿ ಶ್ರೀ ಜಗನ್ನಾಥದಾಸರು ದಿನದಂತೆ ಬ್ರಾಹ್ಮ ಮುಹೂರ್ತದಲ್ಲಿ ಎದ್ದರು. ಶ್ರೀಹರಿಯ ರೂ ಪ ಗ ಳ ನ್ನು ಧ್ಯಾನಮಾಡಿ, ಮಾನಸೋಪಾಸನೆಯನ್ನು ಮುಗಿಸಿದರು. ಅನಂತರ ಸ್ನಾನಮಾಡಿ, ಊರ್ಧ್ವ ಪುಂಡ್ರಗಳನ್ನು ಧಾರಣಮಾಡಿ, ಜಪಗಳನ್ನು ಮುಗಿಸಿದರು. ಅದರೊಡನೆ ಶ್ರೀಹರಿಯನ್ನು ಪೂಜಿಸಿದರು. ಭಕ್ತಿಯಿಂದ ಧ್ಯಾನಿಸಿ ಶ್ರೀ ಬಿಂಬಮೂರುತಿಯನ್ನು ಕಂಡು ಪರಮಾನಂದದಿಂದ ಹಾಡಿ ಹಾಡಿ ಕುಣಿದರು. ಅನಂತರ ಪ್ರಾಣಾಗ್ನಿ ಹೋತ್ರವನ್ನು ಹೋಮಿಸಿ, ಭೋಜನೋತ್ತರದಲ್ಲಿ ಶ್ರೀ ಹರಿಕಥಾಮೃತವನ್ನು ಪ್ರವಚನಮಾಡಿದರು. ಅನಂತರ ವೇದವ್ಯಾಸರ ಗ್ರಂಥಗಳನ್ನು ಶ್ರೀ ಮದಾಚಾರ್ಯರ ಭಾಷ್ಯಗಳೊಡನೆ ಪ್ರವಚನ ಮಾಡಿ ಬೋಧಿಸಿದರು. ಸಂಜೆಯವರೆಗೂ ಪ್ರವಚನಮಾಡಿ, ಸಂಜೆಯಾಗುವಾಗಲೇ ಎದ್ದು, ಸಂಧ್ಯಾದಿವಿಧಾನಗಳನ್ನು ಮುಗಿಸಿ, ಶ್ರೀ ಪಾಂಡುರಂಗ ವಿಠಲನ ಸಂಜೆಯ ಪೂಜಾ, ಹರಿವಾಣಸೇವೆ ಮುಂತಾದವುಗಳನ್ನು ಮುಗಿಸಿದರು. ಪ್ರಸಾದ ಶೇಷವನ್ನು ಎಲ್ಲರಿಗೂ ವಿತರಿಸಿ ತಾವು ಸ್ವೀಕರಿಸಿದರು. ಜಗನ್ನಾಥದಾಸರು ಎಲ್ಲರೂ ನಿದ್ರೆ ಹೋಗುತ್ತಿದ್ದರೂ ತಾವು ನಿದ್ರೆಹೋಗದೇ ಲಯಚಿಂತನವನ್ನು ಮಾಡುತ್ತ, ಯೋಗದಿಂದ ತೇಜೋಮಯ ರೂಪದಿಂದ ಬ್ರಹ್ಮರಂಧ್ರದಿಂದ ಉತ್ಕ್ರಾಂತರಾಗಿ, ವಿಷ್ಣುದೂತರು ತಂದ ವಿಮಾನದಲ್ಲಿ ಕುಳಿತು ಶ್ರೀವೈಕುಂಠ ಪುರವನ್ನು ತೆರಳಿದರು.

"ತೆರಳಿದರು ಶ್ರೀ ಜಗನ್ನಾಥದಾಸಾರ್ಯರು"—

" ವರಶುಕ್ಲ ವತ್ಸರದ ಭಾದ್ರಪದ ಶಿತಪಕ್ಷ । ಹರಿವಾರ ನವಮಿಯಲ್ಲಿ । ಸುರಸಿದ್ಧ ಸಾಧ್ಯ ಸನ್ಮುನಿಗಣಾರ್ಚಿತಪಾದ ಹರಿಯೆ ಪರನೆಂದೆನುತಲಿ ॥ ಧರಣಿಯನು ತ್ಯಜಿಸಿ ಬಹುಮಾನ ಪೂರ್ವಕವಾಗಿ । ಬೆರೆದು ಸುರಸಂದಣಿಯಲಿ ॥ ಪರಮಾರ್ಥವೈದಿ ಮನ ಹರಿಯ ಪಾದದಲಿಟ್ಟು । ವರವಿಷ್ಣು ದೂತ ವೈಮಾನಿಕರ ಒಡಗೂಡಿ ॥ ೧ ॥

**ಶ್ರೀ ಶ್ರೀದ ವಿಠಲರು ಶ್ರೀ ಜಗನ್ನಾಥರ ಸಾಕ್ಷಾತ್ ಶಿಷ್ಯರು.**



ತಾವು ಸಾಂಶದೇವತೆಗಳೆಂದು ತಿಳಿಸಲು ಕಂಭದಲ್ಲಿ ಒಂದು ಅಂಶವನ್ನಿಟ್ಟು ಜಗನ್ನಾಥದಾಸರು ಶ್ರೀ ಹರಿಪಾದವನ್ನು ಸೇರಿದರು.

ನೋಳ್ಪಜನಕೆ । ಸಾಂಶವೆಂದು ತಿಳಿವುದಕೆ ಒಂದಂಶ ಸ್ತಂಭದಲ್ಲಿ ನಿಲಿಸಿ ॥೧॥

**ಶ್ರೀ ಅಭಿನವ ಜನಾರ್ಧನ ವಿಠಲರು "ಹರಿಯಪುರಕೆ ತೆರಳಿಪೋದರು"**

ಇಲ್ಲಿ ಸಂಕ್ಷಿಪ್ತವಾಗಿ ಶ್ರೀ ಜಗನ್ನಾಥದಾಸರ ಚರಿತ್ರವನ್ನು ಸೂಚಿಸಿರುತ್ತೇವೆ.

ಶ್ರೀಜಗನ್ನಾಥದಾಸರು ೩೨ ಸಂಧಿಗಳಿಂದ ಒಪ್ಪುವ ಶ್ರೀಹರಿಕಥಾಮೃತಸಾರವನ್ನು ಮೂವತ್ತೆರಡು ಲಕ್ಷಣಗಳಿಂದ ಲಕ್ಷಿತನಾದ ಲಕ್ಷ್ಮೀರಮಣನಿಗೆ ಪುಷ್ಪರೂಪದಿಂದ ಸಮರ್ಪಿಸಿರುತ್ತಾರೆ. ನಮ್ಮಂಥ ಪಾಮರರ ವರ್ಣನೆಗೆ ಅಗೋಚರವಾಗಿರುವ ಶ್ರೀ ಜಗನ್ನಾಥದಾಸರ ಮಹಿಮೆಯನ್ನೂ ಹರಿಕಥಾಮೃತಸಾರದ ಸ್ವಾರಸ್ಯವನ್ನೂ ರಸಿಕ ಬುಧರು ಪದಸುಳಾದಿಗಳಿಂದ ಆ ಸ್ವಾದಿಸಿ ಜ್ಞಾನದೀನರಲ್ಲಿ ಕರುಣಿಸುವರೆಂದು ನಂಬಿ ವಿರಮಿಸುತ್ತೇನೆ.

**ಶ್ರೀ ಮಧ್ವೇಶ ಕೃಷ್ಣಾರ್ಪಣಮಸ್ತು.**

---

ವೇದಪೀಠ ವಿರಿಂಚಿಭವ ಶಕ್ರಾದಿಸುರ ವಿಜ್ಞಾನದಾಯಕ



ಶ್ರೀ ಮದಾನಂದ ತೀರ್ಥರು.

ಶ್ರೀ ಬಾದರಾಯಣದೇವರು.

**ಶ್ರೀವರದೇಂದ್ರ ಗುರುಸಾರ್ವಭೌಮರ ವೃಂದಾವನ ಲಿಂಗಸೂಗೂರು**

ರಜತ ಕವಚಾಲಂಕೃತ



ವಾದೇವಿಜಯ ಶೀಲಾಯ ವರದಾಯ ವರಾರ್ಥಿನಾಮ್ ॥
ಸದಾಸ್ವಜನ ಸಿಂಹಾಯ ವರದೇಂದ್ರಾಯ ತೇ ನಮಃ ॥

॥ ಹರಿಃ ಓಂ ॥

ಶ್ರೀ ಗುರು ರಾಜಾಂತರ್ಗತ ಶ್ರೀ ಗುರು ಜಗನ್ನಾಥವಿಠಲಾಯ ನಮೋನಮಃ

## ॥ ಶ್ರೀ ಮದ್ವರದೇಂದ್ರ ಗುರುರಾಜಸ್ತೋತ್ರಮ್

ಶ್ರೀ ರಾಮಪಾದ ಸರಸೀರುಹ ಮತ್ತಭೃಂಗಃ । ಶ್ರೀರಾಮಪಾದ ಕಮಲಾರ್ಚನ ಸ್ವಾಂತರಂಗಃ ॥ ಶ್ರೀಜ್ಞಾನಭಕ್ತಿಸುವಿರಾಗ ಗುಣೌಘಸಂಗಃ । ಶ್ರೀಪಾದಪದ್ಮಯುಗಳೋದ್ಭವರೇಣುಸಂಘಃ ॥೧॥

ಪ್ರತ್ಯಕ್ಷತೋಸ್ತಿ ಚಾತ್ರೈವ ವರದೇಂದ್ರಾರ್ಯ ಸದ್ಗುರುಃ । ಸ್ವದರ್ಶನಂ ಸ್ವಭಕ್ತಾನಾಂ ಪ್ರದಾತುಂ ಚರತಿ ಸ್ಫುಟಂ ॥೨॥

ಸ್ವಪಾದದರ್ಶನೇನೈವ ಭಕ್ತಾಭೀಷ್ಟಪ್ರದೋ ಯತಃ । ಅತೋಸೌ ಗುರುರಾಜೋ ಹಿ ತೇಜೋಮಯಸ್ವರೂಪವಾನ್ ॥೩॥

ತ್ವಮೇವ ಸರ್ವಾರ್ಥಪ್ರದೋಸಿ ಸ್ವಾಮಿನ್ । ತ್ವಮೇವ ತ್ವದ್ಭಕ್ತ ಜನಾಳಿಪಾಲಃ ॥ ಭಕ್ತಾರ್ತಿಹರ್ತಾ ಸುಖಜಾಲಕರ್ತಾ । ಸದಾ ಸುಸೌಖ್ಯಂ ಪ್ರದಿಶಾದ್ಯ ಸದ್ಯಃ ॥೪॥

ಓಂನಮೋ ವರದೇಂದ್ರಾಯ ಇತ್ಯಷ್ಟಾಕ್ಷರ ಈರಿತಃ ॥ ಮಂತ್ರೋಯಂ ಸರ್ವಕಾಮ್ಯಾರ್ಥ ಸಿದ್ಧಿದೋ ಮೋಕ್ಷದಾಯಕಃ ॥೫॥

ಏತನ್ಮಂತ್ರಜಪಾದೇವ ಭೂತವೇತಾಳ ರಕ್ಷಸಾಂ ॥ ಸರ್ಪವ್ಯಾಘ್ರ ಭಯಾದೀನಾಂ ಪೀಡಾಃ ನಶ್ಯಂತಿ ನಿಶ್ಚಯಾತ್ ॥೬॥

ಗುರುಪಾದೋದಕಂ ಪೀತ್ವಾ ಪಾಪಸಂಘಾತ್ಪ್ರಮುಚ್ಯತೇ ॥ ಸರ್ವೇ ರೋಗಾಃ ವಿನಶ್ಯಂತಿ ನಾತ್ರಕಾರ್ಯಾ ವಿಚಾರಣಾ ॥೭॥

ಪ್ರದಕ್ಷಿಣನಮಸ್ಕಾರಾನ್ ಗುರೋರ್ವೃಂದಾವನಸ್ಯ ಹಿ ॥ ಯಃಕರೋತಿ ನರೋ ಭಕ್ತ್ಯಾ ಸರ್ವಯಾತ್ರಾ ಫಲಂ ಲಭೇತ್ ॥೮॥

ಏತತ್‌ಸ್ತೋತ್ರಸ್ಯ ಯೋ ಭಕ್ತ್ಯಾ ಪಠನಂ ಕುರುತೇ ಸದಾ ॥ ಅಷ್ಟೋತ್ತರಶತಾವೃತ್ತ್ಯಾ ಯಃ ಕರೋತ್ಯಭಿಷೇಚನಂ ॥೯॥

ವಾಕ್‌ಸಿದ್ಧಿರ್ಮಂತ್ರಸಿದ್ಧಿಶ್ಚ ಭವೇತ್ತಸ್ಯ ನ ಸಂಶಯಃ ॥ ಗುರು ಪ್ರಸಾದತಶ್ಚಾಯಂ ಗುರುಪ್ರತ್ಯಕ್ಷತಾಮಿಯಾತ್ ॥೧೦॥



ತದುಕ್ತ್ಯೈವ ಕೃತಂ ಸ್ತೋತ್ರಂ ಗುರುಪ್ರೀತಿಕರಂ ಶುಭಮ್ ॥ ಕಪೋಲ ಕಲ್ಪಿತಂ ನೈವ ಗುರುರಾಜಪ್ರಸಾದಜಮ್ ॥೧೧॥

ವಂದ್ಯಾಯ ವರದೇಂದ್ರಾಯ ಸಾಂದ್ರಾನಂದಕರಾಯ ಚ ॥ ವಂದಾರು ಜನ ವೃಂದಾಯ ವೃಂದಾರಕಲತಾಯ ಚ ॥೧೨॥

**ಕೋಪೂರ್ವ ಸಿಗಿಸಂಸ್ಥಾನ ಸಂಸ್ಥಿತೇನೈವ ಸ್ವಾಮಿನಾ** ॥ ವರ ದೇಂದ್ರ ಗುರುಸ್ತೋತ್ರಂ ವರದೇಂದ್ರಾರ್ಯತುಷ್ಟಿದಂ ॥೧೩॥

॥ ಇತಿ ಶ್ರೀ ವರದೇದ್ರಗುರುಸ್ತೋತ್ರಂ ಸಂಪೂರ್ಣಮುಗಮುತ್ ॥

॥ ಶ್ರೀಗುರುರಾಜಾರ್ಪಣಮಸ್ತು ॥

॥ ಹರಿಃ ಓಂ ॥

॥ ಶ್ರೀ ಲಕ್ಷ್ಮೀ ವೇಂಕಟೇಶಾಯನಮಃ ॥ ಶೂರ್ಪಕರ್ಣಾಯನಮಃ ॥

॥ ಶ್ರೀ ಗುರುರಾಜೋ ವಿಜಯತೇ ॥

## ಶ್ರೀವರದೇಂದ್ರಾಷ್ಟಕ ಪ್ರಾರಂಭಃ

ಇಂದ್ರ ಚಂದ್ರ ಮುಖ್ಯ ವೃಂದಾರಕ್ರೇಂದ್ರ ವಂದಿತಾ ।
ನಂದ ಚಂದ್ರ ರಾಮಚಂದ್ರ ಪಾದಪಂಕಜಂ ಮುದಾ ॥
ಸುಂದರ ಹೃದಯಾರವಿಂದ ಪೂಜನೋತ್ಸುಕಂ ಗುರು । ವರ ।
ದೇಂದ್ರ ಸಂಯಮೀಂದ್ರ ಮಂಜಸಾ ಭಜಾಮ್ಯಹಂ ಸದಾ ॥೧॥
ಭಕ್ತಿಯುಕ್ತ ಭಕ್ತವರ್ಗ ಮುಕ್ತಿಮಾರ್ಗ ದರ್ಶನಂ । ವಿ
ಭಕ್ತವೇದ ವಾದನೇ ಸುಶಕ್ತಮೀಡ್ಯಮೇವ ಹಿ ॥ ಅ
ಭುಕ್ತ ವಿಷಯಜಂ ಸುಖಂ ಕ್ಷಿತೀಂದ್ರ ಸನ್ನುತಂ ಗುರು । ವರ
ದೇಂದ್ರ ಸಂಯಮೀಂದ್ರ ಮಂಜಸಾ ಭಜಾಮ್ಯಹಂ ಸದಾ ॥೨॥
ಪದಾರವಿಂದ ಸೇವಿನಾಮುದಾರ ಸಿದ್ಧಿದಾಯಕಂ ।
ವಿದಾರಿತಾರಿ (ಘ) ಸಂಚಯಂ ಶಮಾದಿಸತ್ಯ ಸದ್ಗುಣಂ ॥
ಪ್ರದಾಯಿನಂ ಸುಸಂಪದಂ ನಿಜಾಂತಿವಾಸಿನಾಂ ಗುರು । ವರ
ದೇಂದ್ರ ಸಂಯಮೀಂದ್ರ ಮಂಜಸಾ ಭಜಾಮ್ಯಹಂ ಸದಾ ॥೩॥
ಪ್ರವಿಷ್ಟವಾದಿ ದೂಷಣಂ ವಿಶಿಷ್ಟವೇದ ಭೂಷಣಂ (ಘೋಷಣಂ) ।
ನಿವಿಷ್ಟಕಾಮಶೋಷಣಂ ಸಮಸ್ತಶಾಸ್ತ್ರ ಭಾಷಣಂ ॥ ವ

ರಿಷ್ಟ ಭಕ್ತ ಪೋಷಣಂ ಸತಾಂ ಭವಾಬ್ಧಿ ತಾರಣಂ ಗುರು । ವರ
ದೇಂದ್ರ ಸಂಯಮೀಂದ್ರ ಮಂಜಸಾ ಭಜಾಮ್ಯಹಂ ಸದಾ ॥೪॥
ಸಮಸ್ತ ತಂತ್ರಕೋವಿದಂ ನಿತಾಂತಸೇವಿನಾಂ ನೃಣಾಂ ।
ಸುಪುತ್ರ ಮಿತ್ರ ಸಂಪದಾದ್ಯಭೀಷ್ಟ ಸಂಪ್ರದಾಯಕಂ ॥
ಕುಷ್ಟ ಕಂಪತಂದ್ರ ಮುಖ್ಯ ದೋಷ ಯೂಥಹಾರಿಣಂ ಗುರು । ವರ
ದೇಂದ್ರ ಸಂಯಮೀಂದ್ರ ಮಂಜಸಾ ಭಜಾಮ್ಯಹಂ ಸದಾ ॥೫॥
ಸ್ನಾನ ಮೌನ ಧ್ಯಾನ ವ್ಯಾಖ್ಯಾನ ಪ್ರವಚನಾರತಂ ।
ಧ್ಯಾನಯುಕ್ತ ಯೋಗಕರ್ಮ ಕಾಮನಾ ವಿವರ್ಜಿತಂ ॥
ಮಾನವಾದಿ ಕಾಮ್ಯಭೀಷ್ಟದಂ ಯತೀಶ್ವರಂ ಗುರು । ವರ
ದೇಂದ್ರ ಸಂಯಮೀಂದ್ರ ಮಂಜಸಾ ಭಜಾಮ್ಯಹಂ ಸದಾ ॥೬॥
ಧ್ಯಾನಗಮ್ಯ ರಾಘವಾಂಘ್ರಿ ಪಂಕಜಂ ಸುಪೂಜಕಂ ।
ಕಾಮನಾಪ್ತ ಭೀಮನಾಮಕಸ್ಯತೀರ್ಥಮಾಶ್ರಿಣಂ ॥
ಹೇಮವದ್ವಿಭಾಸಮಾನ ಕೋಮಲಾಂಗಕಂ ಗುರು । ವರ
ದೇಂದ್ರ ಸಂಯಮೀಂದ್ರ ಮಂಜಸಾ ಭಜಾಮ್ಯಹಂ ಸದಾ ॥೭॥
ಇಂದುವದನಮಿಂದಿರಾಪತೇಃ ಪದಾಬ್ಜ ಮಧುಕರಂ ।
ಇಂದ್ರನೀಲಭಾಸ ವೃಂದಾವನೇ ವಿರಾಜಿತಂ ॥
ಮಂದಹಾಸಯೋಷಿತಾಂ ಸುಪುತ್ರದಂ ಜಗದ್ಗುರು । ವರ
ದೇಂದ್ರ ಸಂಯಮೀಂದ್ರ ಮಂಜಸಾ ಭಜಾಮ್ಯಹಂ ಸದಾ ॥೮॥
ವರದೇಂದ್ರಯತೀಂದ್ರಾಣಾಮಷ್ಟಕಂ ಭಕ್ತಿಪೂರ್ವಕಂ ॥
ಯಃ ಪಠೇತ್ ಶೃಣುಯಾದ್ವಾಪಿ ಸ ಯಾತಿ ಪರಮಾಂ ಶ್ರಿಯಂ ॥೯॥
ತ್ರಿಕಾಲಮೇಕಕಾಲಂ ವಾ ಯಃ ಪಠೇನ್ನಿಯಮಾನ್ವಿತಃ ॥
ಜ್ವರಾಪಸ್ಮಾರಕುಷ್ಟಾದಿ ತಾಪಜ್ವರನಿವಾರಣಂ ॥೧೦॥
ಅಷ್ಟಕಂ ವರದೇಂದ್ರಾಣಾಂ ಭಕ್ತ್ಯಾ ಪಠತಿ ಯೋ ನರಃ ॥
ಐಹಿಕಾಮುಷ್ಮಿಕೇ ಲೋಕೇ ಸುಖಂ ಪ್ರಾಪ್ನೋತ್ಯ ಸಂಶಯಃ ॥೧೧॥

॥ ಶ್ರೀಗುರು ಮಧ್ವೇಶಾರ್ಪಣಮಸ್ತು ॥

---

# ಅನುಕ್ರಮಣಿಕಾ

ಪುಟ
ಮೇಲ್ಭಾಗ ೫೬
ಒಳಗಿನ **ಮುಖಪತ್ರ**
ಅರ್ಪಣ
ನಿವೇದನ x—v
ಪೀಠಿಕೆ xi—xix
ಶ್ರೀ ಜಗನ್ನಾಥದಾಸವರ್ಯರ ಚರಿತ್ರ. xx—XLiv
ಶ್ರೀ ವರದೇಂದ್ರರ ಸ್ತೋತ್ರ ಅಷ್ಟಕ ಅನುಕ್ರಮಣಿಕಾ ಒಪ್ಪೋಲೆ
ಮಂಗಳ ಸುಳಾದಿಗಳು ೧—೮
ಮಂಗಳಾಚರಣ ಧ್ಯಾನ ಶ್ಲೋಕಗಳು ೧
ಶ್ರೀ ದಾಸವರ್ಯರ ,, ,, ೪
ಶ್ರೀ ಮಂಗಳಾಚರಣ ಸಂಧಿಯ ಸಾರ ೬—೧೨
ಶ್ರೀಹರಿಕಥಾಮೃತಸಾರ ಟೀಕಾಪ್ರಾರಂಭ ಮಂಗಳಾಚರಣ ಸಂಧಿ
ತಾಮ್ರಪರ್ಣೀಯಾ ಸಂಸ್ಕೃತ ಪದಪ್ರಕಾಶಿಕಾ ಇದರ ಕನ್ನಡಾರ್ಥ
ಪಲ್ಲವಿ ಪ್ರಥಮಾರ್ಥ .... ೧೩—೨೬
ಪಲ್ಲವಿ ದ್ವಿತಿಯಾರ್ಥ .... .... ೨೬—೩೬
ಮಂಗಳಾಚರಣ (ಪದ್ಯ ೧) ಟೀಕಾ.... .... ೩೭—೪೬
ವಾಯುಪರ ಅರ್ಥ .... .... ೪೭—೫೧
ಮಂಗಳಾಚರಣ ಪದ್ಯ (೧) ದ್ವಿತಿಯಾರ್ಥ .... ೫೧—೬೦
ವಾಯುಪರ ದ್ವಿತಿಯಾರ್ಥ .... .... ೬೦—೬೫
ದ್ವಿತೀಯ ಪದ್ಯ ಪದ್ಯಾರ್ಥ .... .... ೬೫—೭೦
ತೃತೀಯ ಪದ್ಯ ಪದ್ಯಾರ್ಥ .... .... ೭೦—೭೪
ಚತುರ್ಥ ಪದ್ಯ ಪದ್ಯಾರ್ಥ .... .... ೭೬—೭೮
ಪಂಚಮ ಪದ್ಯ ಪದ್ಯಾರ್ಥ .... .... ೭೮—೮೦
ಷಷ್ಠ ಪದ್ಯ ಪದ್ಯಾರ್ಥ .... .... ೮೧—೮೬
ಸಪ್ತಮ ಪದ್ಯ ಪದ್ಯಾರ್ಥ .... .... ೮೬—೮೯
ಅಷ್ಟಮ ಪದ್ಯ ಪದ್ಯಾರ್ಥ .... .... ೮೯—೯೧
ನವಮ ಪದ್ಯ ಪದ್ಯಾರ್ಥ .... .... ೯೨—೯೫

| | | ಪುಟ |
|---|---|---|
| ದಶಮ ಪದ್ಯ ಪದ್ಯಾರ್ಥ | .... .... | ೯೫—೯೭ |
| ಏಕಾದಶ ಪದ್ಯ ಪದ್ಯಾರ್ಥ | .... .... | ೯೭—೧೦೫ |
| ದ್ವಾದಶ ಪದ್ಯ ಪದ್ಯಾರ್ಥ | .... .... | ೧೦೫—೧೦೭ |
| ತ್ರಯೋದಶ ಪದ್ಯ ಪದ್ಯಾರ್ಥ | .... .... | ೧೦೭—೧೦೯ |
| ಶ್ರೀಗುರು ವಿಜಯ ವಿಠಲರ ವ್ಯಾಖ್ಯಾನ | .... | ೧೨೭—೧೫೪ |
| ಶ್ರೀದ್ರೌಪದೀಶ ಪತಿ ವಿಠಲರ ಟೀಕಾ | .... | ೧೫೫-೧೫೬ |
| ಶ್ರೀ ಜಂಬುಖಂಡಿ ವಾದಿರಾಜೀಯ ಭಾವ ಸೂಚನ | .... | ೧೫೬—೧೬೪ |
| ಶ್ರೀ ,, ,, ವ್ಯಾಸದಾಸ ಸಿದ್ಧಾಂತ ಕೌಮುದಿ | | ೧೬೫—೧೮೮ |

ಎರಡನೇ ಕರುಣಾ ಸಂಧಿ—

ಪ್ರತಿಪದ್ಯದ ಕೆಳಗೆ ಉಪಲಬ್ಧ ಎಲ್ಲ ಟೀಕಾಗಳು ಕೊಡಲಾಗಿದೆ.

| | | |
|---|---|---|
| ೨, ಕರುಣಾ ಸಂಧಿಯಸಾರ | .... .... | ೧೮೯—೧೯೭ |
| ಎರಡನೇ ಕರುಣಾಸಂಧಿ ವ್ಯಾಖ್ಯಾನಗಳು | .... | ೧೯೮—೨೮೬ |
| ೩. ವ್ಯಾಪ್ತಿಸಂಧಿಯ ಸಾರ | .... .... | ೨೮೭—೨೯೩ |
| ವ್ಯಾಪ್ತಿಸಂಧಿ ವ್ಯಾಖ್ಯಾನಗಳು | .... .... | ೨೯೪—೩೮೬ |
| ೪. ಭೋಜನ ಸಂಧಿಯ ಸಾರ | .... .... | ೩೮೭—೪೦೦ |
| ಭೋಜನ ಸಂಧಿಯ ವ್ಯಾಖ್ಯಾನಗಳು | .... | ೪೦೦—೪೮೮ |
| ಪೋಷಕರ ಸಹಾಯಕರ ಉಪಕಾರ ಸ್ಮರಣೆ | .... | ೧—೮ |
| | ಒಟ್ಟಿಗೆ ಪುಟಗಳು | ೫೬೦ |


ಚಿತ್ರಗಳು


೧ ಮುಖಪತ್ರ ಶ್ರೀಜಗನ್ನಾಥ ದಾಸರ ಚಿತ್ರ.

೨ ಶ್ರೀ ವಿಜಯದಾಸರ ಭಾವಚಿತ್ರ ಪ್ರಾರಂಭಕ್ಕೆ

೩ ಶ್ರೀ ಗೋಪಾಲದಾಸರ ಉಪಾಸ್ಯ ಶ್ರೀ ವಿಜಯವಿಠಲ ಸಾಲಿಗ್ರಾಮಾದಿ ಗೋಪಾಳ ಬುಟ್ಟಿ ತಂಬೂರಿ

೪ ಗರುಡ ವಾಹನ ಲಕ್ಷ್ಮೀ ನರಸಿಂಹ ದೇವರು

೫ ಶ್ರೀ ವರದೇಂದ್ರ ಗುರುಸಾರ್ವಭೌಮರ ವೃಂದಾವನ




ಚರಿತ್ರೆಯಲ್ಲಿ


೬ ಶ್ರೀ ಮಂತ್ರಾಲಯ ಪ್ರಭುಗಳ ಭಾವಚಿತ್ರ

೭ ಶ್ರೀ ವೆಂಕಟೇಶ ಗಿರಿಯಲ್ಲಿ ಶ್ರೀ ವಿಜಯದಾಸರನ್ನು ಪ್ರಾರ್ಥಿಸಿದ ಚಿತ್ರ.

೮ ಶ್ರೀ ಗೋಪಾಲದಾಸರು ಶ್ರೀ ಧನ್ವಂತರಿಯ ಸ್ತೋತ್ರಗೈದು ಆಯುಪ್ರದಾನ

೯ ಶ್ರೀ ಪಂಢರಪುರ ಭೀಮರಥಿಯಲಿ ವಿಠಲನು ಶ್ರೀಜಗನ್ನಾಥ ವಿಠ್ಠಲನೆಂಬೋ ಅಂಕಿತ ಶಿಲಾಪ್ರದಾನ.

೧೦ ಶ್ರೀ ವ್ಯಾಸಜರಾಜರು ಶ್ರೀ ಪುರಂದರ ದಾಸರು ಸ್ವಪ್ನದಲ್ಲಿ ಶ್ರೀ ಜಗನ್ನಾಥ ದಾಸರಿಗೆ ಶ್ರೀ ಹರಿಕಥಾಮೃತ ಸಾರ ರಚಿಸಲು ಆಜ್ಞೆ ಇತ್ತದು.

೧೧ ಹಯಗ್ರೀವ ದೇವರು ಶ್ರೀ ವಾದಿರಾಜರು. ವಾದಿರಾಜರ ಕೋಶಕೊಪ್ಪುವ ಹರಿಕಥಾಮೃತವು.

೧೨ ಶ್ರೀ ಜಂಬುಖಂಡಿ ವಾದಿರಾಜಾಚಾರ್ಯರ ಭಾವ ಚಿತ್ರ ಪುಟ ೧೫೬


## — ಒಪ್ಪೋಲೆ —

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೬ | ಸುಳಾದಿಲಿ | ತೊರತಿವೆ | ದೊರತಿವೆ |
| ೬ | ,, | ಜೀವಾಂತ | ಜೀವಾಂತಃ |
| ೪ | ೧೫ | ಶಾತಂ | ಶಾಂತಂ |
| ೬ | ೨೩ | ತಾಟ್ಸ್ಪರಣಿ | ತಾಮ್ರಪರ್ಣೀ |
| ೧೬ | ೧೩ | ತಾಮ್ರಪರ್ಣೀ | ತಾಮ್ರಪರ್ಣೀಯಾ |
| ೧೯ | ೬ | ದಿಷ್ಯತೆ | ದಿಷ್ಯತೇ |
| ೨೮ | ೫ | ದಾಸಈಶ | ದಾಸೇಶ |
| ೨೯ | ೨ | ಭಗವತ್ಪಸಾದೋ | ಭಗವತ್ಪ್ರಸಾದೋ |
| ೩೧ | ೨೬ | ಕಥಾಃ | ಕಥಾಃ |
| ೩೩ | ೪ | ಕರುಣೆ | ಕರುಣ |
| ೩೩ | ೨೦ | ದ್ಭಕ್ತಾಃ | ದ್ಭಕ್ತಾಃ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೩೫ | ೩ | ಭಕ್ತ್ತಕ್ತ್ತರು | ಭಕ್ತ್ತರು |
| ೩೫ | ೧೦ | ಮೂರ್ರು | ಮೂರು |
| ೩೫ | ೧೮ | ಅಧಯನ | ಅಧ್ಯಯನ |
| ೩೬ | ೨೩ | ಧೃಢಭಕ್ತಿಯೇ | ದೃಢಭಕ್ತಿಯೋ |
| ೩೭ | ೪೫ | ಅಧಿಕಾರಿಕೀ | ಆಧಿಕಾರಿಕೀ |
| ೩೮ | ೧೦ | ಸರ್ವೆಶಃ | ಸರ್ವೇಶಃ |
| ೩೮ | ೧೩ | ವಾದಿ | ವಾದ |
| ೩೮ | ೨೬ | ತನಗೆ | ತಮಗೆ |
| ೬೧ | ೨ | ಜ್ಞಾತವಮ್ | ಜ್ಞಾತವ್ಯಮ್ |
| ೭೧ | ೭ | ತತ್ಸಬುದ್ಧಿ | ತತ್ಸಂಬುದ್ಧಿ |
| ೭೦ | ೧೭ | ನನ್ನು | ನನ್ನನ್ನು |
| ೮೧ | ೨ | ವನಿಃ | ವನ್ಹಿಃ |
| ೯೫ | ೧೩ | ಭಾವಿವಿರಚಿ | ಭಾವಿವಿರಿಂಚಿ |
| ೯೬ | ೨೬ | ನಾಶಗೆಯ್ಯುವವನೆ | ನಾಶಗೈಯ್ಯುವವನೆ |
| ೯೯ | ೩ | ಚತಾರಿಂಶ | ಚತ್ವಾರಿಂಶ |
| ೯೯ | ೩ | ಹಪರೋಕ್ಷಂ | ಹ್ಯಪರೋಕ್ಷಂ |
| ೧೦೦ | ೨೪ | ವರ್ಷ | ಕಲ್ಪ |
| ೧೦೫ | ೧೮ | ೫೦ ಕಲ್ಪ | ೪೦ ಕಲ್ಪ |
| ೧೧೭ | ೧೨ | ಇಂಥವರೇ | ಇಂಥವರೇ |
| ೧೩೩ | ೧೪ | ಸಾರು | ಸಾರ |
| ೧೪೪ | ೯ | ಸದನದಲಿ"ಕ" | ಸದನದಲಿ |
| ೧೪೫ | ೧೮ | ಮಾನಿಮಾಡಿ | ಮೊನೆಮಾಡಿ |
| ೧೫೦ | ೧೪ | ಸ್ವತಮರೆನಿಸಿ | ಸೋತ್ತ್ರಮರೆನಿಸ |
| ೧೫೦ | ೧೮ | ಮುನಿಯುಳ್ಳಂಥ | ಮನೆಯುಳ್ಳಂಥ |
| ೧೫೩ | ೨೫ | ಶ್ರೀಮಧ್ವೆಂಕಟಾ | ಶ್ರೀಮದ್ವೆಂಕಟಾ |
| ೧೫೮. | ೪ | ಆ ಸುಕೃತ | ಆವಸುಕೃತ |
| ೧೬೩ | ೨೬ | ಲವಣಾಣವೇ | ಲವಣಾರ್ಣವೇ |



| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧೭೬ | ೫ | ಹಟ್ಟಸಿದನು | ಹುಟ್ಟಿಸಿದನು |
| ೧೮೦ | ೮ | ವಾಸ | ವ್ಯಾಸ |
| ೧೮೦ | ೧೩ | ಭಾರತದೌ | ಭಾರತಾದೌ |
| ೧೮೮ | ೧೭ | ಬ್ರಹ್ನಾದಿಗಳ | ಬ್ರಹ್ಮಾದಿಗಳ |
| ೧೮೮ | ೨೧ | ಕತವ್ಯ | ಕರ್ತವ್ಯ |
| ೧೯೩ | ೨ | ಬ್ರಹಾಂಡಾ | ಬ್ರಹ್ಮಾಂಡಾ |
| ೧೯೪ | ೮ | ಜಗವಜಗವು | ಜಗವು |
| ೧೯೬ | ೧೧ | ದುಷ್ವರಿಗೆ | ದುಷ್ಟರಿಗೆ |
| ೧೯೭ | ೧ | ಇವನಿಗೆ ಇವನಿಗೆ | ಇವನಿಗೆ |
| ೧೯೯ | ೨೬ | ಶ್ರದಣ | ಶ್ರವಣ |
| ೨೦೦ | ೨೮ | ಪರವೋದದಲಿ | ಪರಮವೋದದಲಿ |
| ೨೦೨ | ೧೫ | ಲಕ್ಷ್ಮೀವಿಯರ | ಲಕ್ಷ್ಮೀದೇವಿಯರ |
| ೨೦೭ | ೨೦ | ಹೊಕ | ಹೊಕ್ಕ |
| ೨೧೨ | ೧೯ | ಕರಯು | ಕರೆಯ |
| ೨೧೩ | ೨೫ | ಅತಿಏವ | ಅತಏವ |
| ೨೧೭ | ೪ | ಕ್ಷೇತ್ರಜನು | ಕ್ಷೇತ್ರಜ್ಞನು |
| ೨೧೮ | ೮ | ಧೈವಿದ್ಯೆ | ದ್ವಿವಿಧೈ |
| ೨೨೨ | ೧೨ | ದುಡಿಸ್ತಿ | ದಂಡಿಸಿ |
| ೨೨೨ | ೧೩ | ಕಠಣ | ಕಠಿಣ |
| ೨೨೩ | ೨೨ | ಸ್ವಾತ್ಮಾನಾಂ | ಸ್ವಾತ್ಮಾಕ್ರನಂ |
| ೨೨೭ | ೨೬ | ಸಗತ್ವ | ಸ್ವಗತ |
| ೨೨೯ | ೬ | ಶ್ರುತಿ | ಶ್ರುತಿ |
| ೨೩೧ | ೧೯ | ಬಾಹ್ಯ | ಬಾಧ್ಯ |
| ೨೩೨ | ೮ | ಕೋರಬೇಕೆಂಬ | ಕೊಳ್ಳಬೇಕೆಂಬ |
| ೨೩೮ | ೫ | ಅತ್ರೇದಂ | ಅತ್ರೇದಂ |
| ೨೪೩ | ೧೮ | ಮಹದ್ವೈಲ | ಮಹದ್ವೈತವ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨೪೪ | ೨ | ಕಲುಭಾಷೆ | ಕಲಭಾಷೆ |
| ೨೪೪ | ೯ | ಸುಹಿಸು | ಸಹಿಸು |
| ೨೪೯ | ೨೩ | ಅಂಭರೀಷ | ಅಂಬರೀಷ |
| ೨೫೪ | ೧೯ | ಪುನಃಸೌತಿ | ಪುನಃಸ್ತೌತಿ |
| ೨೫೪ | ೨೨ | ಕಮಣಾಂ | ಕರ್ಮಣಾಂ |
| ೨೫೮ | ೫ | ಎಂ | ಎಂಬ |
| ೨೫೯ | ೧೭ | ಎನರಿದು | ಏನರಿದು |
| ೨೬೧ | ೪ | ತಾತ್ಪಯೇಚ | ತಾತ್ಪರ್ಯೇಚ |
| ೨೬೩ | ೨೪ | ಮವ | ಮಯ |
| ೨೭೭ | ೧೪ | ಜೀಹ್ವೋಪ್ನ | ಜಿಹ್ವೋಪ |
| ೨೮೦ | ೫ | ಮಾಡ್ದಮು | ಮಾಡ್ದಪ |
| ೨೮೪ | ೪ | ಮೂರನೆಯ | ಎರಡನೆಯ |
| ೨೮೫ | ೮ | ವಾಸದಾಸ | ವ್ಯಾಸದಾಸ |
| ೨೮೫ | ೧೯ | ವಿಶ್ವದ | ವಿಶದ |
| ೨೮೭ | ೧೭ | ವಾಪಕನು | ವ್ಯಾಪಕನು |
| ೨೮೯ | ೨೦ | ಅದೀಶ | ಅಧೀಶ |
| ೨೯೧ | ೮ | ಪಟ್ಟು | ಬಿಟ್ಟು |
| ೨೯೨ | ೬ | ವಾಪಿಸುವ | ವ್ಯಾಪಿಸುವ |
| ೨೯೩ | ೧೪ | ವ್ಯಾಪ್ರರೂಪ | ವ್ಯಾಪ್ತರೂಪ |
| ೨೯೪ | ೨೪ | ಮೂಲೇಶು | ಮೂಲೇಶ |
| ೨೯೭ | ೧೮ | ಸತ | ಸತ್ವ |
| ೨೯೮ | ೧೨ | ಬಹರದಿ | ಬಹಿರದಿ |
| ೩೦೫ | ೧೪ | ನಾದುದಕಂದ | ನಾದುದರಿಂದ |
| ೩೧೫ | ೨೨ | ಅಪ್ಪನಿಂದ | ಅಪ್ಪಿನಿಂದ |
| ೩೧೬ | ೧೨ | ಇಂದ್ತಿಯ | ಇಂದ್ರಿಯ |
| ೩೨೦ | ೧೩ | ವೆಸಿಪು | ವೆನಿಪ |
| ೩೨೬ | ೧೧ | ಅಧ್ಯಕ್ಷ | ಅವ್ಯಕ್ತ |



| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೩೩೦ | ೯ | ನಖಸುಖ | ನಖಶಿಖ |
| ೩೫೧ | ೨ | ಸಂತುತ | ಸಂತತ |
| ೩೫೩ | ೧೦ | ಸೂಲವಿಷಯವ | ಸ್ಥೂಲವಿಷಯವ |
| ೩೬೨ | ೧೭ | ಪುಣ್ಯೇನ | ಪುಣ್ಯೇನ |
| ೩೬೮ | ೧೦ | ಪಾಲಗ್ನೈದ | ಪಾಲನಗೈದ |
| ೩೮೨ | ೨೩ | ಗುಣಿದೊಳು | ಗುಣದೊಳು |
| ೩೮೪ | ೯ | ಸರ್ವತ | ಸರ್ವತ್ರ |
| ೩೯೩ | ೧ | ಸಾತ್ವಿರಸ | ಸಾತ್ವಿಕರಸ |
| ೪೦೫ | ಹೆಡ್ಡಿಂಗ | ೩ ವ್ಯಾಪ್ತಿಸಂಧಿ | ೪ ಭೋಜನ ಸಂಧಿ |
| ೪೧೬ | ೨೬ | ಬೇದವನ್ನು | ಭೇದವನ್ನು |
| ೪೨೪ | ೨೪ | ಕೋಡ | ಕ್ರೋಡ |
| ೪೨೫ | ೬ | ರಂಧ | ರಂಧ್ರ |
| ೪೩೦ | ೨೦ | ದಿಙ್ಮಾತ್ರ | ದಿಙ್ಮಾತ್ರ |
| ೪೩೯ | ೯ | ಸ್ತಿರತಾ | ಸ್ಥಿರತಾ |
| ೪೫೩ | ೬ | ಉದ್ವಾತಃ | ಉದ್ಗಾತ |
| ೫೫೩ | ೨೧ | ವಾನಾಯೇತಿ | ವ್ಯಾನಾಯೇತಿ |

# ಓದುಗರಲ್ಲಿ ವಿನಂತಿ

ಮುದ್ರಣವು ಸಾಕಷ್ಟು ಅಂದ ತೃಪ್ತಿಕರವಾಗಿದೆ. ಆದರೆ ಸಂಸ್ಕೃತ ಕನ್ನಡ ಮಿಶ್ರವಿರುವದರಿಂದ ಕಂಪೋಜು ಕೆಲಸ ಬಹು ಕಠಿಣ; ಅಲ್ಲದೆ ಇಬ್ಬರು ಮೂವರು ಜಾಗ್ರತೆಯಿಂದ ಪ್ರೂಫ ತಿದ್ದಿದರೂ, ದೃಷ್ಟಿದೋಷದಿಂದ ಅಲ್ಲಲ್ಲೆ ಒತ್ತಕ್ಷರ, ಮಾತ್ರಾ ಕೊಂಬುಗಳು ಕೆಲವು ಬಿದ್ದವೆ. ಸರಿಪಡಿಸಿ ಒಪ್ಪೋಲೆ ಕೊಟ್ಟಿದೆ; **ಮೊದಲಿಗೆ ತಿದ್ದಿಕೊಂಡು ಓದಲು ಬಿನ್ನಹ.**

ಹಿಂದೆ ಕೆಲಜನರು, "ತಾವು ಮೃಷ್ಟಾನ್ನವನ್ನು ಊಟಕ್ಕೆ ಹಾಕುತ್ತಿರುವಿರಿ. ಆದರೆ ಮೃಷ್ಟಾನ್ನದಲ್ಲಿ ಹರಳುಕಡಿದಂತಾಗುತ್ತದೆ"ಎಂದುಸೂಚಿಸಿರುತ್ತಾರೆ. ಇದು ಒಳ್ಳೆಸೂಚನೆ. ಆದರೆ ದೃಷ್ಟಿದೋಷವು ಅನಿವಾರ್ಯವಿದೆ. ಮುಂದಿನಿಂದ ಾಗ್ರತೆಯಿಂದ ಅಚ್ಚುಮಾಡಿಸುತ್ತದೆ. — **ಸಂಚಾಲಕ.**

ಶ್ರೀ ಉಪೇಂದ್ರ ತೀರ್ಥ ಅನುಗ್ರಹೀತ ಶ್ರೀ ಜಗನ್ನಾಥವಿಠಲರ ಉಪಾಸ್ಯ

**ಗರುಡವಾಹನ ಶ್ರೀ ಲಕ್ಷ್ಮೀನೃಸಿಂಹ ದೇವರು**



**ನರಸಿಂಹ ಪಾಹಿ ಲಕ್ಷ್ಮೀನರಸಿಂಹ**
**ಗರುಡವಾಹನ ಲಕ್ಷ್ಮೀನರಸಿಂಹ**

(ಜ.ವಿ.)

॥ ಶ್ರೀ ಗುರು ರಾಜೋವಿಜಯತೇ ॥

# ಮಂಗಲ ಸುಳಾದಿಗಳು

**ಶ್ರೀಹಯವದನರು**

ರಾಗ-ಮುಖಾರಿ ಧ್ರುವತಾಳ.

ಮುಂದೆ ನೃಸಿಂಹ ನಮ್ಮ ಕಾಟಕರೀಗಾ ।
ಬಂದ ವ್ಯಸನಗಳ ಬ್ಯಾಗದಿ ಖಂಡಿಸೈಯ್ಯಾ ।
ತಂದೆಯಿಂದ ನೊಂದಿದ್ದ ಕಂದನ್ನಾಕಾಯಿದಂತೆ ।
**ಇಂದೆಮ್ಮ ಕಾಯಬೇಕೊ ವೃಂದಾರಕಾರರಸಾ ।**
ನಂದಕುಮಾರಕನು ಹಿಂದೆ ಚಕ್ರವಿಡಿದು ।
ಇಂದ್ರನ್ನತನಯಗೆ ಎಂದೆಂದುಬರುತಿಪ್ಪ ।
ದಂಡುಗವ ಬಿಡಿಸಿ ಛಂದದಿ ಕಾಯಿದಂತೆ ।
**ಇಂದೆಮ್ಮ ಎಡರಾನು ತಪ್ಪಿಸಿ ಕಾಯಬೇಕು ।**
ಇಂದೀವರಾಕ್ಷಾ ಬಹಳ (ಭಾಳಾ) ನೊಂದೆನು ಶ್ರೀ ರಾಮ- ।
ಚಂದ್ರಸುಜನಬಂಧು ಸಿಂಧು ಬಂಧವಿಹಾರಾ । ಮುಂದೆ॥
ಇಂದಿರೇಶನೆ ಕುವಲಯದೊಳು (ತಾಕುಟಾರಿಯಲಿ) ಖಳ।
ವೃಂದವ ಕೊಂದ ಕೊಂದ ನಂದಿವಾಹನ ಪ್ರೀಯಾ ।
ಸಂದೋಹಾನೂರಾತತ್ವ ಸಂದೇಹವ ಬಿಡಿಸಿ ।
ಇಂದು ಎನ್ನಮನದಿ ನಿಂದು ನೀ ಸಲಹಯ್ಯಾ ।
ನಿಂದೆಬಾರದೆಂತೆನ್ನಾ ಸಲಹ ಬೇಕಯ್ಯಾ ।
ಮಂದಮತಿ ತಿದ್ದಯ್ಯಾ ಕೃಪೆ ।
ಯಿಂದ ಹಯವದನಾ ॥ ಮುಂದೆನೃಸಿಂಹ ॥ ೧ ॥

**ನು ಠಿ ಯಾ**

ಶ್ರವಣ ಮನನ ಧ್ಯಾನದಿರವನು ।
ಭುವನ ಪಾವನ ಎನ್ನ ಮನದಲ್ಲಿರಿಸೈಯ್ಯಾ

ದಿವಿಜರಾಜನಿನ್ನ ತೋರಿಸೊ ।
ಸವೆಯದ ಕರ್ಮದ ಆ ರಾಶಿಯ ಬಿಡಿಸೋ ।
ದಿವಿಜರಾಜ ನಿನ್ನ ನಿನ್ನು ತೋರಿಸೊ ಜನನಮರಣ ಮಾ ।
ರ್ಗವ ತಪ್ಪಿಸಿ **ಹಯವದನ ಉತ್ಕ್ರಾಂತಿ ಪಥದಲ್ಲಿರಿಸೊ।**
ದಿವಿಜರಾಜ ನಿನ್ನ ತೋರಿಸು ॥ ೨ ॥

**ರೂಪಕ**

**ಅರ್ಚಿರಾದಿ ಮಾರ್ಗದಿಪೋಗಿ ವಾಯುದೇವರು।**
ಹೆಚ್ಚು ಕುಂದನು ನೋಡಿ ಅಪ್ರತಿಕಾಲಂಬನರ।
ಅಚ್ಯುತಾನಿದ್ದಲ್ಲಿದ್ದಾನು ।
ಬಚ್ಚಿಟ್ಟು ಪ್ರತಿಕಾಲಂಬನರ ವಿರಿಂಚ್ಯಾದ್ಯಾ ।
ರಿಚ್ಛೆಯಲ್ಲಿರಿ ಎಂಬಾರು ।
ಮುಚ್ಚಿಕೊಂಡಿಹ ಲಿಂಗಾದೇಹ "ಹಯವದನ" ।
ಮೆಚ್ಚಿ ವಿರಜೆಯಲ್ಲಿ ಕೊಚ್ಚುಯಲೆಲ್ಲಾ ವಾರಿಧಿಯಾವಳಕೊಳಾರಿ ॥ ೩ ॥

**ತ್ರಿ ವಿ ಡಿ**

ಸಾಮಿಪ್ಯ ಸಾರುಪ್ಯಯೆಂದು । ಸಾಯುಜ್ಯಯೆಂದು
ಮುಕ್ತಿ ಯೋಗ್ಯರಿಗೊಪ್ಪೋದು । **ಯುಜಿರ್‌ಯೋಗೇ**
**ಯೆಂಬಾಧಾತು ಪೇಳಾಲು** । ಶ್ರೀ ಹರಿಯೊಳೈಕ್ಯಾ
ಬಾರದು ಎಂದೆಂದು **ಯುಜಿರುಯೋಗೇ**। ಶ್ರೀ
ಲೋಲ"ಹಯವದನನ್ನಾ"ಣೆ। ಶ್ರೀವರ ಪುರುಷೋತ್ತ
ಮನೆಂಬಾನಾಮವ ನೋಡಿಕೊ ಯುಜಿರ ॥ ೪ ॥

**ಝಂ ಪ**

ಅಲ್ಲಿ**ಜಗದ್ವ್ಯಾಪಾರ ವರ್ಜಿತಾವೆಂದೆಂದು** ।
ಬಲ್ಲಿದ ಶ್ರೀ ಹರಿಮಹಿಮೆ ಮುಕುತರಿಗೆ ಸಲ್ಲದಾಗಿ।
ಬಲ್ಲವರು ಗುರುವ್ಯಾಸನಾ ಚಲ್ವಸೂತ್ರವನಂಬಿ
ಮನದ ಭ್ರಮಿಗಳ ಬಿಡಿರೋ। ಬಲ್ಲವರು ಗುರುವ್ಯಾಸನ।
ಜಲಜಾಕ್ಷ ಚಿತ್ರಚರಿತ್ರನಾ ಮುಕುತರಿಗೆ।
ಸಲ್ಲದಾಗಿಹಯವದನ ಹರಿಸರ್ವೇಶ್ವರನಾ।
ಬಲ್ಲವರು ಗುರುವ್ಯಾಸನ ॥೫॥



**— ಅ ಠ —**

ವೃದ್ಧಿಹ್ರಾಸಗಳಿಲ್ಲ ಜನನಮರಣಗಳಿಲ್ಲ।
ಶುದ್ಧಸಾಧನದಿಂದೊಪ್ಪುವಾರೆಂದೆಂದು **ಸ್ವಾದ್ವನ್ನಂಗಳ ನುಂಬರು**
ಇದ್ದ ಸುಖವತೋರಿಸುವದೆ ಸಾಕೆಂದು।
ಇದ್ದು ಹೆಚ್ಚನುಇಚ್ಛಿಸದೆ ನೀವೆ ನೋಡಿರೋ।
**ಸ್ವಾದ್ವನ್ನಂಗಳ ಹೃದ್ಯರಾಭಾ ಹಯವದನ** ಮುಕ್ತಾರೊಡೆಯಾ।
ಪದ್ಮನಾಭಾದ್ಯಾರುಅಲ್ಲೆ। ವೇದ ಂಗಳು
ಸ್ವಾದ್ವದ್ನಗಳನುಂಬರು ॥೬॥

**— ಅ ಠ ತಾ ಳ —**

ಅಲ್ಲಿ ಬಹಳ ಸೇವಿಯ ಮಾಡಿದವರಿಗೆ।
ಅಲ್ಲಯಹರಿರೂಪ ಬಾಹೋದುಕ್ತಿಯುಸಿದ್ಧ ।
ಬಲ್ಲವರೆಲ್ಲನೀವೆನೋಡಿರೋ।
ಪುಲ್ಲನಾಭ ಹಯವದನ ಮುಕ್ತರೊಡಿಯಾ।
ಸಲ್ಲದಾಗಿ ಅನುಸಾರ ಫಲವತಾನೀವನು।
ಬಲ್ಲವರೆಲ್ಲ ನೀವೆ ನೋಡಿರೋ ॥ ೭ ॥

**— ಏ ಕ ತಾ ಳ —**

**ಮನೋಜವೇಷ್ವಸ ಮಹಾಬಭೂವು।** ಎಂಬ ನಿಗಮವ
ಮನಕೆ ನೀವೆಲ್ಲ ತಂದುಕೊಳ್ಳಿರೋ।
ಚಿನುಮಯವಾದದ ಸಲ್ಲವರು। ಅನುಕೂಲ ಶ್ರೀ ಹರಿಗೆ
ಅತಿಶಯ ಪ್ರಿಯರ್ಯೆಲ್ಲಾ।
ಚಿನುಮಯವಾದ ಸಜ್ಜನರು। ಘನದುಗ್ಧಾಮೃತ
ಹಯವದನ ಮೆಚ್ಚುವಂತೆ ಚಿನುಮಯ ॥ ೮ ॥

**— ಜತಿ ಅಠತಾಳ —**

ಹರಿಯೆ ಸರ್ವೋತ್ತಮಾ ಸುರರೆಲ್ಲ ಗುರುಗಳು।
ಸಿರಿಹಯವದನನೆ ಮಧ್ವಾಚಾರಿಯದೈವ ॥ ೯ ॥

‖ ಶ್ರೀ ಗುರುರಾಜೋವಿಜಯತೇ ‖

## ಶ್ರೀ ಹಯವದನರು

ಸುಳಾದಿ ರಾಗ ಭೈರವಿ ತಾಳ ಅಠಿಯ

ವೇದಶಾಸ್ತ್ರ ಪುಶಿ ಪ್ರತ್ಯಕ್ಷ ಮೊನವೆಂಬುವಾ ತಾ ।
ಓದಿದ ತನ್ನಶಾಸ್ತ್ರವ–ತಾನೇನೀಗಿದಾ ।
ಸ್ಯಾದೆಂಬವಾದಿಗೆ ನಾಶಾವೆಂಬದಾಗಿ ಮಾತುಸಲ್ಲದಾಗಿ ।
ವಾದದಲ್ಲಿ ಪರರನಲ್ಲೆಂಬುದೆಂತಯ್ಯಾ ।
ಆದಿವಸ್ತುವನ್ನೆ ಶೂನ್ಯವೆಂಬಾವಾದಿ ತನ್ನಿಷ್ಟಾವ ।
ಸಾದಿಸಿಕೊಡುವಾನಾತ್ಮಾ ಆರೆಂದೆಂಬಾನು ।
ನೋದನಾದಿಂದಲೆ ಪರಮಾಣುಗಳೆ ಜಗವ ಮಾ ।
ಡಿದಾವೆಂಬಾವಾದಿ ಕುಂಭಾರನಾಕಾಣನೆ ।
ಬೂದಿಯ ಹೋಮವೆ ಸಾಕು ದೈವ ಬ್ಯಾಡಾವೆಂಬವಾದಿ ।
ಜೋಧೆಯನೆಲ್ಲವ ಭೀಸ್ಸಟಿ (ತಿ) ಮಾಡಿದಾ ।
ಮಾಧವನೆ ತಾನೆಂಬವ ಮನೆ ಮನೆಗಾಗಿ ಪೋಗಿ ಬಾ ।
ರಾದಾ ಭವಣಿಯನ್ಯಾಕೆ ಬಡುವಾನ್ಯೆಯ್ಯಾ ।
ಕ್ರೋಧ ಮದಮತ್ಸರವ ಕಳದಾಕೋವಿದರಿಗೆ ।
ಆದೂದು ಪೇಳಿದೆನ್ನೆಸೆ ದೂಷಕನಲ್ಲ ।
ಶೋಧಕರೆಲ್ಲರು ನೋಡಿ ಉಣಬಲ್ಲ ಜಾಣರ್ಬಲು ।
ಸ್ವಾದುರಸ ದೊರಕಲು ಸೇವಿಸಬೇಕು ।
ಶ್ರೀ ಧರಿಯಾನಾಳ್ದಾ ವಿದ್ದ್ಯಾ ಪ್ರದ ಹಯುವದನನ್ನ ।
ಪಾದವಾಸೇರಿದರಿಗಿಹಪರಾತಪ್ಪದು ‖ ೧ ‖

— ಮಠಿಯ —

ಬೊಮ್ಮಗಿಷ್ಟವ ಮಾಡಿದಾ ।
ಸುಮ್ಮನಸರ್ಗೆಸುಧಿಯನೂಡಿದ ।
ಇಮ್ಮಹೀಯ ಶಿಶುವ ಪೊರದಾ ।
ವಾಮನ್ನ ರಾಮರಾಮ ನೆನಸಿದಾ । ಸಮ್ಮನಸರ್ಗೆ ‖
ನಮ್ಮ ಹಯುವದನ ಕೃಷ್ಣ ಬೌದ್ಧಾ ।
ಧರ್ಮ ರಕ್ಷಿಸಲಿಕ್ಕೆ ಕಲ್ಕಿ ಎನಿಸಿದಾ । ಸುಮ್ಮನಸರ್ಗೆ ‖ ೨ ‖



— ರೂಪಕ —

ಭಾರತಾ ರಾಮಾಯಣದಾ ಮಹಿಮೆಯಲ್ಲಿ ।
ಸೂರೂಪಾನೆಂಬದು ವಿಚಾರಿಸುಮನುಜಾ ।
ಆರುದರುಶನದವರು ಆರು ಯುಗಾದವರು ।
ಪೂರುವಯುಗದ ಮುನೇಂದ್ರರು ಸುಪಂಥಾವಿದು ।
ಸುರರೀಗೆ ಸಿರಿಹಯುವದನ ಕ್ಷುದ್ರ ನರರಿಗಲ್ಲಗಡ ।
ನೋಡವರಾಮತವಾ ‖ ೩ ‖

— ರೂಪಕ —

ಪಾಲುಸವಿಗೆ ಗೋಪಾಲಬಾಲಕಬೇಕು ।
ಫಾಲದ ಬರಹಕ್ಕೆಲ್ಲ ವನ ವನ ಕುವರನೆ ಬೇಕು ।
ಶ್ರೀಲೋಲ ಹಯುವದನ ಪಾಲಕನೆಂಬುವದಾ ।
ಈ ಲೋಕಾದಲ್ಲೀಗಾ ಕೇಳಿದುದಿಲ್ಲವೆ ।
ಕಾಲಾನಸೂನು ಗೋಪಾಲಕ ಕೃಷ್ಣನ ।
ಆಳೆಂದು ಬಲ್ಲವರ್ಗಾಲೋಚನೆಸಲ್ಲ ‖ ೪ ‖

— ಝಂಪ —

ಅಂದುವಾಮನನಾಗಿ ಬಲಿಯ ಬಂಧಿಸಿ ತನ್ನ ।
ಛಂದದ ಪದತ್ರಯದಿ ನಿಂದು ಮೂಲೋಕದೊಳು ।
ಬಂದು ಬಂದುದುಭವಸಿ ತಮ್ಮ ಕರ್ಮದಫಲ ।
ದಂದುಗವನುಂಬ ಮನುಜ ವೃಂದದೊಳು ।
ಕೊಂದು (ಕುಂದು) ಕೊರತೆಗಳಿಲ್ಲದ ನಿಮ್ಮ ನಿಮ್ಮ ಹಯುವದನ
ಹರಿಪದವ ।
ಲ್ಲೆಂದು ವಾದಿಸುವ ಬಲ್ಲವಿಕಿಗೇನಂಬೆ ‖ ೫ ‖

— ತ್ರಿವಿಡಿ —

ಉಂಡು ಮನೆಗೆರಡನ್ನು ಬಗೆವಾ ।
ಭಂಡ ತಾನುದ್ದಂಡ ತನವನು ।
ಕಂಡು ಕಂಡವರೆಲ್ಲ ನಗರೆ ಕೇಳಿ ಸಜ್ಜನರು ।
ಕಂಡಾಡಲಿ ಬ್ಯಾಡ ಕೊಟ್ಟು ಹೊರವ ।

ಪುಂಡರೀಕಾಕ್ಷ ತ್ರಿವಿಕ್ರಮರಾಯನ ।
ಚಂಡಮುನಿವನು ಬಿಟ್ಟು ಹಯವದನನಂಘ್ರಿ ।
ತೋಂಡರು ನಾವೆಂದು ತಂಡ ತಂಡದವಾದಿಗಳು ಭಜಿಸಿರೋ
ಬಿಡದೆ ॥ ೬ ॥

— ಅಠ ತಾಳ —

ದರ್ಪವ್ಯಾತಕೆ ವಾದಿ ಹರಿಯರಾಣಿಯು ಸಿರಿ -
ಯ ಪ್ರಸಾದದಿಂದ ಬಂದ ಸಂಪದ ಮದದಿಂದ ।
ತತ್ಪತಿಹಯವದನ್ನಾಜ್ಞಾಧಾರಕ ಸತಿ ।
ಒಪ್ಪಿಕೊಂಡಿಪ್ಪಳು ನಿಮ್ಮ ಪತ್ನಿಯ ಕೇಳಿ
ಉಪ್ಪತಿಂಬರ್ರೈ ನೀರ ಕುಡಿದವರು ಲಕುಮಿಯಾ ।
ನಪ್ಪುವನ್ನಾ ಕರುಣ ತಪ್ಪಿಸಿ ಕೊಳಬ್ಯಾಡಾ ॥ ೭ ॥

— ಏಕ ತಾಳ —

ಹರಿಯನೆ ನೆನೆವೆನು ಹರಿಯನೇ ನಮಿಸುವೆನು ।
ಹರಿಯ ಕಥೆಗಳನು ಕಥಿಸುವೆ ಮಥಿಸುವೆ ।
ಹರಿಯ ಪ್ರಸಾದಗಳ ಮನ್ನಿಸುವೆ ನರಹರಿ
ಹರಿ ಹರಿ ಎಂದು ದುರಿತವ ಕಳೆವೆನು ।
ಸಿರಿ ಹಯವದನನ ಚರಣದ ಭಕುತಿಯೆ ।
ದೊರಕೊಂಡರೆ ಸಾಕೆನ್ನ ಜನುಮಜನುಮದಲೀ ॥ ೮ ॥

— ಜತಿ —

ತಮತಮ್ಮ ಮನಕೆ ಬಂದಂತೆ ಪೇಳಾಲವರು ।
ನಮಗೆ "ಶ್ರೀ ಹಯವದ ನನೇ" ಸರ್ವೇಷ್ಟದಾಯಕಾ ॥ ೯ ॥

॥ ಶ್ರೀ ಗುರುಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥
ಶ್ರೀ ಹಯದವನರ

ಇವೆರಡು ಸುಳಾದಿಗಳು ಹೊಸದಾಗಿ ಶ್ರೀ ಚಂದಿ ಕೇಶವರಾವ ಹುಬ್ಬಳ್ಳಿ ಇವರ ಪುಸ್ತಕದಲ್ಲಿ ತೊರತಿವೆ. ಸಕಲ ವಿಘ್ನ ಪರಿಹಾರ ಕ್ಕೋಸುಗ ಆದಿಯಲ್ಲಿ ಸ್ತೋತ್ರ ಗೈಯಲು ಕೊಡಲಾಗಿದೆ.

---



ಶ್ರೀ ಲಕ್ಷ್ಮೀ ನೃಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಸುಪ್ರಸೀದ
ಶ್ರೀಗುರು ರಾಜೋವಿಜಯತೇ

# ಶ್ರೀ ಜಗನ್ನಾಥ ದಾಸಾರ್ಯರ ಉಪಾಸ್ಯ ಸಕಲ ದುರಿತ ನಿವಾರಕ

## ಗರುಡ ವಾಹನ ಶ್ರೀ ಲಕ್ಷ್ಮೀ ನೃಸಿಂಹ ದೇವರ ಸ್ತೋತ್ರ ॥

॥ ಶ್ರೀ ಜಗನ್ನಾಥ ವಿಠಲ ॥

ಪದ ರಾಗ ಶಂಕರಾಭರಣ–ಅಟ್ಟ ತಾಳ

ನರಸಿಂಹಾ ಪಾಹಿಲಕ್ಷ್ಮಿ ನರಸಿಂಹ ।
ನರಸಿಂಹಾ ನಮಿಪೆ ನಾ ನಿನ್ನ ।
ಚಾರು ಚರಣ ಕಮಲಕೆ ನೀ ಎನ್ನ । ಅಹ ।
ಕರವ ಪಿಡಿದು ನಿಜ ಶರಣನೆಂದನಿಸೊ । ಭಾ ।
ಸುರ ಕರುಣಾಂಬುಧೆ **ಗರುಡ ವಾಹನ ಲಕ್ಷ್ಮೀ ನರಸಿಂಹ** ॥ಪಲ್ಲ॥
ತರುಳ ಪ್ರಲ್ಹಾದನ್ನ ನುಡಿಯಾ ಕೇಳಿ ।
ತ್ವರಿತಾದಿ ಬಂದ್ಯೊ ಎನ್ನೊಡಿಯಾ । ಏನು ।
ಕರುಣಾಳು ಭಕ್ತರ ಭಿಡಿಯಾ । ಮೀರ ।
ಲರಿಯೊ ಎಂದೆಂದು ಕೆಂಗಿಡಿಯಾ । ಅಹ ।
ಭರದಿಂದೂಗುಳುತ ಬೊಬ್ಬಿರಿದು ಬೆಂಬತ್ತಿ । ಕ
ರ್ಬುರ ಕಶ್ಯಪುವಿನ ಹಿಂಗುರುಳ ಪಿಡಿದ । ಲಕ್ಷ್ಮಿ ನರಸಿಂಹ ॥ ೧ ॥
ಪ್ರಳಯಾಂಬುನಿಧಿ ಘನಘೋಷ । ದಂತೆ ।
ಘುಳಿ ಘುಳಿಸುತಲಿ ಪ್ರದೋಷ । ಕಾಲ ।
ತಿಳಿದು ದೈತ್ಯನ ಅತಿರೋಷ । ದಿಂದ ।
ಸ್ಪಳಿಸಿ ಮೇದಿನಿಗೆ ನಿರ್ದೋಷ ॥ ಅಹ ॥
ಶಳಶಳವುತ ಚರ್ಮಸುಲಿದ ಕೆನ್ನೆತ್ತರೋ ।
ಕುಳಿಯಾನಾಡಿದಿ ದಿಶಾವಳಿಗಳೊಳಗೆ ಲಕ್ಷ್ಮೀನರಸಿಂಹ ॥ ೨ ॥

ಕ್ರೂರದೈತ್ಯನ ದೊರೇಗರಳಾ । ತೆಗಿ ।
ದ್ವಾರಮಾಡಿದೆ ನಿಜಕೊರಳಾ । ಕಂಡು ।
ವಾರಿಜಾಸನ ಮುಖರರಳ । ಪುಷ್ಪ ।
ಧಾರಿಗರೆದು ವೇಗ ತರುಳಾ ॥ ಅಹ ।
ಸೂರಿ ಪ್ರಲ್ಹಾದನ್ನ ತೋರಿತವಾಂಘ್ರಿ ಸ ।
ರೋರುಹಸಾರ್ದರೊ ಕಾರುಣ್ಯನಿಧಿ ಲಕ್ಷ್ಮೀ ನರಸಿಂಹ ॥ ೩ ॥

ಜಯಜಯದೇವ ವರೇಣ್ಯ । ಮಹ ।
ಧ್ಭಯನಿವಾರಣನೆ ಅಗಣ್ಯ । ಗುಣಾ ।
ತ್ರಯಘೋರ ದುರುತಾರಣ್ಯ । ಧನಂ ।
ಜಯ ಜಗದೇಕಶರಣ್ಯ ॥ ಅಹ ॥
ಲಯ ವಿವರ್ಜಿತ ಲೋಕ ।
ತ್ರಯ ವ್ಯಾಪ್ತ ನಿಜ ಭಕ್ತ ।
ಪ್ರಿಯ ಘೋರ ಭಯಹರ ।
ದಯ ಮಾಡೆಂದರೊ ಲಕ್ಷ್ಮೀನರಸಿಂಹ ॥ ೪ ॥

ಕುಟಿಲ ದ್ವೇಷದವನೀನಲ್ಲ । ನಿನ್ನ ।
ಭಟಕಂಜಿದರಾಸುರರೆಲ್ಲಾ । ನರ ।
ನಟನೆ ತೋರಿದ್ಯೋ ಲಕ್ಷ್ಮೀನಲ್ಲಾ । ನಾಪಾ ।
ಸಟಿ(ಠಿ) ಕಾಣೆನಪ್ರತಿಮಲ್ಲಾ ॥ ಅಹ ।
ವಟಪತ್ರ ಶಯನ ಧೂ । ರ್ಜಟಿವಂದ್ಯ ಜಗನ್ನಾಥ ।
ವಿಠಲಕೃತಾಂಜಲಿ । ಪುಟದಿ ಬೇಡುವೆ ಲಕ್ಷ್ಮೀನರಸಿಂಹ ॥ ೫ ॥

॥ ಶ್ರೀ ಮಧ್ವೇಶಾರ್ಪಣ ಮಸ್ತು ॥

---

॥ ಶ್ರೀ ಲಕ್ಷ್ಮೀನರಸಿಂಹಾತ್ಮಕ ॥
ಪಾಂಡುರಂಗ ವಿಠ್ಠಲಾಯನಮಃ



# ಹರಿಕಥಾಮೃತಸಾರ

## ಟೀಕಾ ಪಂಚರತ್ನ ಪ್ರಕಾಶಿಕಾ.

## ಮಂಗಳಾಚರಣ ಧ್ಯಾನಶ್ಲೋಕಗಳು

ಹರಿಃ ಓಂ ಶ್ರೀಗುರುಭ್ಯೋನಮಃ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ॥
ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥ ೧ ॥
ಸರ್ವ ವಿಘ್ನ ಪ್ರಶಮನಂ ಸರ್ವ ಸಿದ್ಧಿ ಕರಂ ಪರಮ್ ॥
ಸರ್ವ ಜೀವ ಪ್ರಣೇತಾರಂ ವಂದೇ ವಿಜಯದಂ ಹರಿಮ್ ॥ ೨ ॥
ಧ್ಯಾಯೇನ್ ನೃಸಿಂಹಮುರುವೃತ್ತರವಿ ತ್ರಿನೇತ್ರಂ
ಜಾನು ಪ್ರಸಕ್ತಕರಯುಗ್ಮಮಥಾ ಪರಾಭ್ಯಾಮ್ ॥
ಚಕ್ರಂ ದರಂ ಚ ದಧತಂ ಪ್ರಿಯಯಾ ಸಮೇತಂ
ತಿಗ್ಮಾಂಶುಕೋಟ್ಯಧಿಕತೇಜಸಮುಗ್ರ್ಯ ಶಕ್ತಿಮ್ ॥ ೩ ॥

ಅಷ್ಟೈಶ್ವರ್ಯ ಸಮಾಯುಕ್ತಂ ರಮಯಾಸಹಿತಂ ಪ್ರಭುಮ್ ।
ಶ್ವೇತಾಬ್ಜಸ್ಥಕರೇ ಪದ್ಮಂ ಗದಿನಂ ಶಂಖ ಚಕ್ರಿಣಮ್ ॥ ೪ ॥
ಶುದ್ಧಸ್ಫಟಿಕ ಸಂಕಾಶಂ ಸರ್ವಾಭರಣ ಭೂಷಿತಂ ।
ವನ ಮಾಲಾಧರಂ ದೇವಂ ಧ್ಯಾಯೇನ್ನಾರಾಯಣಂ ಹರಿಮ್ ॥ ೫ ॥
ಶ್ರೀ ಶಾಂಘ್ರಿಭಕ್ತಿಂ ಹರಿದಾಸದಾಸ್ಯಂ॥
ಪ್ರಪನ್ನಮಂತ್ರಾರ್ಥ ದೃಢೈಕನಿಷ್ಠಾಂ ॥
ಗುರೋಃಸ್ಮೃತಿಂ ನಿರ್ಮಲಬೋಧಬುದ್ಧಿಂ ॥
ಪ್ರದೇಹಿ ಮೇತೇ ಪರಮಂ ಪದಂ ಶ್ರೀ ॥ ೬ ॥
ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ ॥
ಆನಂದತೀರ್ಥ ಮತುಲಂ ಭಜೇ ತಾಪತ್ರಯಾಪಹಮ್ ॥ ೭ ॥

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ॥
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟ ಭಗವನ್
ನಮಃ ಶ್ರೀ ಮನ್ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥ ೮ ॥
ಶ್ರೀ ಮಧ್ವಸಂಸೇವನಲಬ್ಧ ಶುದ್ಧ –
ವಿದ್ಯಾಸುಧಾಂಭೋನಿಧಯೋಽಮಲಾ ಯೇ ॥
ಕೃಪಾಲವಃ **ಪಂಕಜನಾಭತೀರ್ಥಾಃ**
ಕೃಪಾಲವಃ ಸ್ಯಾನ್ಮಯಿ ನಿತ್ಯಮೇಷಾಮ್ ॥ ॥ ೯ ॥

ಭೂದೇವೀ ತನಯಾಸಕ್ತರಕ್ಷ್ಮೀಶ ಪದ ಮಾನಸಃ ॥
**ನೃಹರ್ಯಾಖ್ಯಗುರುಭೂರ್ಯಾ** ದಸ್ಮದಿಷ್ಟಾರ್ಥಸಿದ್ಧಯೇ ॥೧೦॥

ಮಾಧವಾಂಘ್ರಿಯುಗಾಸಕ್ತಾಃ **ಮಾಧವಾಖ್ಯಮುನೀಶ್ವರಾಃ** ॥
ವಿತೇನುಃ ಮಧ್ವತೀರ್ಥಂ ಯೇ ಪದ್ಯುಸ್ತೇಭೀಷ್ಟ ಸಂತತಿಮ್ ॥ ೧೧ ॥
ಶ್ರೀಮದ್ರಮಾರಮಣಸದ್ಗಿರಿಪಾದಸಂಗಿ
ವ್ಯಾಖ್ಯಾ ನಿನಾದ ದಲಿತಾಖಿಲ ದುಷ್ಟದರ್ಪಂ ॥
ದುರ್ವಾದಿ ವಾರಣ ವಿದಾರಣ ದಕ್ಷದೀಕ್ಷ
**ಮಕ್ಷೋಭ್ಯತೀರ್ಥ** ಮೃಗರಾಜ ಮಹಂ ನಮಾಮಿ ॥ ೧೨ ॥



ಶ್ರೀಮನ್ನ್ಯಾಯಸುಧಾ ಯೇನ ನಿರ್ಮಿತಾ ಧೀಮತಾಂಮತಾ ॥
ತಂ ಜ್ಞಾನಾದಿಗುಣೋಪೇತಂ **ಜಯತೀರ್ಥ**ಗುರುಂ ಭಜೇ ॥ ೧೩ ॥
ಯದ್ವೃಂದಾವನ ಸೇವಯಾ ಸುವಿಮಲಾಂ ವಿದ್ಯಾಂ ಪಶುಂ ಸಂತತಿಮ್
ಧ್ಯಾನಂ ಜ್ಞಾನ ಮನಲ್ಪಕೀರ್ತಿನಿವಹಂ ಪ್ರಾಪ್ನೋತಿ ಶೀಘ್ರಂ ಜನಃ ॥
ತಂ ವಂದೇ ನರಸಿಂಹ ತೀರ್ಥನಿಲಯಂ ಶ್ರೀವ್ಯಾಸರಾಟ್ ಪೂಜಿತಮ್ ।
ಧ್ಯಾಯಂತಂ ಮನಸಾ ನೃಸಿಂಹಚರಣಂ
**ಶ್ರೀಪಾದರಾಜಂಗುರುಮ್** ॥ ೧೪ ॥

ಅರ್ಥಿಕಲ್ಪಿತಕಲ್ಪೋಯಂ ಪ್ರತ್ಯರ್ಥಿಗಜಕೇಸರೀ ॥
**ವ್ಯಾಸತೀರ್ಥಗುರುರ್ಭೂಯಾ** ದಸ್ಮದಿಷ್ಟಾರ್ಥಸಿದ್ಧಯೇ ॥ ೧೫ ॥

ತಪೋವಿದ್ಯಾವಿರಕ್ತ್ಯಾದಿ ಸದ್ಗುಣೌ ಘಾಕರಾನಹಂ ॥
**ವಾದಿರಾಜಗುರೂನ್ ವಂದೇ** ಹಯಗ್ರೀವದಯಾಶ್ರಯಾನ್ ॥ ೧೬॥

ಮೂಕೋಪಿ ಯತ್ಪ್ರಸಾದೇನ ಮುಕುಂದಶಯನಾಯತೇ ॥
ರಾಜರಾಜಾಯತೇ ರಿಕ್ತೋ **ರಾಘವೇಂದ್ರಂ ತಮಾಶ್ರಯೇ** ॥೧೭॥

**ಶ್ರೀಸತ್ಯಬೋಧೋ** ನಿಜಕಾಮಧೇನುಃ ।
ಮಾಯಾತಮಃ ಖಂಡನ ಚಂಡಭಾನುಃ ॥
ದುರಂತ ಪಾಪ ಪ್ರದಹೇ ಕೃಶಾನುಃ ದೇಯಾನ್ ।
ಮಮೇಷ್ಟಂ ಗುರುರಾಜ ಸೂನುಃ ॥ ॥೧೮॥

ವಾದೇ ವಿಜಯ ಶೀಲಾಯ ವರದಾಯ ವರಾರ್ಥಿನಾಮ್ ॥
ವದಾನ್ಯ ಜನಸಿಂಹಾಯ **ವರದೇಂದ್ರಾಯ ತೇನಮಃ** ॥೧೯॥
ಧರಣೀಮಂಡಲೇಖ್ಯಾತಂ ಧೈರ್ಯಾದಿಗುಣ ಬೃಂಹಿತಮ್ ॥
ಧಿಕ್ಕೃತಾಶೇಷವಾದೀಭಂ **ಧೀರಸಿಂಹಮಹಂಭಜೇ** ॥ ೨೦ ॥
**ಭುವನೇಂದ್ರಗುರುಂ ವಂದೇ** ದುರ್ಮತಧ್ವಾಂತಭಾಸ್ಕರಮ್ ॥
ಚಿಂತಾಮಣಿಂ ಸ್ವಾಶ್ರಿತಾನಾಂ ಭಜತಾಂ ಕಲ್ಪಪಾದಪಮ್ ॥ ೨೧ ॥
ಪ್ರಕಟೇ ಕೃತಟೀಕೋಕ್ತಿಃ ಮರ್ಕಟೀಕೃತ ಮಾಯಿರಾಟ್ ॥
**ಚಕ್ರೃತಾ ವ್ಯಾಸ ತತ್ವಜ್ಞ** ಮುಸ್ಕರೀಂದ್ರಃಕೃಪಾಂ ಮಯಿ ॥ ೨೧ ॥

**ವಿಷ್ಣುತೀರ್ಥಃ ಕಲ್ಪವೃಕ್ಷೋ ವಿಷ್ಣುತೀರ್ಥ**ಶ್ಚಕಾಮಧುಕ್ ||
ಚಿಂತಾಮಣಿಃ **ವಿಷ್ಣುತೀರ್ಥ**ಯತೀಂದ್ರಃ ಸರ್ವಕಾಮದಃ ||೨೨||
ಓಂಕಾರತೋ ಜನ್ಮನ ಈಡ್ಯಭಕ್ತ್ಯೈ
ಸಾಫಲ್ಯರೂಪಂ ಸ್ವಪದಾಭಿಷೇಕಮ್ |
ಶ್ರೀರಾಘವೇಂದ್ರಂ ಕೃತವಂತ ಮಾರ್ಯಂ |
ಸದಾಜಪಂತಂ **ರಘುಕಾಂತ**ಮೀಡೇ ||೨೩||

## ಶ್ರೀದಾಸವರ್ಯರು

ನಮಃ **ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ** |
ನಮಃ **ಪುರಂದರಾರ್ಯಾಯ ವಿಜಯಾರ್ಯಾಯ** ತೇನಮಃ||೧||
**ಪುರಂದರಃ**ಕಲ್ಪವೃಕ್ಷೋ **ವಿಜಯರಾಜಶ್ಚ** ಕಾಮಧುಕ್ ||
**ಚಿಂತಾಮಣಿಶ್ಚ ಗೋಪಾಲಃ** ಏತದ್ದಾಸತ್ರಯಂ ಭಜೇ || ೨ ||
ಮನ್ಮನೋಭೀಷ್ಟವರದಂ ಸರ್ವಾಭೀಷ್ಟ ಫಲಪ್ರದಂ ||
**ಪುರಂದರ ಗುರುಂ ವಂದೇ** ದಾಸಶ್ರೇಷ್ಠಂ ದಯಾನಿಧಿಮ್ || ೩ ||
ಅಜ್ಞಾನತಿಮಿರಚ್ಛೇದಂ ಬುದ್ಧಿಸಂಪತ್ಪ್ರದಾಯಕಮ್ ||
ವಿಜ್ಞಾನ ವಿಮಲಂ ಶಾತಂ **ವಿಜಯಾಖ್ಯಗುರುಂ ಭಜೇ** || ೪ ||
ಗೋಪಪ್ರಖರಸಂಕಾಶಂ ಗೋಪಾಲಾರ್ಚನ ತತ್ಪರಮ್ ||
ಗೋದೇವ ವಂದ್ಯ ಪಾದಾಬ್ಜಂ **ಗೋಪಾಲಾಖ್ಯ**
ಗುರುಂ ಭಜೇ || ೫ ||
ಆಗತಾದಿ ತ್ರಿಕಾಲಜ್ಞಂ ಆಗಮಾರ್ಥವಿಶಾರದಮ್ ||
ತ್ಯಾಗಭೋಗ ಸಮಾಯುಕ್ತಂ **ಭಾಗಣ್ಣಾರ್ಯ** ಗುರುಂಭಜೇ ||೬||
ದಾಸವರ್ಯಂ ದಯಾಯುಕ್ತಂ ದೂರೀಕೃತದುರಾಶಿಷಮ್ ||
ಹರಿಕಥಾಮೃತವಕ್ತಾರಂ **ಜಗನ್ನಾಥ** ಗುರುಂ ಭಜೇ || ೭ ||
ಜಲಜೇಷ್ಟನಿಭಾಕಾರಂ ಜಗದೀಶ ಪದಾಶ್ರಯಮ್ |
ಜಗತೀತಲವಿಖ್ಯಾತಂ **ಜಗನ್ನಾಥ**ಗುರುಂ ಭಜೇ || ೮ ||
ಜಗದಂತಸ್ತಮಶ್ಛೇತ್ತಾ ವಿಕಸಜ್ಞಾನಚಂದ್ರಿಕಃ ||
ಹರಿಕಥಾಮೃತ ಸಾರಾಂಕೋ **ಜಗನ್ನಾಥ** ಗುರೂಡುಪಃ || ೯ ||



ಪ್ರಾಣನಾಥ ಪದದ್ವಂದ್ವಪಂಕಜಾಸಕ್ತಮಾನಸಮ್ ||
ಶಮಾದಿಗುಣ ಸಂಯುಕ್ತಂ **ಶ್ರೀಪ್ರಾಣೇಶ**ಗುರುಂ ಭಜೇ || ೧೦ ||
ಗುರುಭಕ್ತಿಮತಾಂ ಶ್ರೇಷ್ಠಂ ಗುರುಪಾದಾವಲಂಬಿನಮ್ ||
ಗುರೂಪದಿಷ್ಟಮಾರ್ಗಸ್ಥಂ **ಗುರುಪ್ರಾಣೇಶ**ಗುರುಂ ಭಜೇ || ೧೧ ||
**ಗುರುಶ್ರೀಶ ಮಹಂ** ವಂದೇ ಗುರುತತ್ವವಿಬೋಧಕಮ್ |
ಗುಹಾಶಯಂ ಗುಣಾತೀತಂ ಭಾವಯಂತಂ ಮಹಾಮತಿಮ್ || ೧೨ ||
ಈಶಕಥಾಪ್ರವಕ್ತಾರಂ ದೇಶಮಾನವ ಬೋಧಕಮ್ ||
ದಾಸವರ್ಯಂ ದಯಾಯುಕ್ತಂ **ಶ್ರೀಶಪ್ರಾಣೇಶ**ಗುರುಂ ಭಜೇ || ೧೩ ||
ಶ್ರೀ ಶಾಂಘ್ರಿಸೇವಕಂ ನಿತ್ಯಂ ಭೂಸುರಾಗ್ರಕುಲೋದ್ಭವಮ್ ||
ವಾಸಮಾದಿ ಶಿಲೇಕ್ಷೇತ್ರಂ **ಶೇಷದಾಸ**ಗುರುಂ ಭಜೇ || ೧೪ ||
ಶ್ರೀಶಪಾದಾಂಬುಜಾಸಕ್ತಂ ವಿರಕ್ತಂ ಕೀರ್ತಿಶೋಭಿತಮ್ ||
ಸುಜನೇಷ್ಟಪ್ರದಂ ಪೂರ್ವಂಪಾರ್ಥಂ **ಶೇಷಗುರುಂ** ಭಜೇ || ೧೫ ||
ದಾಸೀಕೃತಾಶೇಷಜನಂ ದಾಸವರ್ಯಾಂಘ್ರಿಮಾನಸಮ್ ||
ವಶೀಕೃತಗುರುಂ ವಂದೇ (ಮನಸಾ) ವಾಂಙ್ಮನಃ
**ಸ್ವಾಮಿಶರ್ಮಕಂ** || ೧೬ ||
ಆಪಾದಮೌಲಿಪರ್ಯಂತಂ ಗುರೂಣಾ ಮಾಕೃತಿಂ ಸ್ಮರೇತ್ ||
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ || ೧೭ ||
ಪೃಥ್ವೀಮಂಡಲಮಧ್ಯಸ್ಥಾಃ ಪೂರ್ಣಬೋಧಮತಾನುಗಾಃ ||
ವೈಷ್ಣವಾಃ ವಿಷ್ಣುಹೃದಯಾಃ ತಾನ್ನಮಸ್ಯೇ ಗುರೂನ್ಮಮ || ೧೮ ||

---

|| ಶ್ರೀ ಗುರುರಾಜೋ ವಿಜಯತೇ ||

# ಶ್ರೀ ಮಂಗಳಾಚರಣ ಸಂಧಿಸಾರ

ಹರಿಃ ಓಂ || ಶ್ರೀ ಮಜ್ಜಗನ್ನಾಥದಾಸವರ್ಯರು ಸಕಲ ವೇದಾರ್ಥ ಸಾರವನ್ನು ತೆಗೆದು, ಮುಮುಕ್ಷುಗಳ ಸಾಧನೆಗಾಗಿ ಸಂಕ್ಷಿಪ್ತದಲ್ಲಿ ಈ ಹರಿಯ ಬಿಂಬೋಪಾಸನೆಯನ್ನು ನಿರೂಪಿಸಿದ್ದಾರೆ. ಸ್ವಹೃದಯಸ್ಥ ಜೀವಾಂತರ್ಯಾಮಿಯಾದ ಅಂತರಾತ್ಮರೂಪಿ ಶ್ರೀ ಹರಿಯ ಸಂದರ್ಶನವೇ ಮುಕ್ತಿಗೆ ಕಾರಣ. ಈ ಗ್ರಂಥಕ್ಕೆ ಶ್ರೀ ಹರಿಕಥಾವೃತಸಾರವೆಂದು ಮಂಗಲಾ ಚರಣೆ, ಪಲ್ಲವಿಗಳನ್ನು ರಚಿಸಿದ್ದಾರೆ.

ಹರಿಕಥಾಮತಸಾರ ಗುರುಗಳ । ಕರುಣದಿಂದಾಪನಿತು
ಪೇಳುವೆ । ಪರಮಭಗವದ್ಭಕ್ತರಿದನಾದರದಿ ಕೇಳುವದು || ಪಲ್ಲ ||

ಇಲ್ಲಿ ವಿಷಯ ಪ್ರಯೋಜನ–ಸಂಬಂಧ–ಅಧಿಕಾರಿ ಹೀಗೆ ಅನುಬಂಧ ಚತುಷ್ಟಯಗಳನ್ನು ಹೇಳಿರುವರು. ಶ್ರೀ ಮನ್ನಾರಾಯಣನ ಅನೇಕ ರೂಪ ಗಳಿರಲು ಶ್ರೀ ಹರಿನಾಮಕನ್ನೇತುತಿಸಿ ಆತನ ಸಕಲ ವ್ಯಾಪಾರಗಳ ಸಾರ ವನ್ನು ಕ್ರೋಢೀಕರಿಸಿ ಶ್ರೀ ಹರಿನಾಮರೂಪವಾದ ಶ್ರೀ ಹರಿಕಥಾವೃತ ಸಾರವೆಂದು ಏಕೆ ಪೇಳಿದರು ?

"ಜೀವಾಂತಃ ಪ್ರೇರಕೋವಿಷ್ಣುಃ ಅಂತರಾತ್ಮೇತಿ ಯಂ ವಿದುಃ ।
ಸಚೋಪಾಸ್ಯಃಸದ್ಭಿವೇಷ್ಟಃ ಸದಾಜೀವವರೋಹರಿಃ ||

ಎಂದು ಮಾನಸಸ್ಮೃತಿಯಂತೆ, ಜೀವಾಂತ ಪ್ರೇರಕನಾದ ವಿಷ್ಣು ಅಂತ ರಾತ್ಮನೆಂದು ಕರೆಸುವನು. ಈ ಅಂತರಾತ್ಮನು ಸದಾ ಇಷ್ಟಪ್ರದ ಶ್ರೀ ಹರಿ ನಾಮಕನೆ ಬಿಂಬರೂಪಿಯು. "ಅಲ್ಲಿದ್ದ ಹರಿಗಾತ್ಮ ಜೀವ ಹೃದಯವೆಂಬು ವರು" ಎಂದು ಶ್ರೀ ಪ್ರಾಣೇಶದಾಸರ ವಚನವಿದೆ.

ಎಲ್ಲ ಅಪರೋಕ್ಷ ಜ್ಞಾನಿಗಳು ಸಹ ಟೀಕಾದಲ್ಲಿ ಈ ವಿವರವನ್ನೇ ಪೇಳಿದ್ದಾರೆ. ಶ್ರೀ ತಾಮ್ರಪರಣಿ ಆಚಾರ್ಯರು "ಸ್ವರೂಪಬಿಂಬೋಪಾಸನ



ಕರ್ಮಣಾ ಮೋಕ್ಷಪ್ರಯೋಜನಮಿತಿ ಸರ್ವೇಷಾಂ "**ಬಿಂಬ ರೂಪೋ ಹರಿರೇವೇತಿ**" ಗೀತಾಭಾಷ್ಯೋಕ್ತದಿಶಾ, ಸರ್ವ ಜೀವಾಂತಸ್ಥ ಬಿಂಬರೂ ಪಿಹರಿರೇವ । ತದ್ಗುಣಾನ್ ಕಥಯಂತಿ । ಪ್ರತಿಪಾದಯಂತಿ ಕಥಾಃ ವೇದಾಃ ತೇಷಾಂ ಮಧ್ಯೇ ಸ್ವಾದುತ್ವಾತ್ ಮಧುರತ್ವಾಚ್ಚ ಉಪನಿಷತ್‌ಸಮು ದಾಯೋಽಮೃತಮಿತ್ಯುಚ್ಚತೇ । ತದ್ರಹಸ್ಯಮೇವ ಸಾರಮಿತ್ಯುಚ್ಯತೇ । ಕಿಂನಾಮರಹಸ್ಯಮಿತಿ? ಸರ್ವಪ್ರಕಾರೇಣ ಸರ್ವತ್ರ ಬಿಂಬಕ್ರಿಯಾನು ಸಂಧಾನ ಮೇವ ರಹಸ್ಯಮಿತಿ" ಸರ್ವಜೀವಾಂತಸ್ಥ ಶ್ರೀ ಬಿಂಬರೂಪಿ ಶ್ರೀ ಹರಿಯ ಗುಣಗಳನ್ನು ವೇದಗಳು ಹೊಗಳುವವು. ಆ ವೇದಗಳ ಸಮೂಹ ಮಧ್ಯದಲ್ಲಿ ಅತಿ ಸ್ವಾದೋಪೇತ ರುಚಿಕರ ಮಧುರವಾದ **ಉಪನಿಷತ್** ಸಮುದಾಯವು ಅಮೃತವೆಂದು ಕರೆಯಲ್ಪಡುವುದು. ಅದರ ರಹಸ್ಯವೇಸಾರ. ಸರ್ವ ಪ್ರಕಾರದಿಂದ ಸರ್ವತ್ರ ಬಿಂಬಕ್ರಿಯಾನುಸಂಧಾನವೇ "ಹರಿಕಥಾವೃತ ಸಾರ"ವೆಂದು ಕರೆಸುವುದು. ಕಾರಣ ಬಿಂಬೋಪಾಸನಕ್ಕೆ ಮುಖ್ಯವಾದುದರಿಂದ ಶ್ರೀ ಹರಿಕೃಥಾವೃತ ಸಾರವೆಂದು ಈ ಮಹಾಗ್ರಂಥಕ್ಕೆ ಹೆಸರಿಟ್ಟದ್ದು ಬಹು ಅನ್ವರ್ಥಕವಾದುದೆಂದು ದೇವತೆಗಳಿಂದಲೂ ಮಾನ್ಯವಾಗಿದೆ.

ಬಿಂಬರೂಪಿಹರಿಯ ಧ್ಯಾನೋಪಾಸನಕ್ಕೆ ಮೂಲಮಂತ್ರವಿದು. ಬ್ರಹ್ಮಾದಿತೃಣಾಂತಜೀವರ ಸಾಧನಸಾಮ್ರಾಜ್ಯ ತೋರುವ ( ಆದರ್ಶ ) ಕನ್ನಡ ನುಡಿಯ ಕನ್ನಡಿಯಿದು. ಬಹು ರಹಸ್ಯವಾದುದು ಪಿಶುನರಿಗೆ–ನಿಷ್ಠು ರಿಗಳಿಗೆ–ಅಯೋಗ್ಯರಿಗೆ ಉಪದೇಶಾರ್ಹವಲ್ಲ. ಪರಮ ರಹಸ್ಯವಾದ ಈ ಹರಿ ಕಥಾವೃತಸಾರವನ್ನು ಪರಮಭಗವದ್ಭಕ್ತರೇ ಆದರದಿಂದ ಕೇಳುವ ದೆಂದು ಐತರೇಯೋಪನಿಷದ್ ರಹಸ್ಯವನ್ನು ಹೇಳಿರುವರು. ಇದು ಬಿಂಬ ರೂಪಿ ಹರಿಯ ಧ್ಯಾನೋಪಾಸನದ ಮೂಲಮಂತ್ರವೆಂದು ಈ ಎಲ್ಲ ಟೀಕಾ ಕಾರರಾದ ಜ್ಞಾನಿಗಳು ನಿರೂಪಿಸಿರುತ್ತಾರೆ.

ಧ್ಯಾನೋಪಾಸನಕ್ಕೆ ಮೂಲಮಂತ್ರವಾದಮೇಲೆ ಮಂತ್ರ ಪ್ರಾರಂಭಕ್ಕೆ ಶ್ರೀ ಗುರುಗಳಿಗೆ ನಮಿಸಬೇಕು. ಹೀಗೆ ಶ್ರೀ ಮದಾಚಾರ್ಯರು ತಂತ್ರಸಾರ ದಲ್ಲಿ ಅಪ್ಪಣೆಯಿತ್ತಿದ್ದಾರೆ. ಆದರಂತೆ "ಮಾನಸಸ್ಮೃತಿಯಲ್ಲಿ ಶ್ರೀ ವ್ಯಾಸ ತತ್ವಜ್ಞರು ಆದಿಯಲ್ಲಿ ಸಮಸ್ತಗುರುಗಳಿಗೆ ನಮಿಸಬೇಕೆಂದು ಪೇಳಿದ್ದಾರೆ.

ಮತ್ತು ಭಾರತ ಆದ್ಯಪದ್ಯದಲ್ಲಿ ಶ್ರೀ ವೇದವ್ಯಾಸದೇವರು "ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಮ್ । ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್" ॥ ಎಂದು ಹೇಳಿದ್ದಾರೆ. ಇದೊಂದು ಮುಖ್ಯ ಕಾರಣ. ಮತ್ತು "ಗುರು ಶ್ರೀಶವಿಠಲರ ಶಿಷ್ಯರೂ ಸಹ ಟೀಕಾದಲ್ಲಿ ಹೇಳಿದ್ದಾರೆ.

ಗುರುಮಂತ್ರ ಪ್ರಾರಂಭಕ್ಕೆ ೧ ಶ್ರೀಗುರುಭ್ಯೋನಮಃ ೨ ಶ್ರೀ ಪರಮಗುರುಭ್ಯೋನಮಃ ೩ ಶ್ರೀ ಮದಾನಂದತೀರ್ಥಭವಗತ್ಪಾದಾಚಾರ್ಯ ಗುರುಭ್ಯೋನಮಃ ೪ ಶ್ರೀ ವೇದವ್ಯಾಸಾಯನಮಃ ೫ ಶ್ರೀ ಭಾರತ್ಯೈನಮಃ ೬ ಸರಸ್ವತ್ಯೈನಮಃ ೭ ಶ್ರೀ ವಾಯವೇನಮಃ ೮ ಶ್ರೀ ಬ್ರಹ್ಮಣೇನಮಃ ೯ ಶ್ರೀ ಲಕ್ಷ್ಮ್ಯೈನಮಃ ೧೦ ಶ್ರೀ ನಾರಾಯಣಾಯನಮಃ ೧೧ ಏಕಾದಶ ಸ್ಥಾನೇ ಮಂತ್ರ ಪ್ರತಿಪಾದ್ಯದೇವತಾಭ್ಯೋ ನಮಃ ೧೨ ವಾಸುದೇವಾಯ ನಮಃ ಹೀಗೆ ಸಂಪ್ರದಾಯಪರಂಪರೆಯಲ್ಲಿ ಆರೋಹಣದಿಂದ ನಮನ ಕ್ರಮಉಂಟು.

ಆದರೆ ಶ್ರೀಜಗನಾಥದಾಸಾರ್ಯರು ದೇವಾಂಶರು; ಭಗವದಪರೋಕ್ಷಿಗಳು. ತಮ್ಮ ಗುರುಗಳ ಕರುಣದಿಂದಾ ಆಪನಿತು ಪೇಳುವೆ ಎಂದು ಸೂಚಿಸಿದಂತೆ ತಾವು ಅಪರೋಕ್ಷಿಗಳು ಎಂದು ಸೂಕ್ಷ್ಮವಾಗಿ ತಿಳಸಲು ಶ್ರೀ ಹರಿಯಿಂದ ಅವರೋಹಣ ಕ್ರಮಾನುಸರಿಸಿ, ಇಷ್ಟದೇವತಾ ೧ ಶ್ರೀಲಕ್ಷ್ಮೀನೃಸಿಂಹನೇ ಬಿಂಬನು ೨ ತರುವಾಯ ಶ್ರೀ ಲಕ್ಷ್ಮೀದೇವಿಯರು ೩ ಬ್ರಹ್ಮದೇವರು ೪ ವಾಯುದೇವರು ೫ ಶ್ರೀ ಸರಸ್ವತೀ ದೇವಿ, ೬ ಶ್ರೀ ಭಾರತೀ ದೇವಿ, ೭ ಗ್ರಂಥಪ್ರತಿಪಾದ್ಯ ಶ್ರೀ ವೇದವ್ಯಾಸ ದೇವರು, ೮ ಶ್ರೀ ಮದಾನಂದ ತೀರ್ಥರ ಸ್ತೋತ್ರ ೨ ಪದ್ಯಗಳಿಂದ ಅಲ್ಲಿಂದ ೯ ಶ್ರೀ ಪರಮ ಗುರುಗಳಾದ ಶ್ರೀಮಹ ರುದ್ರದೇವರ ಸ್ತೋತ್ರ ಎರಡು ಪದ್ಯಗಳಿಂದ. ಹೀಗೆ ನಮಿಸಿದನಂತರ ದೇವ ಋಷಿ ಪಿತೃ–ಗಂಧರ್ವ ಕ್ಷಿತಿಪ ಯತಿಗಳು ದಾಸರು ಇವರೆಲ್ಲರಿಗೆ ನುತಿಸಿದರು. ಶ್ರೀ ತತ್ವೇಶರಾದ ಬ್ರಹ್ಮಾದಿ ದೇವತೆಗಳಲ್ಲಿ ಕುಸುಮದೊಳಗೆ ಪರಿಮಳವು ಸದಾವ್ಯಕ್ತವಾಗಿರುವಂತೆ ಹರಿಯು ವ್ಯಕ್ತನಾಗಿರುತ್ತಾನೆ. ಅರಣಿ ಮಥನದಿಂದ ಅಂದರೆ ಸಾಧನ ಮಾಡಿದರೆ ಶ್ರೀ ಹರಿಯು ವ್ಯಕ್ತನಾಗುತ್ತಾನೆ.



ಅರಣಿಮಥನದಿಂದ ಅಂದರೆ ಸಾಧನಮಾಡಿದರೆ ಶ್ರೀ ಹರಿಯು ವ್ಯಕ್ತನಾಗುವನೆಂದು ತೋರಿಸಿರುತ್ತಾರೆ. ಹೀಗೆ ನಂದಾದೀಪಗಳಂತೆ ಜ್ಞಾನ ಬೆಳಕನ್ನು ಕೊಡುವ ೧೩ ನಾಂದೀಪದ್ಯಗಳಿಂದ ಸ್ತೋತ್ರಮಾಡಿದ್ದಾರೆ. "ನಾಂದೀ" ಸ್ತುತಿಂ ಕರೋತಿ ಇತಿ ನಾಂದೀ ಎನ್ನುವಂತೆ ತಾರತಮ್ಯದಿಂದ ಶ್ರೀಹರಿ ಗುರುಗಳ ಸೋತ್ರ ಮಾಡಿರುವರು. ಕಾರಣ ಇವುಗಳಿಗೆ ನಾಂದೀ ಪದ್ಯಗಳೆಂದು ಜ್ಞಾನಿಗಳು ಬರೆದಿದ್ದಾರೆ. ಇದಕ್ಕೇ ಮಂಗಲವನ್ನು ಕೊಡುವ ಮಂಗಲಾಚರಣ ಸಂಧಿ ಎಂದು ದಾಸರು ಪೆಸರಿಟ್ಟದ್ದು ಬಹು ಸಾರ್ಥಕವಾದುದು.

ಇನ್ನು ಇಷ್ಟದೇವತೆಯು "ಶ್ರೀ ನರಸಿಂಹ"ನು. ಶ್ರೀರಮಣಿಕರಕಮಲ ಪೂಜಿತ ಎಂಬ ಆದ್ಯ ಪದ್ಯದಲ್ಲಿ ವಿಶಿಷ್ಟತ್ವ, ಇಷ್ಟತ್ವ, ಅಧಿಕೃತತ್ವ "ಎಂಬ ಧರ್ಮಗಳನ್ನು ಭಾಷ್ಯಾನುಭಾಷ್ಯಗಳ ಆದ್ಯಪದ್ಯಗಳಲ್ಲಿ ಹೇಳಿದಂತೆ ಹೇಳಿದ್ದಾರೆ. " ಇದು ಅಧಿಕಾರಿಗಳ ಯೋಗ್ಯತೆಯಂತೆ ತಿಳಿಯಲ್ಪಡುವದು.

ಇನ್ನು "ನಾರಸಿಂಹನೆ ನಮಿಪೆ ಕರುಣಿಸೆಮಗೆ ಮಂಗಳವ" ಎಂದು ಏಕೆ ಹೇಳಿದ್ದಾರೆಂಬುದನ್ನು ಶ್ರೀತಾಮ್ರಪರ್ಣೀ ಆಚಾರ್ಯರು ವ್ಯಾಖ್ಯಾನದಲ್ಲಿ ವಿಸ್ತಾರದಿಂದ ನಿರೂಪಿಸಿರುತ್ತಾರೆ. ಇದರಂತೆಯೇ ಶ್ರೀ ಜಗನ್ನಾಥದಾಸಾರ್ಯರು ೭ನೆಯ ಸಂಧಿಯಲ್ಲಿ " ಮತ್ತೆ ಚಿದ್ದೇಹದೊಳಗೆ ಎಂ । ಭತ್ತುಸಾವಿರ ದೇಳನೂರಿ । ಪ್ಪತ್ತೈದು ನರಸಿಂಹ ರೂಪದಲಿದ್ದು ಜೀವರಿಗೆ ॥ ನಿತ್ಯದಲಿ ಹಗಲಿರುಳು ಬಪ್ಪಪಮೃತ್ಯುವಿಗೆ ತಾ । ಮೃತ್ಯುವೆನಿಸುವ । ಭೃತ್ಯವತ್ಸಲ ಭಯವಿನಾಶನ ಭಾಗ್ಯಸಂಪನ್ನ " ಎಂದು ಅಪ್ಪಣೆಕೊಡಿಸಿರುವದರಿಂದ ಅನಿಷ್ಟಪರಿಹಾರಇಷ್ಟಪ್ರಾಪ್ತಿರೂಪವಾದ ದ್ವಿದಳಮೋಕ್ಷದಲ್ಲಿ ಅನಿಷ್ಟರೂಪವಾದಲಿಂಗದ ಭಂಗಕ್ಕೆ ಶ್ರೀ ವಾಯುದ್ವಾರಾ ಶ್ರೀ ಲಕ್ಷ್ಮೀನರಸಿಂಹನೇ ಮುಖ್ಯ ಕಾರಣನೆಂದು ಶ್ರೀ ನೃಸಿಂಹನಿಗೆ ನಮನವನ್ನು ಮಾಡಿರುತ್ತಾರೆ.

ನಂತರ ತಾರತಮ್ಯ ಕ್ರಮವಾಗಿ ಸಂಪ್ರದಾಯದಂತೆ ಶ್ರೀ ಲಕ್ಷ್ಮೀ ದೇವಿಯರಿಗೆ ಪ್ರತ್ಯೇಕ ವಂದನಮಾಡಿದರೂ, "ಭಗವಂತನ ಪಾದನಖಗುಣಗಳನ್ನು ಪಾರುಗಾಣದೇ ಆನಂದಸಮುದ್ರದಲ್ಲಿ ಮುಳುಗಿ ನಿತ್ಯನಿತ್ಯ ನೂತನ ಗುಣಗಳನ್ನು ಕಾಣುವರು." ಎಂದು ಭಗವಂತನ ಪತ್ನೀತ್ವೇನ ನಮಸ್ಕರಿಸಿರುವದರಿಂದ ಪ್ರಮಾಣ ವಿರೋಧವಿಲ್ಲ.

ನಂತರ ಭಗವಂತನ ನಾಭಿಕಮಲದಿಂದ ಉದಿಸಿದ ಬ್ರಹ್ಮದೇವರು ಸರ್ವದೇವತೆಗಳಿಂದ ಸ್ತೋತ್ರ ಮಾಡಿಸಿಕೊಳ್ಳುವವರು. ಸತ್ವಪ್ರಚುರದೇಹ ವುಳ್ಳವರೆಂಬೋ ವಿಷಯದಲ್ಲಿ ಅನೇಕ ರಹಸ್ಯ ಗುಣಬಿಂದುಗಳ ವಿಚಾರ ಪರಮ ಪ್ರಮೇಯ ವಿಸ್ತರಿಸಿದ್ದಾರೆ.

ನಂತರ ವಾಯುದೇವರ ಸ್ತೋತ್ರದಲ್ಲಿ "ಸಕಲರಾದ ತ್ರಿವಿಧ ಜೀವರಲ್ಲಿ ಪ್ರತಿನಿತ್ಯ ಬಿಡದೇ ೨೧,೬೦೦ ಶ್ವಾಸ ರೂಪ ಭೂ, ಅಭೂಃ ಭೂರಭು ಎಂತ ಹಂಸಮಂತ್ರ ಜಪಮಾಡಿ ಹರಿಗರ್ಪಿಸುವರು. ಸ್ವರೂಪಾದಿದೇಹ ಚತುಷ್ಪಯಗಳಲ್ಲಿ ಶ್ರೀವಾಯುದೇವರ" ವ್ಯಾಪಾರ, ಸ್ವ ರೂ ಪ ದೇಹದಿ ವಾಯುದೇವರ ವ್ಯಾಪ್ತಿಗಳುಂಟೆಂದು ಅನೇಕಪ್ರಮಾಣಗಳನ್ನು ಈ ಅಪ ರೋಕ್ಷಜ್ಞಾನಿಗಳು ಮೈಮರೆತು ಆದ್ಯ ಸಂಧಿಯಲ್ಲಿಯೇ ವಾಯುಮಹತ್ಮೆ ಕೊಂಡಾಡಿದ್ದಾರೆ.

ನಂತರ ಋಜುಪುಂಗವರ ಪತ್ನಿಯರಾದ ವೇದಾಭಿಮಾನಿಗಳಾದ ಶ್ರೀಸರ ಸ್ವತೀ ಶ್ರೀ ಭಾರತೀ ದೇವಿಯರ ಸ್ತೋತ್ರ ಮಾಡುತ್ತ ಇವರು ಅತಿರೋಹಿತ ವಿಜ್ಞಾನಿಗಳು. ಮಹಾ ಪ್ರಳಯದಲ್ಲಿ ಇವರಿಗೆ ತಮ್ಮ ಪತಿಗಳಂತೆ ಜ್ಞಾನಕ್ಕೆ ತಿರೋಭಾವ ಎಂದೂ ಇಲ್ಲ. ಸಕಲವೇದಾಭಿಮಾನಿಗಳು" ಎಂದು ನುತಿಗೈದು ನಂತರ ಶ್ರೀವೇದವ್ಯಾಸ ದೇವರನ್ನು ಸ್ತೋತ್ರ ಮಾಡಿದ್ದಾರೆ. ಇದು ತಾರ ತಮ್ಯಕ್ಕೆ ವಿರೋಧವಲ್ಲವೆ? ಆದರೆ ವೇದವಿಸ್ತಾರಗೈದ ವೇದವ್ಯಾಸ ದೇವರೇ ಆನಂದ ತೀರ್ಥರಿಗೆ ನಿಯತ ಗುರುಗಳು. ಇವರೇ ಸಕಲ ಪುರಾಣ ಆಗಮ ಸಂಹಿತಾದಿಗಳ ಪ್ರವರ್ತಕರು. ತಮೋಜೀವಿಗಳು ವೇದವ್ಯಾಸದೇವರು ಕಶ್ಚನ ಋಷಿಯೆಂದು ತಿಳಿದು ತಮಸ್ಸಿಗೆ ಹೋಗುವರು. ಎಂದು ಅವರ ಭಾವವು. ಮತ್ತು ಈ ಗ್ರಂ ಥ ಕ್ಕೆ ವೇದಾಂತದಂತೆ ಆರಂಭಣೀಯತ್ವ ವಿದ್ಧಕಾರಣ ವೇದವ್ಯಾಸದೇವರೇ ಮೂಲ ಗುರುಗಳೆಂದೂ ಇಲ್ಲಿ ಮಂತ್ರ ಪ್ರತಿಪಾದ್ಯ ಮಂತ್ರನಿಯಾಮಕ ದೇವರೆಂದೂ ವೇದವ್ಯಾಸರಿಗೆ ನಮಿಸಿದ್ದಾರೆ. ನಂತರ ಶ್ರೀ ಮದಾನಂದತೀರ್ಥರು ಅವತಾರ ಮಾಡಲಿಕ್ಕೆ ಕಾರಣ, ಎಲ್ಲಿ ಅವತರಿಸಿದರು; ಅವತಾರದಿಂದ ಮಾಡಿದ ಮಹತ್ಕಾರ್ಯವೇನು? ಎಂಬುದನ್ನು ಆದಿ ಗುರುಗಳಾದ ಶ್ರೀ ಮದಾನಂದತೀರ್ಥರ ಸ್ತೋತ್ರದಲ್ಲಿ ೨ ಪದ್ಯಗಳಿಂದ ಹೇಳಿದ್ದಾರೆ.



ಪರಮ ಗುರುಗಳಾದ ಶ್ರೀ ಮಹರುದ್ರದೇವರ ಸ್ತೋತ್ರ ೨ ಪದ್ಯದಿಂದ ಮಾಡಿದ್ದಾರೆ. ಮೊದಲ ಪದ್ಯದಲ್ಲಿ ವಾಮದೇವ ಸುಂದರನಾದ ಮಹದೇವರೇ ಉಮಾ ಮನೋನಿಯಾಮಕರು. ಉಗ್ರನಾಮಕ ವ್ಯೋಮಕೇಶ, ಪುಲಿದೊಗಲು ಉಟ್ಟು ಗಜಚರ್ಮಾಂಬರವಸನಭೂಷಣನೆಂದು ಮಹರುದ್ರದೇವರ ಆದ್ಯಂತ ರೂಪಗುಣಲಾವಣ್ಯಗಳನ್ನುನುತಿಸಿದ್ದಾರೆ. ಕೃತ್ತಿವಾಸನೆ ಹಿಂದೆ ನೀ ನಾಲ್ವತ್ತು ಕಲ್ಪದಿ" ಈ ಪದ್ಯದಲ್ಲಿ ಶ್ರೀ ಮಹರುದ್ರದೇವರ ಸಾಧನ ಕಲ್ಪಗಳನ್ನು ನಿರ್ಗ್ರಸಿ ಬಹುಸೂಕ್ಷ್ಮ ಪ್ರಮೇಯವನ್ನು ಹೇಳಿದ್ದಾರೆ. ಇದಕ್ಕೆ ತಾಮ್ರಪರ್ಣೀ ಆಚಾರ್ಯರು ಬಹುಪ್ರಮೇಯರಹಸ್ಯಗಳಾದ ಪ್ರಕಾಶಸಂಹಿತಾ ಭಾಗವತ ಅನುವ್ಯಾಖ್ಯಾನಾದಿ ಅನೇಕಗ್ರಂಥಗಳ ಪ್ರಮಾಣಗಳನ್ನು ಕೊಟ್ಟು ಉದಾಹರಿಸಿದ್ದಾರೆ, ಮತ್ತು ಶ್ರೀ ಜ್ಞಾನಿಗಳಾದ ಅ ಥ ರಾ ಪು ರ ಪುರುಷೋತ್ತ ಮಾಚಾರ್ಯರು, ಶ್ರೀ ತಾರತಮ್ಯಾದಿಸದ್ರತ್ನಮಾಲಾವಿವೃತ್ತಿಯಲ್ಲಿ ಸಂಗ್ರ ಹಿಸಿದ ಪ್ರಮಾಣಗಳನ್ನು ಕೊಡಲಾಗಿದೆ. ಸಾರಾಂಶ ಮಹರುದ್ರ ದೇವರಿಗೆ ಶೇಷಪದದಿಂದ ಮುಕ್ತಿ; ಇಂಥ ಮಹಾಪದವಿಗೆ ಸಾಧನ–ಬ್ರಹ್ಮಮಾನದಿಂದ ನೂರುಕಲ್ಪ ಇದರಲ್ಲಿ ೩೦"ಕಲ್ಪ ಪ್ರಾರಬ್ಧಸಂಕ್ಷಯ ನಂತರ ೩೦ ಕಲ್ಪ ಸಾಧನ–ಇದರಲ್ಲಿ (೯೮)ನೇ ಕಲ್ಪ–ದಲ್ಲಿ ಉಗ್ರತಪಾಹ್ವಯ ಉಗ್ರತಪನಾಮ ದಿಂದ ಲಾತವ್ಯರಲ್ಲಿ ೭೫ ವರ್ಷ ಬ್ರಹ್ಮಮಾನದಿಂದ ವ್ಯಾಸಂಗ-ನಂತರ ವಾಯುದೇವರಲ್ಲಿ ೪೦ ಬ್ರಹ್ಮದೇವರ ದಿನಕಲ್ಪದಲ್ಲಿ ಸಕಲಾಗಮಾರ್ಥ ಗಳೋದಿದನಂತರ (೧೦) ಕಲ್ಪದಲ್ಲಿ ಅಂದರೆ ಹತ್ತು ಮನುಕಲ್ಪಗಳಲ್ಲಿ ಲವಣ ಸಮುದ್ರದಲ್ಲಿ ಮುಳುಗಿ ಧ್ಯಾನೋಪಾಸನೆಮಾಡಿದ ತಪಸ್ಸು." ಎಂದು ಸವಿಸ್ತಾರವಾಗಿ ಮುಂದೆ ತೋರಿಸಿದ್ದಾರೆ. ಜ್ಞಾನಿಗಳ ರಹಸ್ಯವನ್ನು ಸಂಕ್ಷಿಪ್ತ ವಾಗಿ ಸಂಧಿಯ ಸಾರದಲ್ಲಿ ತೋರಿಸಿ ಸಜ್ಜನರ ಸೇವೆಯಲ್ಲಿ ಮನಾನಂದದವರೆಗಿ ಮನೋಭಿಮಾನಿಗಳಾದ ಮಹದೇವರೇ ಪುನಃಪುನಃ ದಾರ್ಢ್ಯಾರ್ಥವಾಗಿ ಬರೆಯುಸುತ್ತಾರೆ. ರುದ್ರದೇವರಿಗೆ ನಾಲ್ವತ್ತು ೪೦+೪೦= ಹೀಗೆ ಎಂಬತ್ತು ಎಂತ ಕೆಲವರು ಹೇಳುತ್ತಾರೆ. ೪೦ ಕಲ್ಪಸಾಧನವೆಂಬುದನ್ನು ತಾಮ್ರ ಪರ್ಣೀ ಆಚಾರ್ಯರು ವಿಸ್ತರಿಸಿದ್ದಾರೆ. ಇದೇ ತಾರಕೋಪದೇಶಿಗಳಾದ ಮಹರುದ್ರದೇವರ ಸಾಧನ. ೧೦೦ ಬಹ್ಮಕಲ್ಪ ತಿಳಿಯುವದೇ ಅವರ ಮಹಾ ಸೇವೆ.

ಮುಂದೆ ೧೨ನೇ ಪದ್ಯದಲ್ಲಿ ಗುರುಗಳಾದ ಇಂದ್ರಾದಿ ಸಕಲದೇವತೆಗಳಿಗೂ, ಮತ್ತು ಗುರು ಪರಂಪರೆ ಶ್ರೀ ಪದ್ಮನಾಭಾದಿಯತಿಗಳಿಗೂ, ಸಮಸ್ತ ರಮಾಕಳತ್ರನ ದಾಸವರ್ಗಕೆ ನಮಿಸಿ, ಹದಿಮೂರನೇ ಪದ್ಯದಲ್ಲಿ ಶ್ರೀಹರಿಯು ಬ್ರಹ್ಮಾದಿದೇವತೆಗಳಲ್ಲಿ ವ್ಯಕ್ತಾವ್ಯಕ್ತನಾಗಿ ಇರುವ ಬಗೆಯನ್ನು ತೋರಿಸುತ್ತ ಬಿಂಬೋಪಾಸನೆಯನ್ನು ಮುಮುಕ್ಷುಗಳು ಅವಶ್ಯ ಮಾಡಬೇಕೆಂದು ಪೀಠಿಕಾ ರೂಪವಾಗಿ ಸೂಚಿಸಿರುತ್ತಾರೆ.



॥ ಶ್ರೀ ಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸೀದ ॥

ಶ್ರೀ ಕುಪ್ಪೀಭೀಮಾತ್ಮಕ ಶ್ರೀ ಭಾರತೀರಮಣ ಮುಖ್ಯಪ್ರಾಣ ಪ್ರಸೀದ

॥ ಶ್ರೀ ಗುರುರಾಜೋ ವಿಜಯತೇ ॥

ಶ್ರೀಪುರಂದರಾದಿಸಮಸ್ತದಾಸವರ್ಯೇಭ್ಯೋನಮಃ

**ಶ್ರೀ ಹರಿಕಥಾಮೃತಸಾರ ಶುದ್ಧಪ್ರತಿ ಅಪರೋಕ್ಷ ಜ್ಞಾನಿಗಳ ಪಂಚ ಟೀಕಾ**

# ಪಂಚರತ್ನ ಪ್ರಕಾಶಿಕಾ

## ೧ ಮಂಗಳಾಚರಣ ಸಂಧಿ

ಶ್ರೀಲಕ್ಷ್ಮೀನರಸಿಂಹಾಯನಮಃ ಶ್ರೀ ಮಧ್ವಾಂತರ್ಗತವೇದವ್ಯಾಸಾಯನಮಃ

ಶ್ರೀ ರಾಘವೇಂದ್ರ ಶ್ರೀ ವರದೇಂದ್ರಗುರುಭ್ಯೋನಮಃ

ಶ್ರೀ ಮಜ್ಜಗನ್ನಾಥದಾಸರಾಯಗುರು ಶ್ರೀ ಪ್ರಾಣೇಶರಾಯ ಗುರುಭ್ಯೋನಮಃ

### ನಾಂದೀ ಪದ್ಯಗಳು

**ಹರಿಕಥಾಮೃತಸಾರಗುರುಗಳ**
**ಕರುಣದಿಂದಾಪನಿತುಪೇಳುವೆ ।**
**ಪರಮ ಭಗವದ್ಭಕ್ತರಿದ ನಾದರದಿ ಕೇಳುವದು ॥ಪಲ್ಲ॥**

**ಪದ್ಯಾರ್ಥ ಹರಿ—** ಪಾಪಪರಿಹಾರಕನಾದ ಬಿಂಬರೂಪಿ ಪರಮಾತ್ಮನು "ಹರಿ" ಎಂಬೋ ನಾಮದಿಂದ ಕರೆಸುತ್ತಾನೆ. ಈ ಹರಿರೂಪನು ಸಮಸ್ತ ಜೀವಾಂತಃಪ್ರೇರಕನಾಗಿ ಪುರುಷ ನಾಮಕ ಸಕಲ ಬಿಂಬ ಕ್ರಿಯಾಲೀಲಾ ವ್ಯಾಪಾರ ಗುಣಕಥನವೇ ಕಥಾ, ಅಥವಾ ಇಂಥ ಹರಿರೂಪನಾದ ಬಿಂಬನಾಮಕ ಪರಮಾತ್ಮನು ಬಹಿಃ ಜೀವರ ಸ್ವರೂಪದಿಂದ ಹೊರಗೆ ಲಿಂಗ-ಅವ್ಯಕ್ತ ಅನಿರುದ್ಧ ಪ್ರಾಕೃತ ಸ್ಥೂಲದೇಹದಲ್ಲಿ ಮಾಡುವ ವ್ಯಾಪಾರ ಮತ್ತು ಬ್ರಹ್ಮಾಂಡದ ಸೃಷ್ಟಿ, ಸ್ಥಿತಿಲಯಾದಿ ವ್ಯಾಪಾರ ಶ್ರೀ ರಾಮಕೃಷ್ಣಾದಿ ಅನಂತರೂಪದಿಂದ ಮಾಡುವ ಲೀಲೆಯೇ ಆತನ ಗುಣಕಥಾ. ಇಂತು

ಪುರುಷ ಕಾಲರೂಪಿ ಶ್ರೀಹರಿಯ ಸಮಸ್ತಲೀಲಾ ಅಮೃತ-ಮುಕ್ತಿ ಪ್ರದವಾದುದು. ಇಂಥ ಅಮೃತಸಾರ=ಸಾರಾತ್‌ಸಾರತರಂ ವಿಷ್ಣುಃ ಗುರುಗಳ ಕರುಣದಿಂದ=ತಮಕಿಂತಲೂ ೧೦೦ ಗುಣದಿಂದ ಉತ್ತಮರಾದ=ಗಣೇಶಾಂಶ ಸಂಭೂತರಾದ ಶ್ರೀ ಗೋಪಾಲದಾಸರ ಅನುಗ್ರಹರೂಪವಾದ ಪ್ರಸಾದವೇ ಕರುಣಾ. ಈ ಅಂತಃಕರುಣದಿಂದ, ಆಪನಿತು=ಗುರುಗಳು ಪ್ರೇರಿಸಿ ತಿಳಿಸಿದಷ್ಟು, ಅಂದರೆ ಶ್ರೀಹರಿಯ ಅನಂತಲೀಲೆಯು ರಮಾಬ್ರಹ್ಮಾದಿಗಳಿಂದಲೂ ತಿಳಿಯಲು ಶಕ್ಯವಲ್ಲ. ನನ್ನ ಪಾಡೇನು! ಎಂಬ ಸ್ವಅಹಂಕಾರಖಂಡನ ಪೂರ್ವಕವಾಗಿಯೂ ಮತ್ತು ಗುರುಪ್ರಸಾದವೇ ಮುಖ್ಯವಾಗಿ ಅವರು ಎನ್ನಯೋಗ್ಯತೆಗೆ ತಿಳಿಸಿದಷ್ಟು ಪೇಳುವೆ=ಹೇಳುವೆನು. ಪರಮ=ಉತ್ತಮರಾದ ಶ್ರೇಷ್ಠರಾದ ಕೇವಲ ತಾರತಮ್ಯ ಪಂಚಭೇದವರಿತು ಶ್ರೀ ಹರಿಯೇ ಸರ್ವೋತ್ತಮನೆಂದು ತಿಳಿದ ಭಗವದ್ಭಕ್ತರು=ಷಡ್ಗುಣಐಶ್ವರ್ಯ ಸಂಪನ್ನನಾದ ಶ್ರೀ ಹರಿಯ ಅಂತರಂಗ ಭಕ್ತರು, ಇದನು=ಈ ಹರಿಕಥಾಮೃತಸಾರವನ್ನು ಆದರದಿ=ಪ್ರೀತಿಯಿಂದ ಬುಹು ಮರ್ಯಾದೆ ಗೌರವದಿಂದ ಅಂದರೆ ಮಹತ್ಮೆ ಜ್ಞಾನಪೂರ್ವಕ ಸುದೃಢ ಸ್ನೇಹವೆಂಬ ಭಕ್ತಿಯಿಂದ ಕೇಳುವದೆಂದು ಪಲ್ಲವಿಯ ಸಾಮಾನ್ಯ ಅರ್ಥ.

**ತಾಮ್ರಪರ್ಣೀಯಾ**—ತಾಮ್ರಪರ್ಣೀ ಆಚಾರ್ಯರು ಸಂಸ್ಕೃತಟೀಕಾ ಪ್ರಥಮದಲ್ಲಿ ಮಂಗಳಾಚರಣೆ ಮಾಡುತ್ತಾರೆ.

ಪ್ರತಿಭಾಂದಿಶತು ಮೇ ಚಾರು ಚರಿತಃ ಚಂದ್ರಿಕಾಚಾರ್ಯಃ ॥
ಶ್ರೀ ಮನ್ನ್ಯಾಯಸುಧಾಪರಿಮಳಾಚಾರ್ಯೇಭ್ಯೋನಮಃ "ಹರಿಃಓಂ ॥
ಶ್ರೀಮಲ್ಲಕ್ಷ್ಮೀ ಸರೋಜಸಂಭವ ಮರುದ್ವಾಣೀರಯೊ ಸರ್ಪರಾ ॥
ದ್ವೀಶೋ ಮಾಧವ ಇಂದ್ರಕಾಮವಿಬುಧವ್ರಾತೈಶ್ಚ ಸಂಸೇವಿತಂ ॥
ವಿಶ್ವಸ್ಯೋದಯರಕ್ಷಣಕ್ಷಯಕರಂ ಮೋಕ್ಷಾದಿಪುರುಷಾರ್ಥದಂ॥
ವಂದೇಹಂ ಭವತಾಪಹಂ ತಮಜಿತಂ ಶ್ರೀನಾರಸಿಂಹಂ ಸದಾ ॥ ೧ ॥

ರಮಾರಮಣ ಸಚ್ಚರಣ ಪಂಕಜೋದ್ಭವ ಸೌರಭಂ ॥
ಜ್ಞಾನಾಕ್ಶೈಃ ಲೇಲಿಹಾನಂ ತಂ ರಾಘವೇಂದ್ರಾಳಿಕಂ ಭಜೇ ॥೨॥
"ಜಗದಂತ ಸ್ತಮಶ್ಛೇತ್ತಾ ವಿಕಸದ್ ಜ್ಞಾನಚಂದ್ರಿಕಃ ॥
ಹರಿಕಥಾಮೃತಸಾರಾಂಕೋ ಜಗನ್ನಾಥ ಗುರೂಡುಪಃ ॥ ೩ ॥



"ದದ್ಯಾಜ್ಞಾನಂ ಸದಾ ಮೇವೈ ಸ್ವಕಾರಿತಕೃತೇಸ್ತಥಾ ॥
ಹರಿಕಥಾಮೃತ ಸಾರಸ್ಯ ವ್ಯಾಖ್ಯಾನಂ ಕರ್ತುಮುದ್ಯತಃ ॥ ೪ ॥

ನ ವೇದವಾದೇ ನ ಚ ತರ್ಕಶಾಸ್ತ್ರೇ ನ ಶಬ್ಧಶಾಸ್ತ್ರೇನಚ ಚಂದ್ರಿಕಾಯಾಂ ॥
ನ ವೈ ಸ್ವಸಿದ್ಧಾಂತಸುಶಾಸ್ತ್ರಸಾಗರೇ ನ ಚರ್ಯಮಾಣೋ ನ ಬುಧೋ ಹಿ ಮುಗ್ಧಃ ॥೬॥
ಏತಾದೃಶಸ್ತ್ವಂ ಕಥಮಸ್ಯವ್ಯಾಖ್ಯಾಂ ಕರ್ತುಂ ಸಮುತ್ಸೋಸಿ ಬಲಂ ಚ ತೇ ಕಿಂ ॥
ಪ್ರಬ್ರೂಹಿತ್ವಂ ನೋ ತ್ವಯಿ ವಿದ್ಯಮಾನಂ ಮಯ್ಯಸ್ತಿ ಶ್ರೀಮದ್ಗುರುರಾಜ ಸದ್ದಯಾ ॥ ೭ ॥

**ಕನ್ನಡಾರ್ಥ**— ಮನೋಹರ ಚರಿತ್ರರಾದ ಶ್ರೀ ಚಂದ್ರಿಕಾಚಾರ್ಯರು ಪ್ರತಿಭೆಯನ್ನು ನನಗೆ ಕರುಣಿಸಲಿ

ಶ್ರೀ ಮದಿಂದಿರಾದೇವಿ, ಬ್ರಹ್ಮ, ವಾಯು, ಸರಸ್ವತಿ, ಭಾರತಿ, ಶೇಷ, ಗರುಡ, ರುದ್ರ, ಉಮಾ ಇಂದ್ರ, ಕಾಮ ಮೊದಲಾದ ಸುರ ಸಮೂಹದಿಂದ ಸಂಸೇವಿತನಾದ ಜಗತ್ತಿನ ಸೃಷ್ಟಿ-ಸಂರಕ್ಷಣ, ಸಂಹಾರ ಕರ್ತನಾದ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುವವನೂ-ಭವತಾಪವನ್ನು ನೀಗಿಸುವವನೂ ಅಜಿತನೂ ಆದ ಶ್ರೀ ಮಲ್ಲಕ್ಷ್ಮೀನೃಸಿಂಹ ದೇವನನ್ನು ನಮಸ್ಕರಿಸುತ್ತೇನೆ. ॥೧॥

ರಮಾರಮಣನ ವಿಮಲಚರಣ ಸರೋಜದಲ್ಲಿರುವ ಸೌರಭ (ಸುಗಂಧ) ವನ್ನು ಜ್ಞಾನನಯನಗಳಿಂದ ಆಸ್ವಾದನೆಗೈಯುವ ಶ್ರೀ ರಾಘವೇಂದ್ರರೆಂಬ ಲೋಕೋಕತ್ತರ ಅಳಿಯನ್ನು ಭಜಿಸುತ್ತೇನೆ. ॥ ೨ ॥

ಜಗತ್ತಿನ (ಸರ್ವರ) ಒಳಗಣ ಕತ್ತಲವನ್ನೂ ಕತ್ತರಿಸುವ (ಶೋಭಿಸುವ) ಜ್ಞಾನಚಂದ್ರಿಕೆಯಿಂದ ಹೊಳೆಯುವ, ಹರಿಕಥಾಮೃತಸಾರದಿಂದಶೋಭಿತನಾದ ಶ್ರೀಜಗನ್ನಾಥ ಗುರುಚಂದ್ರಮನು (ನನಗೆ ಮಂಗಲವೀಯಲಿ) ॥೩॥

ಪರಮಾತ್ಮನು ತಮ್ಮಲ್ಲಿನಿಂತು ತಮ್ಮಿಂದ ಮಾಡಿಸಿದ ಹರಿಕಥಾಮೃತ ಸಾರವೆಂಬ ಗ್ರಂಥದ ವ್ಯಾಖ್ಯಾನವನ್ನು ವಿರಚಿಸಲು ಉತ್ಸುಕನಾದ ನನಗೆ ಜ್ಞಾನವನ್ನು ಯಾವಾಗಲೂ ದಯಪಾಲಿಸಲಿ. || ೪ ||

ವೇದವಾದಗಳಲ್ಲಿ ಕೋವಿದನಲ್ಲ, ತರ್ಕಶಾಸ್ತ್ರಗಳಲ್ಲಿ ಚತುರನಲ್ಲ. ಚಂದ್ರಿಕೆಯಲ್ಲಾಗಲೀ ಸಾಗರದಂತಿರುವ ನಮ್ಮ ಸಿದ್ಧಾಂತದ ಶಾಸ್ತ್ರದಲ್ಲಿ ಯಾಗಲೀ ವಿಹರಿಸುವ ಪಂಡಿತನೂ ಅಲ್ಲ; ಕೇವಲ ಮುಗ್ಧನು, ಹೀಗೆ ಒಂದರಲ್ಲಿಯೂ ಸಹ ಘನ ಪಾಂಡಿತ್ಯವನ್ನು ಪಡೆಯದ ನೀನು ಈ ಹರಿಕಥಾ ಮೃತಸಾರ (ಪ್ರಬಂಧ)ದ ವ್ಯಾಖ್ಯಾನವನ್ನು ವಿರಚಿಸಲು ಹೇಗೆ ಉತ್ಸುಕನಾಗಿ ರುತ್ತೀ? ನಿನಗಿರುವ ಬಲವಾದರೂ ಏನು? ನಿನ್ನಲ್ಲಿ ಇರುವದಾದರೂ ಏನು? ಹೇಳು! ಎಂದು ಪ್ರಶ್ನೆ ಮಾಡಬಹುದು. ಆದಕ್ಕೆ ನನ್ನಲ್ಲಿರುವ ದೊಂದೇ ಇದು–ಶ್ರೀ ಮದ್ಗುರುರಾಜರ ಸದಮಲದಯೆಯೆಂಬುವದು! ಎಂದು ಉತ್ತರವು. || ೫-೬ ||

## ತಾಮ್ರಪರ್ಣಿ

ಶ್ರೀಃ || ತತ್ರಾದೌ ಗ್ರಂಥಕಾರೈರ್ಹರಿಕಥಾಮೃತಸಾರಂ ವಚ್ಮೀತಿ ಪ್ರತಿ ಜ್ಞಾತಂ|| ಹರಿಕಥಾಮೃತಸಾರಾಖ್ಯಗ್ರಂಥೇ-ವಿಷಯ ಪ್ರಯೋಜನ ಸಂಬಧಾ ಧಿಕಾರೀತಿ ಸಂಬಂಧ ಚತುಷ್ಟಯವತ್ವಾಭಾವಾತ್ ಕಾಕಸ್ಯ ಕತಿವಾ ದಂತಾಃ ಮೇಷಸ್ಯಾಂಡಂಕಿಯತ್ಪಲಂ || ಕಂಬಲೇ ಕತಿ ರೋಮಾಣಿ, ಕಾವಾರ್ತಾ ಚೋರಮುಂಡ ಲೇ || ಇತ್ಯಾದಿ ಕಾಕದಂತಪರೀಕ್ಷಾಗ್ರಂಥವದನಾರಂಭಣೀಯ ತ್ವದೋಷಪ್ರಸಂಗೋ ಆಯಾಸ್ಯತೀತ್ಯೇವಮಾಕ್ಷಿಪ್ಯ ಹರಿಕಥಾಮೃತಸಾರೇ ತ್ಯತ್ರ ವಿಷಯಪ್ರಯೋಜನಸಂಬಧಾಧಿಕಾರಿಣಃ ವರ್ತಂತೇ ಇತ್ಯರ್ಥ ಪ್ರದ ರ್ಶನಾಯಾಸ್ಯ ಗ್ರಂಥಸ್ಯ ಹರಿಕಥಾಮೃತಸಾರೇತಿ **ನಾಮ ಚಕ್ರ ಇತ್ಯಾಹ** ||

**ಅರ್ಥಃ**-ವಿರಚಿಸಬೇಕೆಂದು ತಮ್ಮ ಬುದ್ಧಿಯಲ್ಲಿ ಸನ್ನಿಹಿತವಾದ ಗ್ರಂಥದ ಆರಂಭದಲ್ಲಿ-ಗ್ರಂಥಕಾರರು "ಹರಿಕಥಾಮೃತಸಾರವನ್ನು ಪೇಳುವೆ" ಎಂಬುದಾಗಿ ಪ್ರತಿಜ್ಞೆ ಮಾಡಿರುವರು. ಹರಿಕಥಾಮೃತಸಾರವೆಂಬ ಗ್ರಂಥದಲ್ಲಿ- "ವಿಷಯ ಪ್ರಯೋಜನ, ಸಂಬಂಧ ಅಧಿಕಾರಿ" ಎಂಬ ನಾಲ್ಕು ವಿಧವಾದ ಅನುಬಂಧ ಗಳು ಇರುವದಿಲ್ಲವಾದುದರಿಂದ "ಕಾಗೆಗೆ (ಹಲ್ಲು) ದಂತಗಳೆಷ್ಟು? ಟಗರಿನ ಅಂಡವು ಎಷ್ಟುಪಲ (ಅಳತೆ) ವುಳ್ಳದ್ದು? "ಕಂಬಳಿಯಲ್ಲಿ ಕೂದಲಗಳೆಷ್ಟು? ಚೋರರ ಗುಂಪಿನಲ್ಲಿ ಸುದ್ದಿ ಏನು?" ಎಂಬ ಗಾದೆಯಂತೆ ಕಾಕದಂತ ಪರೀಕ್ಷಾ ಗ್ರಂಥದಂತೆ ಈ ಹರಿಕಥಾಮೃತಸಾರವೆಂಬ ಗ್ರಂಥವು ಆರಂಭಣೀ ಯವಲ್ಲ; (ಸಜ್ಜನರಿಗೆ ಓದಲು-ಉಪಯೋಗಿಸಲು ಅರ್ಹವಲ್ಲ)ಎಂಬ ದೋಷವು ಬರುವದು ಎಂದು-ಆಕ್ಷೇಪವನ್ನು ಉಟ್ಟಂಕನಮಾಡಿ (ತಂದುಕೊಂಡು) "ಇಲ್ಲಿ ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿಗಳು ಇರುತ್ತವೆ!" ಎಂಬು ದನ್ನು ತಿಳಿಪಡಿಸಲು "ಹರಿಕಥಾಮೃತಸಾರ"ವೆಂದು ಈ ಗ್ರಂಥಕ್ಕೆ ನಾಮ ಕರಣವಾಗಿದೆ. ಎಂದು ಹೇಳುತ್ತಾರೆ "**ಹರಿಕಥಾಮೃತಸಾರ**" ಎಂಬುದಾಗಿ||



## ತಾಮ್ರಪರ್ಣೀಯಾ

"**ಹರಿಕಥಾಮೃತ ಸಾರೇತಿ** || ಅತ್ರ ವಿಷಯೋ ಹರಿಃ | ಕಥಾ ಪ್ರಯೋಜನಂ | ಅಮೃತ ಮೇವ ಸಂಬಂಧಃ || ಸಾರೋಧಿಕಾರೀ || ಅನೇನ ಗ್ರಂಥೇನ ಹರೇರ್ಮುಖ್ಯತಯಾ ಪ್ರತಿಪಾದ್ಯತ್ವಾತ್ ಹರಿರೇವಾತ್ರ ವಿಷಯಃ || ಯತ್ಕಥಾಶ್ರವಣಜನ್ಯಜ್ಞಾನೇನ ಹರಿಪ್ರಸಾದೋ ಭವತಿ ತತ್ಕಥಾ ಶ್ರವಣ ಜನ್ಯ ಜ್ಞಾನಂ ಪ್ರಯೋಜನಮ್ || ಯದ್ಧರಿಪ್ರಸಾದೇನಾಽಮೃತಂ ನಾಮ ಮೋಕ್ಷೋ ಭವತಿ ತಸ್ಮಾತ್ತತ್ಸಂಬಂಧಃ || ಸಾರಃ ಸರತಿ ಮೋಕ್ಷಂಗಚ್ಛತೀತಿ ಸಾರಃ || "ಸೃ ಸರಗತ್ಯೋರಿತ್ಯಸ್ಮಾದ್ಧಾತೋಃ" ಅಧಿಕಾರೀತ್ಯರ್ಥಃ || ತೇಷಾಂ ವಿಷಯ ಪ್ರಯೋಜನ ಸಂಬಂಧಾಧಿಕಾರಿಣಾಂ ಪರಸ್ಪರಯೋಗ್ಯತಯಾ ಸಂಬಂಧಃ || ಹರೇಶ್ಚಕಥಾಯಾಶ್ಚ ಪ್ರತಿಪಾದ್ಯಪ್ರತಿಪಾದಕಭಾವಸಂಬಂಧಃ ಕಥಾಯಾಶ್ಚ ಅಮೃತಸ್ಯ ಪ್ರಯೋಜಕ ಪ್ರಯೋಜ್ಯಭಾವ ಸಂಬಂಧಃ || ಅಮೃ ತಸ್ಯ ಸಾರಸ್ಯ ಗಮ್ಯಗಂತೃಭಾವಸಂಬಂಧಃ || ಇತ್ಥಂ ಪರಸ್ಪರಸಂಬಂಧಸ್ಯ ವಿದ್ಯಮಾನತ್ವಾತ್ ವಿಷಯ ಪ್ರಯೋಜನ ಸಂಬಂಧಾಧಿಕಾರೀತಿ ಸಂಬಂಧ ಚತು ಷ್ಟಯತ್ವಾದಾರಂಭಣೀಯೋಽಯಂ ವೇದಾಂತವತ್||

## ಕನ್ನಡಾರ್ಥ

ಇಲ್ಲಿ ವಿಷಯುವು ಹರಿಯು; ಕಥೆಯು ಪ್ರಯೋಜನ, ಅಮೃತವು ಸಂಬಂಧ, ಸಾರವು ಅಧಿಕಾರಿಯು. ಈ ಪ್ರಬಂಧವು ಶ್ರೀಹರಿಯನ್ನು ಮುಖ್ಯ ವಾಗಿ ಪ್ರತಿಪಾದಿಸುವದರಿಂದ ಹರಿಯೇ ಇಲ್ಲಿ ವಿಷಯನು. ಯಾರ ಕಥೆಯ

ಶ್ರವಣದಿಂದ ಜನಿಸುವ ಜ್ಞಾನದಿಂದ ಮೋಕ್ಷೋಪಯೋಗಿಯಾದ ಹರಿಪ್ರಸಾದವಾಗುವದೋ ಆವನ ಆ ಕಥಾ ಶ್ರವಣದಿಂದ ಬರುವ ಜ್ಞಾನವೇ ಪ್ರಯೋಜನವು. ಹರಿಯ ಪ್ರಸಾದದಿಂದ ಮೋಕ್ಷವೆಂಬ ಅಮೃತವಾಗುವದು; ಆದರಿಂದ ಅಮೃತವು ಸಂಬಂಧವಾಗುತ್ತದೆ. ಸಾರ:— ಸರ-ಗತಿ ಅರ್ಥಗಳಲ್ಲಿರುವ ಸೃದಾತುವಿನಿಂದ ಹುಟ್ಟಿರುವದರಿಂದ ಮೋಕ್ಷಕ್ಕೆ ಹೋಗುವವನು ಸಾರನು=ಅಧಿಕಾರಿಯೆಂದರ್ಥ. ಈ ವಿಷಯ ಪ್ರಯೋಜನ ಸಂಬಂಧಾಧಿಕಾರಿಗಳಿಗೆ ಒಂದಕ್ಕೊಂದು ಪರಸ್ಪರ ಯೋಗವಿರುವದರಿಂದ ಸಂಬಂಧವಿರುತ್ತದೆ. ಹರಿಗೂ-ಕಥೆಗೂ "ಹೇಳಲ್ಪಡುವದು.-ಹೇಳುವದು" ಪ್ರತಿಪಾದ್ಯಪ್ರತಿಪಾದಕಭಾವವೆಂಬ ಸಂಬಂಧವು; "ಕಥೆಗೂ-ಅಮೃತಕ್ಕೂ ಪ್ರಯೋಜ್ಯ ಪ್ರಯೋಜಕ ಭಾವವು "ಕಥೆಯಿಂದ ಅಮೃತವಾಗುವದು" ಇದೇ ಸಂಬಂಧವು. ಅಮೃತಕ್ಕೂ ಸಾರಕ್ಕೂ ಗಮ್ಯ ಗಂತೃಭಾವವು "ಹೊಂದುವದು ಹೊಂದಲ್ಪಡುವದು" ಸಂಬಂಧವು; ಹೀಗೆ ಪರಸ್ಪರವಾಗಿ ಸಂಬಂಧವಿರುವದರಿಂದ-ಅನುಬಂಧ ಚತುಷ್ಟಯವಿರುವದರಿಂದ-ವೇದಾಂತದಂತೆ ಈ ಗ್ರಂಥವು ಆರಂಭಣೀಯವು ! (ಆರಂಭಿಸಲು ಯೋಗ್ಯವಾದದ್ದು.)

## ತಾಮ್ರಪರ್ಣೀಯಾ

**ನನು ಕಥಾಶ್ರವಣಜನ್ಯ** ಜ್ಞಾನೇನ ಹರಿಪ್ರಸಾದೋಭವತಿ । ಹರಿಪ್ರಸಾದೇನ ಮೋಕ್ಷೋಭವತೀತ್ಯುಕ್ತಂ । ಕಥಾಶ್ರವಣಜನ್ಯಜ್ಞಾನೇನ ಕೀದೃಕ್ ಪ್ರಸಾದೋಭವತಿ । ತೇನ ಪ್ರಸಾದೇನ ಕಥಂ ಮೋಕ್ಷೋಭವತಿ ಇತ್ಯಾಶಂಕ್ಯ **ಕಥಾಶ್ರವಣಜನ್ಯಜ್ಞಾನಮಾಹ** ॥ ಕಥಾಶ್ರವಣೇನ ಹರಿಃಸರ್ವೋತ್ತಮಃ ವಾಯುರ್ಜೀವೋತ್ತಮಃ ಇತ್ಯಾದಿಜ್ಞಾನಮಿತ್ಯರ್ಥಃ ನಾನ್ಯದಿತಿ । ತೇನ ಜ್ಞಾನೇನ ಅನಂತಜ್ಞಾನಾನಂದಾದಿಗುಣಪರಿಪೂರ್ಣಂ ಬ್ರಹ್ಮೋಪಾಸ್ಯತೇ । **ಕಥಮಿತ್ಯತ ಆಹ** ॥ **ಓಂ ಓಂ** ಅಥಾತೋ ಬ್ರಹ್ಮಜಿಜ್ಞಾಸೇತಿಸೂತ್ರೋಕ್ತದಿಶಾ ಬ್ರಹ್ಮಜಿಜ್ಞಾಸಾಜನ್ಯಜ್ಞಾನೇನ "ಏನಂ ಮೋಚಯಾಮೀತಿ" ಹರಿಪ್ರಸಾದೋಭವತಿ । ತಾದೃಶಪ್ರಸಾದೇನ" "ಯಮೇವೈಷವೃಣುತೇ ತೇನಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್" ಇತ್ಯುಕ್ತೇನ ಮುಕ್ತೋಭವತಿ ॥



"ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸನ್ಯಾಸಯೋಗಾದ್ಯತಯಃ ಶುದ್ಧ ಸತ್ವಾಃ। ತೇ ಬ್ರಹ್ಮಲೋಕೇಷು ಪರಾಂತಕಾಲೇ ಪರಾಮೃತಾತ್ ಪರಿಮುಚ್ಯಂತಿಸರ್ವ" ಇತ್ಯಥರ್ವಣೋಪನಿಷದಿ । ಅನೇನ ಜ್ಞಾನಪ್ರಾಪ್ತೌ ಶ್ರವಣಸ್ಯ ಪ್ರಾಥಮಿಕತ್ವಾತ್ ಶ್ರವಣಮವಶ್ಯಂ ಕಾರ್ಯಮ್ । ತದುಕ್ತಂಭಾಷ್ಯೇ । "ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥೈವಚ । ಸಾಧನಂ ಜ್ಞಾನಸಂಪತ್ತೌ ಪ್ರಧಾನಂ ನಾನ್ಯದಿಷ್ಯತೆ " ಇತಿ । ಶ್ರವಣಾನ್ಮನನಂ, ಮನನಾತ್ ಧ್ಯಾನ್ಯಂ, ಧ್ಯಾನಾದ್ಭಕ್ತಿಃ ಭಕ್ತೇಃಜ್ಞಾನಂ ಜ್ಞಾನಾನ್ ಮೋಕ್ಷ ಇತಿಪಾರಂಪರ್ಯೇಣ ಮೋಕ್ಷಸದ್ಭಾವಾತ್ ಕಥಾಶ್ರವಣಜನ್ಯಜ್ಞಾನೇನ ಮೋಕ್ಷೋಭವತಿ ಇತ್ಯರ್ಥಃ ॥

## ಕನ್ನಡಾರ್ಥ

"ಕಥೆಯ ಶ್ರವಣದಿಂದಜನಿಸುವ (ಬರುವ) ಜ್ಞಾನದಿಂದ ಹರಿಪ್ರಸಾದವಾಗುತ್ತದೆ. ಹರಿಪ್ರಸಾದದಿಂದ ಮೋಕ್ಷವಾಗುತ್ತದೆ ಎಂದು ಹೇಳಲಾಯಿತಷ್ಟೆ ! ಕಥಾ ಶ್ರವಣದಿಂದ ಬರುವ ಜ್ಞಾನದಿಂದ ಎಂಥ ಪ್ರಸಾದವಾಗುತ್ತದೆ ? ಆ ಪ್ರಸಾದದಿಂದ ಹೇಗೆ ಮೋಕ್ಷವಾಗುತ್ತದೆ ? ಎಂಬುದಾಗಿ ಆಕ್ಷೇಪಿಸಿಗೊಂಡು-ಕಥಾಶ್ರವಣಜನ್ಯಜ್ಞಾನವನ್ನು ಹೇಳುತ್ತಾರೆ. ಕಥೆಯ ಶ್ರವಣದಿಂದ "ಹರಿಯು ಸರ್ವೋತ್ತಮನು; ವಾಯುವು ಜೀವೋತ್ತಮನು" ಎಂದು ಮುಂತಾದ ಜ್ಞಾನವು ಬರುವದೆಂದು ತಿಳಿಯಬೇಕು. ಅದೇ ಸರಿಯಾದ ಜ್ಞಾನವು; ಮಿಕ್ಕದುದಲ್ಲ ! ಈ ಜ್ಞಾನದಿಂದಲೇ ಅನಂತಜ್ಞಾನಾನಂದ ಗುಣಪರಿಪೂರ್ಣನಾದ ಪರಬ್ರಹ್ಮನು ಉಪಾಸಿತನಾಗುತ್ತಾನೆ. ಹೇಗೆಂಬುದನ್ನು ಹೇಳುತ್ತಾರೆ. "ಓಂ ಓಂ **अथातो ब्रह्मजिज्ञासा** ಓಂ" ಎಂಬ ಸೂತ್ರದಲ್ಲಿ ಹೇಳಿದಂತೆ ಬ್ರಹ್ಮಜಿಜ್ಞಾಸೆಯಿಂದ ಬರುವ ಜ್ಞಾನದಿಂದ "ಇವನನ್ನು ಭವಬಂಧದಿಂದ ಬಿಡಿಸುತ್ತೇನೆ" ಎಂಬ ಹರಿಪ್ರಸಾದವು ಆಗುತ್ತದೆ. ಅಂಥ ಪ್ರಸಾದದಿಂದ- **एष** :ಈ ಪರಮಾತ್ಮನು **यम्एव** ಯಾವನನ್ನೇ **वृणुते**=ವರಿಸುತ್ತಾನೋ **तेन** ಆ ಪುರುಷನಿಂದಲೇ **लभ्यः** ಹೊಂದಲ್ಪಡತಕ್ಕವನು.(ಒಲಿಯುತ್ತಾನೆ) **तस्यैव**=ಅವನಿಗೇ ಆ ಪರಮಾತ್ಮನು **स्वां तनूं** ತನ್ನ ಸ್ವರೂಪವನ್ನು **विवृणुते**= ವಿವರಿಸಿ ತಿಳಿಸುತ್ತಾನೆ. " ಎಂಬ ವಾಕ್ಯವಿರುವದರಿಂದ ಮುಕ್ತರಾಗುತ್ತಾರೆ. "ವೇದಾಂತವಿಜ್ಞಾನದಿಂದ ಪರಮಾತ್ಮನ ನಿಶ್ಚಯವುಳ್ಳವರೂ ಸನ್ಯಾಸಯೋಗದಿಂದ ಯತಿ

ಯಂ ಉತ್ತಮಃ ॥ ತದುಕ್ತಂ ಭಾಷ್ಯೇ ॥ ಭಕ್ತಿಮಾನ್ ಪರಮೋ ವಿಷ್ಣೌ ಯಸ್ತ್ವಧ್ಯಯನವಾನ್ನರಃ। ಅಧಮಃ ಶಮಾದಿಸಂಯುಕ್ತೋ ಮಧ್ಯಮಃ ಸ ಉದಾಹೃತಃ । ಆಬ್ರಹ್ಮಸ್ತಂಬ ಪರ್ಯಂತಮಸಾರಂ ಚಾಪ್ಯನಿತ್ಯಕಂ । ವಿಜ್ಞಾಯಜಾತವೈರಾಗ್ಯೋವಿಷ್ಣುಪಾದೈಕಸಂಶ್ರಯಃ ॥ ಸ ಉತ್ತಮೋಧಿಕಾರೀ ಸ್ಯಾತ್ ಸನ್ಯಸ್ತ್ಯಾಖಿಳಕರ್ಮವಾನ್" ಇತಿವಚನಾತ್ । ಪೂರ್ವೋಕ್ತಾಧಿಕಾರಿಣಾಮತ್ರ ಅಧಿಕಾರಃ॥

## ಕನ್ನಡಾರ್ಥ

ಅಧಿಕಾರಿಗಳು ಅನೇಕರಿರುವದರಿಂದ ಗ್ರಂಥಕಾರರು ಏಕವಚನದಿಂದ "ಅಧಿಕಾರೀ" ಎಂದು ಹೇಗೆ ನಿರ್ದೇಶಿಸಿದರೆಂದು ಪ್ರಶ್ನೆಯು ಹುಟ್ಟುವದು. ಅದಕ್ಕೆ ಹೀಗೆ ತಿಳಿಯಬೇಕು. "ಅಧಿಕಾರೀ ಎಂಬ ಶಬ್ದದ ಮುಂದಿನವಿಭಕ್ತಿಯು ಜಾತಿಯರ್ಥದಲ್ಲಿರುವ ಪ್ರಥಮಾ ಏಕವಚನದ್ದೆಂದು ತಿಳಿಯಬೇಕು. ಅಂದರೆ ಅಧಿಕಾರಿ ಸಮೂಹವೆಂದು ಆ ಪದಕ್ಕೆ ಅರ್ಥಮಾಡಬೇಕು. ಮಂದ, ಮಧ್ಯಮ ಉತ್ತಮ, ಎಂಬುದಾಗಿ ಅಧಿಕಾರಿಗಳು ಮೂರುವಿಧರು. ಇದಕ್ಕೆ ಭಾಷ್ಯಸಮ್ಮತಿಯುಂಟು. "ಮಂದ, ಮಧ್ಯಮ, ಉತ್ತಮ ಎಂದು ತ್ರಿವಿಧ ಅಧಿಕಾರಿಗಳು"ಎಂದು ಭಾಷ್ಯದಲ್ಲಿ ಸ್ಪಷ್ಟವಚನವಿರುತ್ತದೆ. ಅದರಲ್ಲಿ–ಮನುಷ್ಯೋತ್ತಮರಾದವರು ಮಂದಾಧಿಕಾರಿಗಳು, ಋಷಿ ಮತ್ತು ಗಂಧರ್ವರುಗಳು ಮಧ್ಯಮಾಧಿಕಾರಿಗಳು; ದೇವತೆಗಳು ಉತ್ತಮಾಧಿಕಾರಿಗಳು. ಇದರಂತೆ ಭಾಷ್ಯದಲ್ಲಿ "ತತ್ರ ಮಂದಾ ಮನುಷ್ಯೇಷು ಯ ಉತ್ತಮಗಣಾಮತಾಃ । ಮಧ್ಯಮಾ ಋಷಿ ಗಂಧರ್ವಾ ದೇವಾಸ್ತತ್ರೋತ್ತಮಾ ಮತಾಃ ಇತಿ" ಎಂದು ಜಾತಿ ಭೇದಾನುಗುಣವಾಗಿ ಅಧಿಕಾರವನ್ನು ಹೇಳಿ ಗುಣಕೃತವಾದ ಅಧಿಕಾರಿ ಪ್ರಭೇದವನ್ನು ಹೇಳುತ್ತಾರೆ.

ವಿಷ್ಣುವಿನಲ್ಲಿ ಭಕ್ತಿಯುಳ್ಳವನಾಗಿ ಅಧ್ಯಯನ ಮಾಡಿದವನು ಯಾವನೋ ಅವನು ಮಂದಾಧಿಕಾರಿಯು. ಶಮಾದಿಗಳುಳ್ಳವನು ಯಾವನೋ ಅವನು-ಅಂದರೆ– ಶಮಭಗವನ್ನಿಷ್ಠತಾಬುದ್ಧಿಃ. ಆದಿಶಬ್ದದಿಂದ ದಮವೊದಲಾದವನ್ನು ತೆಗೆದುಕೊಳ್ಳಬೇಕು. ದಮಃ=ಇಂದ್ರಿಯ ನಿಗ್ರಹಃ ಹೀಗೆ (ಭಗವತ್ಪಾದರ) ವಚನ ವಿರುವದರಿಂದ ಪ್ರಚುರ ಶಮದಮಾದಿಗಳಿಂದ ಕೂಡಿದ



ವನಾಗಿ ಅಲ್ಪವಿಷ್ಣುಭಕ್ತಿ-ಅಧ್ಯಯನಗಳುಳ್ಳವನು ಮಧ್ಯಮಾಧಿಕಾರಿಯು. ಚತುರ್ಮುಖನನ್ನು ಆರಂಭಿಸಿ ತೃಣಾಂತವಾದ ಜಗತ್ತೆಲ್ಲವೂ ಅಸಾರ ಅಸರ್ವೋತ್ತಮವೆಂದೂ ಆಯಾ ಪದವಿಗಳು ಅನಿತ್ಯವೆಂದು ತಿಳಿದುಕೊಂಡು ಹುಟ್ಟಿದ ವೈರಾಗ್ಯವುಳ್ಳವನಾಗಿ ಅಖಿಲಕರ್ಮಫಲಗಳನ್ನು ಪರಿತ್ಯಜಿಸಿ, ವಿಷ್ಣುಪಾದೈಕಸಂಶ್ರಿತನಾಗಿ ಅಪ್ರಚರವಾದಶಮದಮಾದಿಯುಕ್ತನಾಗಿಯೂ ಅಪ್ರಚುರಅಧ್ಯಯನವುಳ್ಳವನಾಗಿಯೂ-ಯಾವನಿರುವನೋ ಅವನು ಉತ್ತಮಾಧಿಕಾರಿಯು- ಇದಕ್ಕೇ ಭಾಷ್ಯದ ಸಮ್ಮತಿ

"ಭಕ್ತಿಮಾನ್ ಪರಮೋವಿಷ್ಣೌ, ಯಸ್ತ್ವಧ್ಯಯನವಾನ್ನರಃ
ಅಧಮಃ ಶಮಾದಿ ಸಂಯುಕ್ತೋ ಮಧ್ಯಮಃ ಸಮುದಾಹೃತಃ
ಆಬ್ರಹ್ಮಸ್ತಂಬಪರ್ಯಂತಂ ಅಸಾರಂಚಾಪ್ಯನಿತ್ಯಕಂ
ವಿಜ್ಞಾಯ ಜಾತವೈರಾಗ್ಯೋ ವಿಷ್ಣುಪಾದೈಕಸಂಶ್ರಯಃ
ಸಉತ್ತಮೋಧಿಕಾರೀಸ್ಯಾತ್ ಸನ್ಯಸ್ತಾಖಿಲಕರ್ಮವಾನ್ ॥

ಎಂಬುದಾಗಿ- । ಹೀಗೆ ವಚನವಿರುವದರಿಂದ ಶ್ರೀಮದ್ ಭಾಷ್ಯದಲ್ಲಿ ಹೇಳಲ್ಪಟ್ಟಿರುವವರಿಗೇ ಇದರಲ್ಲಿ ಅಧಿಕಾರವೆಂಬುದಾಗಿ ತಿಳಿಯಬೇಕು.

## ತಾಮ್ರಪರ್ಣೀಯಾ

**"ಗುರುಗಳ ಕರುಣದಿಂದ"** ಇತ್ಯತ್ರ ಗುರುಪ್ರಸಾದೇನೇತ್ಯರ್ಥಃ। ಗುರುಪ್ರಸಾದಮಂತರೇಣ ಹರಿಪ್ರಸಾದೋನಸ್ಯಾದಿತಿ । ಹರಿಪ್ರಸಾದೇಚ್ಛುನಾ ಅವಶ್ಯಂ ಗುರುಪ್ರಸಾದಃ ಸಂಪಾದನೀಯಃ ಇತ್ಯರ್ಥಪ್ರದರ್ಶನಾಯ "ಗುರುಗಳ ಕರುಣದಿಂದಾ ಇತ್ಯುಕ್ತಮ್"॥ ತದುಕ್ತಂ ಗುರುಸ್ತೋತ್ರೇ ॥ ಹರಿಪ್ರಸಾದಕಾಮೇನ ಗುರುಕರುಣಾಭಿಲಾಷಿಣಾ–ಗುರುಕರುಣಾವೃತೇ ದೇವಹರಿಕರುಣಾನವೈತಥೇತಿ । "ಗುರುಪ್ರಸಾದೋಬಲವಾನ್ನತಸ್ಮಾದ್ಬಲವತ್ತರಃ ಇತಿವಚನಾತ್ ಗುರುಣಾಂ ಕೃಪಾಬಲೇನೇತ್ಯರ್ಥಃ ॥

## ಕನ್ನಡಾರ್ಥ

**"ಗುರುಗಳ ಕರುಣದಿಂದ"** ಎಂಬಲ್ಲಿ ಗುರುಪ್ರಸಾದದಿಂದ ಎಂದು ಅರ್ಥ ಮಾಡಬೇಕು. ಗುರುಪ್ರಸಾದವಿಲ್ಲದೆ ಹರಿಪ್ರಸಾದವಾಗುವದಿಲ್ಲ. "ಹರಿಪ್ರಸಾದವನ್ನು ಇಚ್ಛಿಸುವವರು ಗುರು ಪ್ರಸಾದವನ್ನು ಅವಶ್ಯವಾಗಿ ಸಂಪಾದಿ

ಸಲೇ ಬೇಕು" ಎಂಬರ್ಥವನ್ನು ತೋರಿಸುವದಕ್ಕಾಗಿ "ಗುರುಗಳ ಕರುಣದಿಂದಾ" ಎಂದು ಹೇಳುತ್ತಾರೆ. ಗುರುಸ್ತೋತ್ರದಲ್ಲಿ ಇದನ್ನು ಹೇಳಲಾಗಿದೆ "ಹರಿಪ್ರಸಾದಕಾಮನಾಗಿ ಗುರುಪ್ರಸಾದವನ್ನು ಅಪೇಕ್ಷಿಸುವರು." ಹಾಗೂ ಗುರುಗಳ ಕರುಣೆಯಿಲ್ಲದೇ ಹರಿಯ ಕರುಣೆಯು ಸುಮ್ಮನೆ ಬರತಕ್ಕುದ್ದಲ್ಲ" ಎಂದೂ "ಗುರುಪ್ರಸಾದವು ಬಲವುಳ್ಳದ್ದು; ಅದಕ್ಕಿಂತಲೂ ಹೆಚ್ಚಿಗೆ ಬಲವುಳ್ಳದ್ದು ಯಾವದೂ ಇಲ್ಲ. ಎಂದೂ ವಚನಗಳಿರುವದರಿಂದ "ಗುರುಗಳ ಕೃಪಾ ಬಲದಿಂದ" ಎಂದು ಅರ್ಥ

### ತಾಮ್ರಪರ್ಣೀಯಾ

" **ಆಪನಿತು** " ಇತ್ಯತ್ರ ಯಥಾಯೋಗ್ಯಂ ಜ್ಞಾತ್ವಾ । ಹರಿಕಥಾಮೃತ ಸಾರಾಖ್ಯಸಂಹಿತಾಂ ಹರೇಃ ಕಥಾ ಸೈವಾಮೃತಂ ತಸ್ಯಸಾರಃಸ ಇತಿ ಆಖ್ಯಾ ಯಸ್ಯಸಃತಥೋಕ್ತಃತಮ್॥ **ಪೇಳ್ವೇತ್ಯಸ್ಯ** ವಕ್ಷ್ಮೀತ್ಯರ್ಥಃ ॥

### ಕನ್ನಡಾರ್ಥ

**ಆಪನಿತು**- ಯೋಗ್ಯತೆಗೆ ಅನುಸರಿಸಿ ತಿಳಿದಷ್ಟು ಹರಿಕಥಾಮೃತಸಾರವೆಂಬ ಗ್ರಂಥವನ್ನು(ಸಂಹಿತೆ)- ಹರಿಯಕಥೆಯೇ ಅಮೃತ ಅದರ ಸಾರ, (ರಹಸ್ಯ) ಎಂಬ ಹೆಸರು ಯಾವುದಕ್ಕೋ- ಅದು ಹರಿಕಥಾಮೃತಸಾರ, ಅದನ್ನು ಪೇಳ್ವೆ=ಹೇಳುವೆನು.

### ತಾಮ್ರಪರ್ಣೀಯಾ

"**ಪರಮಭಗವದ್ಭಕ್ತ**"**ಇತ್ಯತ್ರ** ಪರಾ ದೇಶತಃಕಾಲತಃಗುಣತಃ ಅಪ್ರತಿಹತಾ ಮಾ=ಜ್ಞಾನಂ । ಮಾಙ್=ಮಾನ ಇತಿಧಾತೋಃ" ಯಸ್ಯಸಃ ಪರಮಃ 'ಭಗಂ' ಸಮಗ್ರೈಶ್ವರ್ಯಂ ಸಮಗ್ರವೀರ್ಯಂ ಸಮಗ್ರಂಯಶಃ ಸಮಗ್ರಾಶ್ರೀಃ, ಸಮಗ್ರಂಜ್ಞಾನಂ ಸಮಗ್ರಂ ವಿಜ್ಞಾನಂ-ಸಮಗ್ರಷಡೈಶ್ವರ್ಯಂ ಅಸ್ಯಾಸ್ತೀತಿ ಭಗವಾನ್ ॥ ತದುಕ್ತಂಐಶ್ವರ್ಯಸ್ಯ ಸಮಗ್ರಸ್ಯವೀರ್ಯಸ್ಯಯಶಸಃ ಶ್ರಿಯಃ ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂಭಗ ಇತೀಣಾದಿರತ್ಯುಕ್ತೇಃ॥ ಪರಮಶ್ಚಾಸೌ ಭಗವಾಂಶ್ಚ="ಪರಮಭಗವಾನ್" ॥ ಪರಮ ಭಗವತಃಭಕ್ತಾ ಮಹಾತ್ಮ್ಯ ಜ್ಞಾನಪೂರ್ವಕ ಸುದೃಢಸ್ನೇಹಾತ್ಮಕಪ್ರೇಮಪ್ರವಾಹರೂಪಾತ್ಮಿಕಾ ಭಕ್ತಿಃ



ಯೇಷಾಂತೇ ಭಕ್ತಾಃ । ಪರಮಭಗವತಃ ಭಕ್ತಾಃ । ಪರಮ ಭಗವದ್ಭಕ್ತಾಃ । ಭಗವಂತಃ=ಪೂಜ್ಯವಂತಶ್ಚತೇ ಭಕ್ತಾಶ್ಚ ಭಗವದ್ಭಕ್ತಾಃ । ಪರಾ ಉತ್ತಮಾ ಮಾ ಹರಿ ಸರ್ವೋತ್ತಮಃ ವಾಯುರ್ಜೀವೋತ್ತಮಃಇತ್ಯಾದಿ ಜ್ಞಾನಮೇಷಾಂ ತೇ ಪರಮಾಃ ॥ .ಪರಮಾಶ್ಚತೇ ಭಗವದ್ಭಕ್ತಾಶ್ಚ ಪರಮಭಗವದ್ಭಕ್ತಾಃ

### ಕನ್ನಡಾರ್ಥ

" **ಪರಮಭಗವದ್ಭಕ್ತರು** " ಎಂಬಲ್ಲಿ ಪರಾ=ದೇಶ ಕಾಲಗುಣಗಳಿಂದ ನಾಶರಹಿತವಾದ ಮಾ=ಜ್ಞಾನವು; ( ಮಾಙ್=ಜ್ಞಾನೇ. ಎಂಬ ಧಾತುವಿರುವದರಿಂದ) ಯಾವನಿಗೋ ಅವನು ಪರಮನು. ಭಗಃ ಪೂರ್ಣವಾದ ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀ ಜ್ಞಾನ ಹಾಗೂ ವಿಜ್ಞಾನಗಳು- ಎಂಬ ಆರು ವಿಧವಾದ ಐಶ್ವರ್ಯಗಳಿಗೆ ಭಗವೆಂದು ಶಾಸ್ತ್ರದಲ್ಲಿ ಹೇಳಿರುವದರಿಂದ- ಇವುಗಳುಳ್ಳವನು ಭಗವಂತನು. ಪರಮನಾದ ಭಗವಂತನು. ಪರಮ ಭಗವಂತನ ಭಕ್ತರು=ಪರಮ ಭಗವದ್ಭಕ್ತರು. (೧) ಭಕ್ತರೆಂದರೆ ಮಾಹಾತ್ಮ್ಯ ಜ್ಞಾನಪೂರ್ವಕವಾದ ಭಗವಂತನಲ್ಲಿ ಮಾಡುವ ಸುದೃಢಪ್ರೇಮಪ್ರವಾಹ ರೂಪವಾದ ಭಕ್ತಿವಂತರು. ಭಗವಂತರಾದ=ಪೂಜ್ಯರಾದ ಭಕ್ತರು=ಪರಮ ಭಗವದ್ಭಕರು. (೨) ಪರಮ=ಉತ್ಕೃಷ್ಟವಾದ "ಹರಿಸರ್ವೋತ್ತಮ, ವಾಯು ಜೀವೋತ್ತಮ" ಎಂಬ ಜ್ಞಾನವುಳ್ಳ, ಭಗವದ್ಭಕ್ತರು=ಪರಮಾತ್ಮನ ಭಕ್ತರು. ಎಂದು ಅರ್ಥ. :(೩)

### ತಾಮ್ರಪರ್ಣೀಯಾ

"**ಇದನು**" ಇತ್ಯತ್ರ ಇದಂ ವಕ್ಷ್ಯ ಮಾಣಂ=**ಆದರದಿ** ಇತ್ಯತ್ರ ಏತದ್ಧರಿಕಥಾಮೃತಸಾರ ಶ್ರವಣೇನ ಮೋಕ್ಷೋ ಭವತೀತ್ಯಾದರೇಣೇತ್ಯರ್ಥಃ । **ಕೇಳುವದಿತ್ಯತ್ರ**=ಶೃಣುಯಾದಿತ್ಯರ್ಥಃ। ಭಗವದ್ಭಕ್ತೈಃ ಸದಾ ಹರಿಕಥಾಮೃತಸಾರಃ ಶ್ರವಣೀಯ ಇತಿ ಭಾವಃ। ಇತಿ ಶ್ರೀಮದ್ಧರಿಕಥಾಮೃತಸಾರೇ ಪಲ್ಲಾಭಿಪ್ರಾಯೇ ಪ್ರಥಮಾರ್ಥಃ ಸಮಾಪ್ತಃ ॥ ಶ್ರೀಗುರುರಾಜಾರ್ಪಣ ಮಸ್ತು ॥ ಶ್ರೀಗುರುರಾಜಾಯ ಮಂಗಳಂ॥

### ಕನ್ನಡಾರ್ಥ

ಇದನು=ಮುಂದೆ ಹೇಳಲ್ಪಡುವ ಈ ಹರಿಕಥಾಮೃತಸಾರವನ್ನು ಆದರದಿ="ಹರಿಕಥಾಮೃತಸಾರ ಶ್ರವಣದಿಂದ ಮೋಕ್ಷವಾಗುವದು " ಎಂಬ ದೃಢ ನಿಶ್ಚಯರೂಪವಾದ ಆದರದಿಂದ ಕೇಳುವದು=ಕೇಳಬೇಕು. ಭಗವದ್ಭಕ್ತರು ಹರಿಕಥಾಮೃತಸಾರವನ್ನು ಶ್ರವಣ ಮಾಡಬೇಕು.

## ತಾಮ್ರಪರ್ಣೀಯಾ

### ಅಥ ಪಲ್ಲವಿದ್ವಿತೀಯಾರ್ಥ

ಶ್ರೀ ಗುರುರಾಜೊವಿಜಯತೇ ॥ **ಓಂ ಹರಿ ಓಂ** ॥

ಶ್ಲೋಕ॥ ಶ್ರೀಲಕ್ಷ್ಮ್ಯೇಕರ ಪೂಜಿತಾಂಘ್ರಿ ಜಲಜಃ ಬ್ರಹ್ಮೇರವಾಣೀರಯೀ
ವೀಶಾಹೀಶ ಗಿರೀಶ ಮಾರಸುರರಾಣ್ಮುಖ್ಯಾಮರಾಳೀನುತಃ ॥
ಬ್ರಹ್ಮಾಂಡೋದಯ ರಕ್ಷಣ ಕ್ಷಯಕರಃ ಸುಕ್ಷೇಮ ಸೌಖ್ಯಪ್ರದಃ ।
ಭೂಯಾದ್ಬಿಂಬಸ್ವರೂಪ ದೇಹನಿಲಯೋ ಮಾಂ ಪಾತು
ಪಂಚಾತ್ಮಕಃ ॥ ೧॥

ಶ್ರೀಪೂರ್ಣಪ್ರಮತಿಪ್ರಣೀತ ಸುಮಹತ್ ಸಿದ್ಧಾಂತಸಾರಾತ್ಮಕಂ ।
ಸುಜ್ಞಾನಂ ಸುಖಬೋಧದಂ ಭುವಿ ಸತಾಮುಜ್ಞೇಯಮಜ್ಞಾನಿನಾಮ್॥
ಪ್ರಜ್ಞಾನಾಯ ತನೋಮಿ ಸದ್ಧರಿಕಥಾಪೀಯೂಷಸಾರಂ ಮುದಾ ।
ವ್ಯಾಖ್ಯಾಂ ಮಂದಸುಬೋಧಿನೀಂ ಗುರುಕೃಪಾಲೇಶಾದಹಂ
ಚಂದ್ರಿಕಾಮ್ ॥ ॥ ೨ ॥

ಸಂತಃಸಂತು ಸುಸಂತುಷ್ಟಾಃ ದುಷ್ಟಾಃನಿಂದಂತು ಸಂತತಮ್ ।
ತಯೋಃಸ್ವಭಾವಸಿದ್ಧತ್ವಾತ್ಕಾತತ್ರ ಪರಿದೇವನಾ ॥ ೩ ॥

ಅಥಕವಿಕುಲತಿಲಕಃ ಶ್ರೀಜಗನ್ನಾಥದಾಸವರ್ಯಃ ಸಕಲಶ್ರುತಿಸ್ಮತೀತಿಹಾಸ ಮಹಾಪುರಾಣರಹಸ್ಯಾರ್ಥಪ್ರಕಟನಾಯ ವಿರಚಿತಾನೇಕಪ್ರಬಂಧಃ ವೇದಾಂತಾರ್ಥೋಪಬೃಂಹಿತಂ ದ್ವಾತ್ರಿಂಶತ್‌ಸಂಧಿಸಮುಪೇತಂ ಭಾಮಿನೀ ಷಟ್ಪದಾತ್ಮಕಂ ಹರಿಕಥಾಮೃತಸಾರಾಖ್ಯಗ್ರಂಥಂ ಚಿಕೀರ್ಷುರಾದಾವೇವ ಪ್ರತಿಜಾನೀತೇ ॥ **ಹರೀತಿ**॥

### ಕನ್ನಡಾರ್ಥ

### ಪಲ್ಲವಿಯ ೨ನೆಯ ಅರ್ಥ

(೧) ಶ್ರೀ ಲಕ್ಷ್ಮಿದೇವಿಯವರ ಕರದಿಂದ ಪೂಜೆಗೊಂಬುವ ಪಾದ ಪಂಕಜವುಳ್ಳವನೂ, ಬ್ರಹ್ಮ, ವಾಯು, ಸರಸ್ವತಿ ಭಾರತಿ ಗರುಡ ಶೇಷ ರುದ್ರ ಪಾರ್ವತೀ ಕಾಮ ಇಂದ್ರ ಮುಂತಾದ ದೇವಸಮೂಹದಿಂದ ಸನ್ನು



ತನೂ, ಬ್ರಹ್ಮಾಂಡದ ಉದಯ-ರಕ್ಷಣ -ಕ್ಷಯಕರನೂ-ಜ್ಞಾನಾನಂದದಾಯಕನೂ ಸರ್ವಸ್ವರೂಪದೇಹದಲ್ಲಿ ಬಿಂಬನಾಗಿರುವವನೂ ಆದ ಪಂಚರೂಪನಾದ ನಾರಾಯಣನು ನನ್ನನ್ನು ಪಾಲಿಸಲಿ ॥

(೨) ಶ್ರೀಮತ್ಪೂರ್ಣಬೋಧರಿಂದ ವಿರಚಿತವಾದ ಮಹಾಸಿದ್ಧಾಂತದ ಸಾರರೂಪವೂ ದಿವ್ಯವಾದ ಜ್ಞಾನವಿಜ್ಞಾನಗಳನ್ನು ಸುಜನರಿಗೆ ಕೊಡುವದೂ ಅಜ್ಞಾನಿಗಳಿಗೆ ಅಗೋಚರವೂ- ವೇದಾಂತಾರ್ಥ (ಬ್ರಹ್ಮಸೂತ್ರ ಉಪನಿಷತ್ ಪುರಾಣ ಮುಂತಾದವುಗಳಲ್ಲಿಯ ಪ್ರಮೇಯ) ಗಳಿಂದವಿರಾಜಮಾನವೂ ಆದ ಶ್ರೀಹರಿಕಥಾಮೃತಸಾರವನ್ನು ಮಂದಮತಿಗಳ ಬೋಧನೆಗಾಗಿ ಗುರುಗಳ ಕರುಣಾಲೇಶದಿಂದ ವ್ಯಾಖ್ಯಾನಿಸುವೆ.

(೩) ಸಜ್ಜನರು ಸಂತುಷ್ಟರಾಗಲಿ; ದುರ್ಜನರು ಸದಾ ನಿಂದಿಸುತ್ತಾ ಇರಲಿ; ಇವರೀರ್ವರ ಸ್ವಭಾವಸಿದ್ಧವಾದಗುಣಗಳಲ್ಲಿ ಮಾಡಬೇಕಾದ ವಿಷಾದವೇನೂ ಇರುವದಿಲ್ಲ.

ಕವಿಕುಲತಿಲಕರಾದ ಶ್ರೀಜಗನ್ನಾಥದಾಸವರ್ಯರು ಸಕಲಶ್ರುತಿ ಸ್ಮೃತಿಇತಿಹಾಸಪುರಾಣಗಳ ರಹಸ್ಯಾರ್ಥಗಳನ್ನು ಪ್ರಕಟಿಸುವದಕ್ಕಾಗಿ ಅನೇಕ ಪ್ರಮೇಯಗ್ರಂಥಗಳನ್ನು ವಿರಚಿಸಿ ವೇದಾಂತಾರ್ಥದಿಂದ ವಿಭೂಷಿತವಾದ ಮೂವತ್ತೆರಡು ಸಂಧಿಗಳಿಂದ ಕೂಡಿರುವ-ಭಾಮಿನೀಷಟ್ಪದಿರೂಪವಾದ ಹರಿ ಕಥಾಮೃತಸಾರವೆಂಬ ಗ್ರಂಥವನ್ನು ವಿರಿಚಿಸಲಿಚ್ಛುಕರಾಗಿ ಮೊದಲು ಪ್ರತಿಜ್ಞೆಯನ್ನು ಮಾಡುತ್ತಾರೆ. "ಹರಿ" ಎಂಬುದಾಗಿ

### ತಾಮ್ರಪರ್ಣೀಯಾ

" **ಹರೀತಿ** " ॥ ಇದಮನಾರಂಭಣೀಯಂ ವಿಷಯಾದ್ಯಭಾವಾತ್ಕಾಕ ದಂತಪರೀಕ್ಷಾಗ್ರಂಥವದಿತ್ಯನಾರಂಭಣೀಯತ್ವಶಂಕಾಯಾಂ ಹರಿಕಥಾ ಮೃತಸಾರೇತ್ಯನೇನ ವಿಷಯಾದೀನಾಂ ಸಿದ್ಧತ್ವಾದಾರಂಭಣೀಯಂ ವೇದಾಂತವತ್ ॥ " **ಹರಿಕಥಾಮೃತಸಾರೇತಿ** " ಪದಚತುಷ್ಟಯಂ । ಅನೇನೈವ ಹರೇರ್ಮುಖ್ಯತಯಾ ಪ್ರತಿಪಾದ್ಯತ್ವಾದ್ಧರಿರೇವ **ವಿಷಯಃ ।** ಹರಿಗುಣಕಥನಾತ್ಕಥಾ । ಯತ್ಕಥಾಶ್ರವಣಜನ್ಯಜ್ಞಾನೇನ ಭಗವದತ್ಯರ್ಥಪ್ರಸಾದದ್ವಾರಾ ಮೋಕ್ಷೋ ಭವತಿ ' **ತದೇವ ಪ್ರಯೋಜನಮ್** ॥ ಸ್ವ ಸರಣಗತ್ಯೋರಿತಿ

ಧಾತೋಃ ಕರ್ತರಿ ಪ್ಯಞ್ ಪ್ರತ್ಯಯೇ ಸರತಿ ಮೋಕ್ಷಮಿತಿ ಸಾರಃ **ಅಧಿಕಾರೀ।** ಹರೇಃ ಕಥಾಯಾಶ್ಚ ಪ್ರತಿಪಾದ್ಯಪ್ರತಿಪಾದಕಭಾವರೂಪ ಸಂಬಂಧಃ। ಕಥಾಯಾಶ್ಚಾಮೃತಸ್ಯ ಪ್ರಯೋಜಕಪ್ರಯೋಜ್ಯಭಾವರೂಪ ಸಂಬಂಧಃ ॥ ಅಮೃತಸ್ಯಾಧಿಕಾರಿಣಶ್ಚ ಗಮ್ಯಗಂತೃಭಾವರೂಪಸಂಬಂಧಃ ॥ ಸಾರಸ್ಯ ಹರೇಶ್ಚ ದಾಸಈಶಭಾವರೂಪಸಂಬಂಧಃ। ಕಥಾಯಾಶ್ಚಾಧಿಕಾರಿಣಃ ವಾಚ್ಯವಕ್ತೃಭಾವರೂಪ ಸಂಬಧಃ ಇತ್ಯುಕ್ತಂ ಭವತಿ ॥

## ಕನ್ನಡಾರ್ಥ

ಈ ಗ್ರಂಥವು ಆರಂಭಣೀಯವಲ್ಲ; "ವಿಷಯಾದಿಗಳಿಲ್ಲದಿರುವದರಿಂದ ಕಾಕದಂತಪರೀಕ್ಷಾ ಗ್ರಂಥದಂತೆ ಇದು ಅನಾರಂಭಣೀಯ" ಎಂಬ ಶಂಕೆಯು ಬಂದರೆ ಉತ್ತರರೂಪವಾಗಿ "ಹರಿಕಥಾಮೃತಸಾರ" ಎಂಬ ಹೆಸರಿನಿಂದಲೇ ವಿಷಯಮೊದಲಾದವುಗಳು ಸಿದ್ಧವಿರುವದರಿಂದ ವೇದಾಂತದಂತೆ ಇದು ಆರಂಭಣೀಯ"ವೆಂದು ಸೂಚಿತವಾಗುತ್ತದೆ. "ಹರಿಕಥಾಮೃತಸಾರ" ಎಂಬಲ್ಲಿ ನಾಲ್ಕು ಪದಗಳಿರುತ್ತವೆ. ಈ ನಾಲ್ಕುಪದಗಳಿಂದ– "ಹರಿಯೇ ಮುಖ್ಯವಾಗಿ ಹೇಳಲ್ಪಡುವದರಿಂದ ಅವನು ವಿಷಯನು; ಹರಿಗುಣಕಥನರೂಪವಾದ ಕಥೆಯೂ ಅವಾಂತರ ವಿಷಯ. ಯಾರ ಕಥೆಯ ಶ್ರವಣದಿಂದ ಜನಿಸುವ ಜ್ಞಾನದಿಂದ ಭಗವಂತನ ಪರಮಪ್ರಸಾದದಮುಖಾಂತರವಾಗಿ ಮೋಕ್ಷ ವಾಗುವದೋ ಆ ಕಥಾ–ಜ್ಞಾನ-ಪ್ರಸಾದಗಳೂ ಮೋಕ್ಷವೂ ಪ್ರಯೋಜನಗಳು. ಗತ್ಯರ್ಥದಲ್ಲಿರುವ ಸೃಧಾತುವಿನಿಂದ–ಕರ್ತರೀಪ್ಯಪ್ರತ್ಯಯದಿಂದ ಸಿದ್ಧವಾದ "ಸಾರ"ವೆಂಬಪದಕ್ಕೆ ಮೋಕ್ಷವೆಂದರ್ಥವಾಗುವದರಿಂದ ಸಾರ=ಮೋಕ್ಷ ಹೊಂದುವವನು ಅಧಿಕಾರಿಯು.

### ಸಂಬಂಧಗಳು

(೧) ಹರಿಗೂ-ಕಥೆಗೂ= ಪ್ರತಿಪಾದ್ಯ ಪ್ರತಿಪಾದಕಭಾವ.
(೨) ಕಥೆಗೂ-ಅಮೃತಕ್ಕೂ=ಪ್ರಯೋಜ್ಯಪ್ರಯೋಜಕಭಾವ,
(೩) ಅಮೃತಕ್ಕೂ-ಅಧಿಕಾರಿಗೂ=ಗಮ್ಯಗಂತೃಭಾವ.
(೪) ಸಾರಕ್ಕೂ-ಹರಿಗೂ=ದಾಸಈಶಭಾವ.
(೫) ಕಥೆಗೂ-ಅಧಿಕಾರಿಗೂ= ವಾಚ್ಯವಕ್ತೃಭಾವ.

ಎಂದು ಹೇಳಿದಂತಾಗುತ್ತದೆ.



## ತಾಮ್ರಪರ್ಣೀಯಾ

ಕಥಾಶ್ರವಣಜನ್ಯಜ್ಞಾನೇನ ಭಗವತ್ಪ್ರಸಾದೋ ಭವತಿ। ಪ್ರಸಾದೇನ ಮೋಕ್ಷೋ ಭವತೀತ್ಯುಕ್ತಂ। **ಕಥಾಶ್ರವಣಜನ್ಯಜ್ಞಾನಂ ಕೀದೃಶಂ ತೇನ ಕೀದೃಕ್‌ಪ್ರಸಾದೋಭವತಿ। ತೇನ ಕೀದೃಗ್ವಿಧಮೋಕ್ಷೋಭವತೀತಿ ಪ್ರಾಪ್ತೇ ತತ್ರೋಚ್ಯತೇ ॥**

ಕಥಾಶ್ರವಣೇನ "ಹರಿಃ ಸರ್ವೋತ್ತಮಃ" "ವಾಯುಃ ಜೀವೋತ್ತಮಃ" ಇತ್ಯಾದಿ ಜ್ಞಾನಮುತ್ಪದ್ಯತೇ ॥ ತೇನ ಏನಂ ಮೋಚಯಾಮಿ ಇತಿ ಅತ್ಯರ್ಥ ಪ್ರಸಾದೋ ಭವತಿ। ತದ್ವಾರಾ ಸ್ವರೂಪಾನಂದಾವಿರ್ಭಾವಲಕ್ಷಣ ಮೋಕ್ಷೋಭವತಿ। "ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಃ ತಥೈವಚ ॥ ಸಾಧನಂ ಜ್ಞಾನ ಸಂಪತ್ತೌ ಪ್ರಧಾನಂ ನಾನ್ಯದಿಷ್ಯತ ಇತಿ" ಭಾಷ್ಯೋಕ್ತದಿಶಾ ಸಾಧನ ಚತುಷ್ಟಯಮಧ್ಯೇ ಶ್ರವಣಸ್ಯ ಪ್ರಾಥಮ್ಯಾತ್ ॥ ಶ್ರವಣಜನ್ಯ ಜ್ಞಾನೇನ ಗುಣಪರಿಪೂರ್ಣಂ ಬ್ರಹ್ಮೋಪಾಸ್ಯತೇ। ಶ್ರವಣಾನ್ಮನನಂ। ಮನನಾತ್ ಧ್ಯಾನಂ। ಧ್ಯಾನಾದ್ಭಕ್ತಿಃ। ಭಕ್ತೇಃ ಜ್ಞಾನಂ। ಜ್ಞಾನಾದತ್ಯರ್ಥಪ್ರಸಾದಃ। ಪ್ರಸಾದಾನ್ಮೋಕ್ಷ ಇತಿ ಪರಂಪರಾಸಾಧನಸದ್ಭಾವಾತ್ ಶ್ರವಣಾದೀನಾಂ ಸಾಧನಸಂಪತ್ತೌ ಪ್ರಧಾನಸಾಧನತ್ವಾತ್‌ಜ್ಞಾನಜನಕತ್ವಾಚ್ಚ ಶ್ರವಣ ಜನ್ಯಜ್ಞಾನೇನ ಜಿಜ್ಞಾಸಾಧಿಕರಣೋಕ್ತರೀತ್ಯಾ ಅನಂತಗುಣಪರಿಪೂರ್ಣ ಬ್ರಹ್ಮ ಜಿಜ್ಞಾಸೋತ್ಥ ಜ್ಞಾನಜನ್ಯ ಪ್ರಸಾದದ್ವಾರಾ ಭಗವತ್ಸಾಕ್ಷಾತ್ಕಾರಾದೇವ ಮೋಕ್ಷೋ ಭವತೀತ್ಯರ್ಥಃ। ತದುಕ್ತಮನುವ್ಯಾಖ್ಯಾನೇ ॥ **ಜಿಜ್ಞಾಸೋತ್ಥ ಜ್ಞಾನಜಾತ್ತತ್ಪ್ರಸಾದಾದೇವ ಮುಚ್ಯತ ಇತಿ** ॥

## ಕನ್ನಡಾರ್ಥ

"ಕಥಾಶ್ರವಣಜನ್ಯಜ್ಞಾನದಿಂದ ಭಗವತ್ಪ್ರಸಾದವೂ ಅದರಿಂದ ಮೋಕ್ಷವೂ ಆಗುತ್ತದೆ" ಎಂದು ಹೇಳಲ್ಪಟ್ಟಿತು. ಆದರೆ ಕಥಾಶ್ರವಣದಿಂದ ಜನಿಸುವ ಜ್ಞಾನವು ಎಂಥದು? ಅದರಿಂದ ಯಾವವಿಧವಾದ ಮೋಕ್ಷವಾಗುತ್ತದೆ? ಎಂಬ ಸಂಶಯಗಳು ಅಂಕುರಿಸಲು (ಅವಗಳಿಗೆ ಈ ರೀತಿಯಾಗಿ ಉತ್ತರ ಹೇಳಲಾಗುತ್ತದೆ) ಕಥಾ ಶ್ರವಣದಿಂದ "ಹರಿಯು ಸರ್ವೋತ್ತಮನು; ವಾಯುವು ಜೀವೋತ್ತಮನು;" ಇಂತುಮುಂತಾದ ಜ್ಞಾನವು

ಜನಿಸುತ್ತದೆ. ಈ ಜ್ಞಾನದಿಂದ ಪ್ರೀತನಾದ ಪರಮಾತ್ಮನ "ಇವನನ್ನು ಭವ ದಿಂದ ಬಿಡಿಸುತ್ತೇನೆ" ಎಂಬ ಇಚ್ಛಾರೂಪವಾದ ಪ್ರಸಾದವು ಅಧಿಕಾರಿಗೆ ಆಗುತ್ತದೆ. ಅದರಿಂದ "ಸ್ವರೂಪಾನಂದಾನುಭವ"ವೆಂಬ ಮೋಕ್ಷವನ್ನು ಹೊಂದು ತ್ತಾನೆ." ಈ ರೀತಿಯಾಗಿ ಉತ್ತರ ತಿಳಿಯಬೇಕು.

"ಶ್ರವಣಂ ಮನನಂ ಚೈವ" ಎಂಬ ಭಾಷ್ಯವಚನದಂತೆ ನಾಲ್ಕು ಸಾಧನ ಗಳಲ್ಲಿ ಶ್ರವಣವೇ ಮೊದಲು ಉಕ್ತವಾದುದರಿಂದ- ಶ್ರವಣ-ಜನಿತಜ್ಞಾನ ದಿಂದ ಗುಣಪೂರ್ಣನಾದ ಬ್ರಹ್ಮನು (ವಿಷ್ಣುವು) ಉಪಾಸಿತನಾಗುತ್ತಾನೆ. ಆ ಶ್ರವಣದಿಂದ-ಮನನ, ಮನನದಿಂದ-ಧ್ಯಾನ,-ಧ್ಯಾನದಿಂದ ಭಕ್ತಿ, ಭಕ್ತಿ ಯಿಂದ ಅಪರೋಕ್ಷಜ್ಞಾನ, ಅಪರೋಕ್ಷಜ್ಞಾನದಿಂದ ಮಹಾಪ್ರಸಾದ, ಅದ ರಿಂದ ಮೋಕ್ಷ; ಹೀಗೆ ಕ್ರಮಿಕವಾಗಿ ಸಾಧನಗಳಿರುವವು. ಜ್ಞಾನಪ್ರಾಪ್ತಿ ಯಲ್ಲಿ ಶ್ರವಣಮುಂತಾದವುಗಳು ಮುಖ್ಯಸಾಧನವಾಗಿರುವವು; ಅದರ ಲ್ಲಿಯೂ ಶ್ರವಣದಿಂದ ಜನಿಸುವ ಜ್ಞಾನದಿಂದ "ಜಿಜ್ಞಾಸಾಧಿಕರಣ"ದಲ್ಲಿ ಹೇಳಿದಂತೆ- ಅನಂತಗುಣ ಪರಿಪೂರ್ಣ ನಾರಾಯಣನ ಜಿಜ್ಞಾಸೆ (ಶ್ರವಣ) ಯಿಂದ-ಜ್ಞಾನ-ಅದರಿಂದ ಪ್ರಸಾದ, ಅದರಿಂದ ಅಪರೋಕ್ಷಜ್ಞಾನ, ಅದರಿಂದ ಮಹಾಪ್ರಸಾದ, ಅದರಿಂದ ಮೋಕ್ಷವಾಗುತ್ತದೆ ಎಂದು ಅರ್ಥ ತಿಳಿಯಬೇಕು. ಈ ವಿಷಯವು ಅನುವ್ಯಾಖ್ಯಾನದಲ್ಲಿ "ಜಿಜ್ಞಾಸೋತ್ಥಜ್ಞಾನಜಾತ್ತತ್ಪ್ರಸಾದಾ ದೇವ ಮುಚ್ಯತೇ" ಎಂಬಲ್ಲಿ ಹೇಳಲ್ಪಟ್ಟಿರುತ್ತದೆ.

**ತಾಮ್ರಪರ್ಣೀಯಾ**

**ನನುಪ್ರಸಾದಾದೇವ ಮುಚ್ಯತೇ** ಇತ್ಯನೇನ ಮೋಕ್ಷಸ್ಯ ಭಗವತ್ಪ್ರ ಸಾದಸಾಧನತ್ವಮುಕ್ತಂ । "ತ ಮೇವಂ ವಿದ್ವಾನ್ ಅಮೃತ ಇಹಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ । ಜ್ಞಾನೇನೈವಪರಂಪದಮ್ ॥ ಇತಿ ಶ್ರುತಿ ಸ್ಮೃತಿಭ್ಯಾಂ "ಭಗವದಪರೋಕ್ಷಜ್ಞಾನೇನೈವ ಮೋಕ್ಷೋಭವತೀ ತ್ಯುಕ್ತತ್ವಾತ್ ಪ್ರಸಾದೇನೈವ ಮೋಕ್ಷ ಇತಿ ಕಥಂ ನಿಶ್ಚೀಯತೇ ಇತ್ಯತ ಆಹ । ಭಗವದಪರೋಕ್ಷಸ್ಯ ಜ್ಞಾನಸಾಧ್ಯತ್ವಂ ಸ್ವರೂಪಾನಂದೋದ್ರೇಕಮೋಕ್ಷಸ್ಯ ಭಗವತ್ಪ್ರಸಾದಸಾಧ್ಯತ್ವ ಮಿತಿ ಜ್ಞಾತವ್ಯಮ್ ॥

ಅನುವ್ಯಾಖ್ಯಾನದಲ್ಲಿರುವ "ಪ್ರಸಾದಾದೇವ ಮುಚ್ಯತೇ" ಎಂಬ ವಾಕ್ಯ ದಿಂದ ಪ್ರಸಾದವೇ ಮೋಕ್ಷಸಾಧನವೆಂದು ಹೇಳಲಾಗುತ್ತದೆ. "ತಮೇವಂ



ವಿದ್ವಾನ್ ಅಮೃತಇಹಭವತಿ= ಆ ಪರಮಾತ್ಮನನ್ನು ತಿಳಿದು ಕೊಂಡವನೇ ಮುಕ್ತನಾಗುತ್ತಾನೆ" ಎಂದು, "ಜ್ಞಾನವೇ ಮೋಕ್ಷಸಾಧನ" ಎಂದು ಶ್ರುತಿ ವಾಕ್ಯವು ಹೇಳುತ್ತದೆ. "ಜ್ಞಾನದಿಂದಲೇ ಮೋಕ್ಷವಾಗುವದು" ಎಂದು ಹೇಳುವ ಸ್ಮೃತಿಗಳೂ ಇರುತ್ತವೆ. ಆದುದರಿಂದ ಮೋಕ್ಷವು ಪ್ರಸಾದ ದಿಂದಲೋ-ಜ್ಞಾನದಿಂದಲೋ ? ಎಂದು ಸಂದೇಹವು ಬರುತ್ತದೆ. ಈ ಕಾರಣ ದಿಂದ "ಅಪರೋಕ್ಷಜ್ಞಾನದಿಂದ ಪರಮಾತ್ಮನ ಪ್ರಸಾದ, ಪ್ರಸಾದದಿಂದ ಸ್ವರೂ ಪಾನಂದಾವಿರ್ಭಾರೂಪಮೋಕ್ಷವಾಗುತ್ತದೆ." ಎಂದೇ ತಿಳಿಯಬೇಕು. ಪರಮಾತ್ಮನ ಅಪರೋಕ್ಷಜ್ಞಾನವು ಅವನ ಪ್ರಸಾದದ ಮುಖಾಂತರ (ದ್ವಾರ) ವಾಗಿಯೇ ಮೋಕ್ಷವನ್ನು ಕೊಡುತ್ತದೆ" ಎಂದು "ತಮೇವ" ಎಂಬ ವಾಕ್ಯಕ್ಕೆ ಅರ್ಥ ತಿಳಿಯಬೇಕು. ಅಂದರೆ ಅನುವ್ಯಾಖ್ಯಾನಕ್ಕೂ ಶ್ರುತಿಗೂ ತೋರುವ ವಿರೋಧವು ಅಳಿಯುವದು.

**ತಾಮ್ರಪರ್ಣೀಯಾ**

"ಕರ್ಮಣಾಜ್ಞಾನಮಾತನೋತಿ" "ಕರ್ಮಣೈವಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯ" ಇತಿ ಶ್ರುತಿಸ್ಮೃತಿಭ್ಯಾಮಪಿ ಜ್ಞಾನಮೋಕ್ಷಯೋರಪಿ ಕರ್ಮಸಾ ಧ್ಯತ್ವಸ್ಯೋಕ್ತತ್ವಾತ್ ಜ್ಞಾನಸ್ಯ ಜಿಜ್ಞಾಸೋತ್ಥತ್ವಂ ಮೋಕ್ಷಸ್ಯ ಭಗವತ್ಪ್ರಸಾದ ಸಾಧ್ಯತ್ವಂ ಕಥಂ ಸಂಘಟತ ಇತಿ ಪ್ರಾಪ್ತೇ ತತ್ರೋಚ್ಯತೇ ॥

"ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ। ಇತ್ಯತ್ರ"ಭಗವ ತ್ಪೂಜಾದಿಕಂ ಕರ್ಮೇತಿಖಂಡಾರ್ಥೋಕ್ತದಿಶಾ **ಸ್ಥೂಲದೇಹಸ್ಥ ಬಿಂಬಾತ್ಮಕ ಪ್ರಾಜ್ಞ ರೂಪೋಪಾಸನಾಲಕ್ಷಣ ಕರ್ಮಣೈ**ವ ಪ್ರಾಪ್ನೋತಿ ಜ್ಞಾನಮಧಿ ಕಾರೀ । ಸ್ವರೂಪಬಿಂಬೋಪಾಸನಾತ್ಮಕ ಕರ್ಮಣಾ ಮೋಕ್ಷಂ ಪ್ರಾಪ್ನೋತೀತ್ಯ ನೇನ ನ ಕಶ್ಚಿತ್‌ಕ್ಷುದ್ರೋಪದ್ರವಃ ॥ "ಹರಿಕಥಾಮೃತಸಾರಸ್ಯ" ಇತ್ಯಸ್ಯಕೋ ಯಮರ್ಥಃ ॥

**ಸರ್ವೇಷಾಂ ಬಿಂಬರೂಪೋಹರಿರೇವೇತಿ ಗೀತಾಭಾಷ್ಯೋಕ್ತ ದಿಶಾ** ಸರ್ವಜೀವಾಂತಸ್ಥ ಬಿಂಬಿರೂಪೀ ಹರಿರೇವ। ತದ್ಗುಣಾನ್ ಕಥಯಂತಿ ಪ್ರತಿಪಾದಯಂತೀತಿ ಕಥಾಃ ವೇದಾಃ। ತೇಷಾಂ ಮಧ್ಯೇ ಸ್ವಾದುತ್ವಾನ್ಮಧುರತ್ವಾ ಚ್ಛೋಪನಿಷತ್ಸಮುದಾಯೋ ಅಮೃತಮಿತ್ಯುಚ್ಯತೇ । ತದ್ರಹಸ್ಯಮೇವಸಾರ

ಇತ್ಯುಚ್ಯತೇ | **ಕಿಂನಾಮರಹಸ್ಯಮಿತಿ |** ಸರ್ವಪ್ರಕಾರೇಣ ಸರ್ವತ್ರ ಬಿಂಬ ಕ್ರಿಯಾನುಸಂಧಾನಮೇವ ರಹಸ್ಯಮಿತಿ ‖ ಏತದೇವಾತ್ರ ಪ್ರತಿಪಾದ್ಯತೇ ‖

**ಕನ್ನಡಾರ್ಥ**

ಇನ್ನು "ಕರ್ಮದಿಂದ ಜ್ಞಾನವಾಗುತ್ತದೆ; ಜನಕಾದಿಗಳು ಕರ್ಮದಿಂದಲೇ ಸಂಸಿದ್ಧಿ (ಮೋಕ್ಷ)ಯನ್ನು ಹೊಂದಿರುತ್ತಾರೆ" ಎಂದು ಶ್ರುತಿಸ್ಮೃತಿಗಳಲ್ಲಿ ಕರ್ಮಗಳಿಂದಲೇ ಜ್ಞಾನ ಮತ್ತು ಮೋಕ್ಷಗಳೆರಡೂ ಆಗುತ್ತವೆಯೆಂದು ಹೇಳಲ್ಪಟ್ಟಿರುವದರಿಂದ ಜಿಜ್ಞಾಸೆಯಿಂದಲೇ ಜ್ಞಾನ-ಜ್ಞಾನದಿಂದಲೇ ಪ್ರಸಾದ, ಪ್ರಸಾದದಿಂದಲೇ ಮೋಕ್ಷ" ಎಂಬ ಅನುವ್ಯಾಖ್ಯಾನವು ಹೇಗೆ ಯುಕ್ತವಾಗುತ್ತದೆ ? ಎಂದು ಸಂಶಯವು ಬರುತ್ತದೆ. ಅದಕ್ಕೆ "ಕರ್ಮನ್ಯೇವೇಹಿ" ಎಂಬ ಈಶಾವಾಸ್ಯ ಖಂಡಾರ್ಥದಲ್ಲಿ "ಕರ್ಮವು ಭಗವತ್ಪೂಜಾರೂಪವಾದುದು" ಎಂದು ಹೇಳಲಾಗಿದೆ. ಅದೇ ರೀತಿಯಾಗಿ ‡ ಸ್ಥೂಲ ದೇಹಸ್ಥ ಬಿಂಬಾತ್ಮಕ ಪ್ರಾಜ್ಞರೂಪನ ಉಪಾಸನಾರೂಪವಾದ ಕರ್ಮದಿಂದ ಅಧಿಕಾರಿಯು ಜ್ಞಾನವನ್ನು ಹೊಂದುತ್ತಾನೆ. ಸ್ವರೂಪಬಿಂಬೋಪಾಸನೆಯೆಂಬ ಕರ್ಮದಿಂದ ಮೋಕ್ಷವನ್ನು ಹೊಂದುತ್ತಾನೆ. ಎಂದು ಹೇಳಿದರೆ ಎರಡೂ ವಾಕ್ಯಗಳಿಗೆ ವಿರೋಧವು ಪರಿಹೃತವಾಗುತ್ತದೆ. ಎಂದರೆ ಹಿಂದೆ ಹೇಳಿದ ಕರ್ಮದಿಂದ ಜ್ಞಾನಾಧಿಕಾರವನ್ನೂ ಜ್ಞಾನದಿಂದಲೇ ಮೋಕ್ಷವನ್ನೂ ಹೊಂದಿ,ಅದರಲ್ಲಿ ಆನಂದೋದ್ರೇಕವೆಂಬ ಅತಿಶಯವನ್ನು ಜನಕಾದಿಗಳು ಕರ್ಮದಿಂದ ಹೊಂದುವರು." ಎಂದು ಶ್ರುತಿಸ್ಮೃತಿಗಳಿಗೆ ಅರ್ಥಮಾಡಿದರೆ ಯಾವ ವಿರೋಧವೂ ಬಾರದೇ ನಮ್ಮ ಸಂಶಯಗಳು ದೂರವಾಗುತ್ತವೆ.

ಹರಿಕಥಾಮೃತಸಾರವೆಂದರೇನು ? ಎಲ್ಲರಿಗೂ ಬಿಂಬರೂಪಿಯಾದವನು ಶ್ರೀಹರಿಯೇ " ಎಂದು ಗೀತಾಭಾಷ್ಯದಲ್ಲಿ ಹೇಳಲಾಗಿದೆ. ಅದರಂತೆ ಸರ್ವಜೀವಾಂತಸ್ಥನಾದ ಬಿಂಬರೂಪೀ ಹರಿಯನ್ನೂ ಅವನ ಗುಣಗಳನ್ನೂ ಕಥನ ಮಾಡುವದರಿಂದ ಹರಿಕಥೆಗಳು ವೇದಗಳು; ಅವುಗಳಲ್ಲಿ ಸರಸಗಳೂ ಮಧುರಗಳೂ ಆದ ಉಪನಿಷತ್ತುಗಳು ಅಮೃತವೆನಿಸುವವು, ಅವುಗಳ ರಹಸ್ಯವೇ

---

‡ ಈ ವಿಷಯದಲ್ಲಿ ಈಶಾವಾಸ್ಯ ಭಾಷ್ಯಟೀಕಾ ಖಂಡಾರ್ಥ ಗೀತಾ ವಿವೃತಿಭಾಷ್ಯ ಅನುವ್ಯಾಖ್ಯಾನ ಸುಧಾ ಪರಿಮಳಗಳ ಸಮಾಖ್ಯ ಹೇಳಿ ಸಮಾಲೋಚಿಸತಕ್ಕದ್ದು.



ಎಲ್ಲ ರೀತಿಯಿಂದ ಎಲ್ಲ ಕಡೆಯಲ್ಲಿಯೂ ಬಿಂಬಕ್ರಿಯಾನುಸಂಧಾನವು. ಇದೇ ಇದರಲ್ಲಿ ಹೇಳಲ್ಪಡುವ ವಿಷಯ.

**ತಾಮ್ರಪರ್ಣೀಯಾ**

**ಗುರುಗಳ ಕರುಣೆದಿಂದೇತಿ** ‖ ಗುರವೋ ಬಹವಸ್ಸಂತಿ ಶಿಷ್ಯವಿತ್ತಾಪಹಾರಕಾ:ಇತ್ಯುಕ್ತದಿಶಾ ಶಿಷ್ಯವಿತ್ತಾಪಹಾರಕತ್ವಲಕ್ಷಣಮಂತರಾ ಅ ಸಂಶಯಃ ಸಂಶಯಚ್ಛೇತ್ತಾ ಗುರುರುಕ್ತೋಮನೀಷಿಭಿಃ ಇತ್ಯುಕ್ತದಿಶಾ ಸರ್ವತತ್ವೇಷ್ವಸಂಶಯಾಲುಃ ಶಿಷ್ಯಸಂಶಯಚ್ಛೇತೃತ್ವಾದಿಗುಣಃ ಶತಯೋಜನ ಪರ್ಯಂತಾಪರೋಕ್ಷವಿಶಿಷ್ಟಗಣೇಶಾಂಶಸಂಭೂತಗೋಪಾಲದಾಸಾರ್ಯಃ ಗು ರು ಃ |ತತ್ಕರುಣಯಾ| ಆಪನಿತು ಯಥಾಮತಿ | ಸ್ವಯೋಗ್ಯತಾನುಸಾರೇಣ ಬಿಂಬಕ್ರಿಯಾನುಸಂಧಾನ ಲಕ್ಷಣಂ ವಚ್ಮೀತ್ಯರ್ಥಃ | ಇದನು=ತದನುಸಂಧಾನಮೇವ ‖

**ಕನ್ನಡಾರ್ಥ**

**ಗುರುಗಳ ಕರುಣದಿಂದ**- "ಶಿಷ್ಯರ ವಿತ್ತಗಳನ್ನು ಅಪಹರಿಸುವ ಗುರುಗಳು ಅನೇಕರಿರಬಹುದು; ಇಲ್ಲಿ ಹೇಳಿರುವ ಗುರುಗಳು ಅಂಥವರಲ್ಲ. ಸ್ವಯಂ ಸಂಶಯರಹಿತರೂ, ಪರರ ಸಂಶಯಗಳನ್ನು ನಿವಾರಿಸುವವರೂ ಗುರುಗಳೆನಿಸಿ ಕೊಳ್ಳುತ್ತಾರೆ." ಎಂಬ ವಚನದಂತೆ ಸರ್ವತತ್ವಗಳ ಬಗ್ಗೆ ನಿಶ್ಚಿತಮತಿಗಳೂ, ಶಿಷ್ಯಸಂಶಯಗಳನ್ನು· ಛೇದಿಸುವವರೂ, ಶತಯೋಜನಪರ್ಯಂತವಾಗಿ ಅಪರೋಕ್ಷ ವಿಶಿಷ್ಟರಾದ ಗಣೇಶನ ಅಂಶದಿಂದ ಸಂಭೂತರಾದ ಶ್ರೀ ಗೋಪಾಲ ದಾಸರು ಗುರುಗಳು. ಅವರ ಕರುಣದಿಂದ " ಎಂದರ್ಥ.

**ತಾಮ್ರಪರ್ಣೀಯಾ**

**ಪರಮಭಗವದ್ಭಕ್ತಾ ಇತಿ**‖ ಪರಾ ದೇಶತಃ ಕಾಲತಃ ಅಪ್ರತಿಹತಾ ಮಾಜ್ಞಾನಂ ಯಸ್ಯಸಃ | ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ | ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾದಿತ್ಯುಕ್ತದಿಶಾ ಸಮಗ್ರೈಶ್ವರ್ಯಸಮಗ್ರವೀರ್ಯಸಮಗ್ರಯಶಃಸಮಗ್ರಜ್ಞಾನಸಮಗ್ರವಿಜ್ಞಾನಾನಾಂ ಭಗಶಬ್ದವಾಚ್ಯತ್ವಾತ್ ಸಮಗ್ರೈಶ್ವರ್ಯಾದಿಷಡ್ಗುಣಾಃಅಸ್ಮಿನ್ ಸಂತೀತಿ ಭಗವಾನ್| ಪರಮಶ್ಚಾಸೌ ಭ ಗ ವಾ ಂ ಶ್ಚ ಪರಮಭಗವಾನ್ | ಪರಮಭಗವತಃ ಭಕ್ತಾಃ ಪ ರಮ ಭ ಗ ವ ದ್ಭ ಕ್ತಾಃ | ತೇಷಾಂ ಮಂದಮಧ್ಯೋತ್ತಮತ್ವೇನ

ತ್ರೈವಿಧ್ಯಾತ್ ಹರಿಕಥಾಮೃತಸಾರಶ್ರವಣೇ ಕೇ ಅಧಿಕಾರಿಣ ಇತ್ಯಾಕಾಂಕ್ಷಯಾಂ ತ್ರಿವಿಧಾನಾಮಪಿ ಹರಿಕಥಾಮೃತಸಾರಶ್ರವಣಾಧಿಕಾರೋಽಸ್ತೀತ್ಯಾಹ ಮಂದಮಧ್ಯೋತ್ತಮತ್ವೇನ ತ್ರಿವಿಧಾಹ್ಯಧಿಕಾರಿಣ ಇತಿ । ತತ್ರಕೋ ಮಂದಃ ಕೋಮಧ್ಯಮಃ ಕಶ್ಚೋತ್ತಮಃ ಇತ್ಯಪೇಕ್ಷಾಯಾಮಾಹ ॥ "ತತ್ರಮಂದಾಮನುಷ್ಯೇಷು ಯ ಉತ್ತಮಗಣಾಮತಾ ಇತಿ" ಭಾಷ್ಯೋಕ್ತೇಃ । ಮನುಷ್ಯೋತ್ತಮಾನಾಂ ಮೋಕ್ಷಾಧಿಕಾರಿತ್ವಾತ್ ತತ್ರಾಪಿತ್ರೈವಿಧ್ಯಂಗ್ರಾಹ್ಯಮ್ ಸತ್ವರಜಸ್ತಮೋಗುಣಭೇದೇನ ಮಂದಮಧ್ಯೋತ್ತಮಾಧಿಕಾರಿಣ ಇತ್ಯುಚ್ಯಂತೇ ತದುಕ್ತಂ ಪ್ರಮಾಣಸಂಗ್ರಹೇ । "ಮನುಷ್ಯೋತ್ತಮಸಂದೋಹೇ ತ್ರೈವಿಧ್ಯಂ ಗುಣತೋಪಿಹಿ।"ತತ್ರೋತ್ತಮಾಃ ಸಾತ್ವಿಕಾಸ್ತು ಮಧ್ಯಮಾ ರಾಜಸಾಃಸ್ಮೃತಾಃ ಅಧಮಾಸ್ತಾಮಸಾ ಜೀವಾ ನಾಧಿಕಾರೋತ್ರ ವಿದ್ಯತ ಇತಿ"। ಅಪ್ರಚುರ ವಿಷ್ಣುಭಕ್ತಿತ್ವೇಸತಿ ಪ್ರಚುರಾಧ್ಯನವಾನಧಮಾಧಿಕಾರೀ । ಅಪ್ರಚುರ ವಿಷ್ಣುಭಕ್ತಿತ್ವೇ ಸತಿ ಪ್ರಚುರಶಮದಮಾದಿಮಾನ್ ಮಧ್ಯಮಾಧಿಕಾರೀ। ಬ್ರಹ್ಮಾದಿತೃಣಾಂತಂ ಜಗದಸಾರಮನಿತ್ಯಮಿತಿಜ್ಞಾತ್ವಾ ತತ್ರಜಾತವೈರಾಗ್ಯೋ ವಿಷ್ಣುಪಾದೈಕ ಸಂಶ್ರಯಃ ಸನ್ಯಾಸ್ತಾಖಿಳಕರ್ಮವಾನ್ ಸ ಏವೋತ್ತಮಾಧಿಕಾರೀ । ತದುಕ್ತಂ ಭಾಷ್ಯೇ । "ಆಬ್ರಹ್ಮಸ್ತಂಬ ಪರ್ಯಂತಮಸಾರಂ ಚಾಪ್ಯನಿತ್ಯಕಂ ವಿಜ್ಞಾಯ ಜಾತವೈರಾಗ್ಯೋ ವಿಷ್ಣುಪಾದೈಕಸಂಶ್ರಯಃ । ಸ ಉತ್ತಮೋಧಿಕಾರೀಸ್ಯಾತ್ ಸನ್ಯಸ್ತಾಖಿಳಕರ್ಮವಾನಿತಿ ॥ ಪರೋಕ್ಷಮಪರೋಕ್ಷಮಿತಿ ದ್ವಿವಿಧಂ ಜ್ಞಾನಂ॥ ಗ್ರಂಥಾಭ್ಯಾಸಜನ್ಯಜ್ಞಾನಂ ಪರೋಕ್ಷಜ್ಞಾನಮ್ । ಭಗವತ್ ಸಾಕ್ಷಾತ್ಕಾರ ಜ್ಞಾನಮಪರೋಕ್ಷಜ್ಞಾನಮ್ । ವೃತ್ತಿಜ್ಞಾನೇನ ಕ್ರಿಯಮಾಣಕರ್ಮಾಚರಣಸ್ಯ ಜೀವಕರ್ತೃತ್ವಮಂಗೀಕೃತ್ಯ ಪುಣ್ಯಾಪುಣ್ಯಫಲಭೋಕ್ತಾ ಜೀವ ಏವ ನ ಭಗವಾನಿತಿ ನಿತ್ಯಸಂಸಾರಿಣೋ ಭಣಂತಿ । ನ ತೇಷಾಂ ಭಗವದ್ಭಕ್ತಕೋಟಿಪ್ರವಿಷ್ಟತಾ । ನತೇಷಾಮತ್ರಾಧಿಕಾರಃ । ಬಿಂಬಕ್ರಿಯಾನುಸಂಧಾತೃಜ್ಞಾನಿನಾಮೇವಾತ್ರಾಧಿಕಾರಃ ॥

## ಕನ್ನಡಾರ್ಥ

**ಪರಮ ಭಗವದ್ಭಕ್ತಾಃ— ಪರಾ** = ದೇಶಕಾಲಗುಣಗಳಿಂದ ಪರಿಮಿತಿರಹಿತವಾದ **ಮಾ**=ಜ್ಞಾನವು ಯಾರಿಗೋ ಅವನು ಪರಮನು. ಐಶ್ವ



ರ್ಯಸ್ಯ ಸಮಗ್ರಸ್ಯ" ಎಂಬ ಪ್ರಮಾಣಾನುಸಾರವಾಗಿ ಪೂರ್ಣಐಶ್ವರ್ಯ ಮುಂತಾದ ಷಡ್ಗುಣಗಳು (ಭಗ) ವುಳ್ಳವನು ಭಗವಂತನು; ಅವನ ಭಕ್ತರು ಭಗವದ್ಭಕ್ತಕ್ತರು. ಪರಮರಾದ ಭಗವದ್ಭಕ್ತರು=ಪರಮಭಗವದ್ಭಕ್ತರು; ಎಂದೂ ವಿಗ್ರಹವನ್ನು ತಿಳಿಯಬೇಕು.

ಈ ಭಗವದ್ಭಕ್ತರು ಮೂರು ವಿಧರಾದುದರಿಂದ ಇವರಲ್ಲಿ ಯಾವನು ಅಧಿಕಾರಿಯು? ಎಂದು ಸಂಶಯ ಬಂದರೆ ಮೂರೂತರಹದವರಿಗೂ ಅಧಿಕಾರವೆಂದು ತಿಳಿಯಬೇಕು. ಮಂದ, ಮಧ್ಯಮ, ಉತ್ತಮವೆಂಬುದಾಗಿ ಅಧಿಕಾರಿಗಳಲ್ಲಿ ಮೂರು ತರಹ, ಅವರಲ್ಲಿ ಮನುಷ್ಯೋತ್ತಮರು ಮಂದರು, ಋಷಿ ಗಂಧರ್ವರು ಮಧ್ಯಮರು; ದೇವತೆಗಳು ಉತ್ತಮರು. ಹೀಗೆ ಭಾಷ್ಯದಲ್ಲಿ ಹೇಳಲ್ಪಟ್ಟಿದೆ. ಮನುಷ್ಯೋತ್ತಮರೂ ಮೋಕ್ಷಾಧಿಕಾರಿಗಳು. ಇವರಲ್ಲಿ ಮೂರ್ಪ ತರಹದವರಿರುತ್ತಾರೆಂದು ತಿಳಿಯಬೇಕು. ಸತ್ವರಜೋಸ್ತಮೋಗುಣಗಳಿಗನುಸಾರವಾಗಿ ಮಂದ, ಮಧ್ಯ, ಉತ್ತಮರೆಂಬ ಪ್ರಕಾರವನ್ನು ತಿಳಿಯಬೇಕು. ಪ್ರಮಾಣ ಸಂಗ್ರಹದಲ್ಲಿ- ಮನುಷ್ಯೋತ್ತಮ ವರ್ಗದಲ್ಲಿಯೂ ಗುಣನಿಮಿತ್ತವಾಗಿ ಮೂರು ವಿಧಗಳುಂಟು- ಅದರಲ್ಲಿ ಸಾತ್ವಿಕರು, ಉತ್ತಮರು; ರಾಜಸರು, ಮಧ್ಯಮರು; ತಾಮಸರು ಅಧಮರು ಎಂದೂ, ತಾಮಸರಿಗೆ ಅಧಿಕಾರವಿಲ್ಲವೆಂದೂ ಹೇಳಲ್ಪಟ್ಟಿರುತ್ತದೆ. ಇದು ಜಾತಿಕೃತಾಧಿಕಾರ.

### ಗುಣಕೃತಾಧಿಕಾರ

ತನ್ನಲ್ಲಿರುವ ಹರಿಭಕ್ತಿ ಮತ್ತು ಅಧಯನಮುಂತಾದವುಗಳಲ್ಲಿ ಕಡಿಮೆ ಹರಿಭಕ್ತಿಯಿದ್ದು ಹೆಚ್ಚಾದ ಅಧ್ಯಯನವುಳ್ಳವನು ಅಧಮಾಧಿಕಾರಿಯು;ಹರಿಭಕ್ತಿ ಅಧ್ಯಯನಗಳು ಕಡಿಮೆಯಾಗಿದ್ದು ಹೆಚ್ಚಾದ ಶಮಾದಿ ಗುಣವುಳ್ಳವನು ಮಧ್ಯಮನು. ಬ್ರಹ್ಮದೇವನಿಂದ ತೃಣದವರೆಗೂ ಸಮಸ್ತವೂ ಅಸಾರವೆಂದೂ ಆಯಾಪದವಿಗಳು ಅನಿತ್ಯಗಳೆಂದೂ ತಿಳಿದು, ಸರ್ವತ್ರ ಅತಿವೈರಾಗ್ಯವುಳ್ಳವನೂ ವಿಷ್ಣುಪಾದೈಕಸಂಶ್ರಿತನೂ ಆದವನು ಉತ್ತಮಾಧಿಕಾರಿಯು. "ಆಬ್ರಹ್ಮಸ್ತಂಬಪರ್ಯತಂ" ಎಂದು ಭಾಷ್ಯದಲ್ಲಿ ಉಕ್ತವಾಗಿರುತ್ತದೆ.

ಜ್ಞಾನದಲ್ಲಿ "ಪರೋಕ್ಷ" ಹಾಗೂ "ಅಪರೋಕ್ಷ"ವೆಂದು ಎರಡು ವಿಧಗಳುಂಟು. ಗ್ರಂಥಾಭ್ಯಾಸದಿಂದ ಬರುವ ಜ್ಞಾನವು ಪರೋಕ್ಷಜ್ಞಾನ; ಭಗ

ವಂತನ ಸಾಕ್ಷಾತ್ಕಾರರೂಪವಾದ ಜ್ಞಾನವು ಅಪರೋಕ್ಷಜ್ಞಾನವು. ಮನೋವೃತ್ತಿ ಜ್ಞಾನದಿಂದ ಅನುಷ್ಠಿಸಲ್ಪಡುವ ಕರ್ಮಾಚರಣೆಯಲ್ಲಿ ಜೀವನು ಕರ್ತವು (ಸ್ವತಂತ್ರನು) ಎಂದು ಒಪ್ಪಿಕೊಂಡು "ಪುಣ್ಯಪಾಪಗಳನ್ನು ಜೀವನೊಬ್ಬನೇ ಭುಂಜಿಸುವವನು; ಪರಮಾತ್ಮನಲ್ಲ;" ಎಂದು ಹೇಳುವವರು ನಿತ್ಯಸಂಸಾರಿಗಳು; ಅವರಿಗೆ ಭಗವದ್ಭಕ್ತವರ್ಗದಲ್ಲಿ ಪ್ರವೇಶವೇ ಇರುವದಿಲ್ಲ. ಮತ್ತು ಅವರಿಗೆ ಈ ಗ್ರಂಥದಲ್ಲಿ ಅಧಿಕಾರವೂ ಇರುವದಿಲ್ಲ.

### ತಾಮ್ರಪರ್ಣೀಯಾ

"**ಇದನು ಇತ್ಯತ್ರ**-ಹರಿಕಥಾಮೃತಸಾರ ಮಿತ್ಯರ್ಥ।-"**ಆದರದಿ**"ಇತ್ಯತ್ರ ಏತತದ್ಧರಿಕಥಾಮೃತಸಾರ ಶ್ರವಣ ಮನನ ತದುಕ್ತ ಬಿಂಬಕ್ರಿಯಾನು ಸಂಧಾನ ಜ್ಞಾನೇನ ಮೋಕ್ಷೋ ಭವತೀತಿದೃಢಭಕ್ತಿರೇವ **ಆದರ** ಶಬ್ದಾರ್ಥಃ । ಪರಮಾದರೇಣ ನಿರಂತರಮೇವ ಭಗವದ್ಭಕ್ತೈಃ ಹರಿಕಥಾಮೃತಸಾರಶ್ರವಣಮವಶ್ಯಂ ಕರ್ತವ್ಯಮಿತಿ ಸಂತೋಷ್ಟವ್ಯಮ್ । ಇತಿ ಪಲ್ಲಾಭಿಪ್ರಾಯೇ: ದ್ವಿತೀಯಾರ್ಥಃ ॥ ಶ್ರೀಗುರುರಾಜಾರ್ಪಣಮಸ್ತು ॥

### ಕನ್ನಡಾರ್ಥ

**ಇದನು** ಹರಿಕಥಾಮೃತಸಾರವನ್ನು, **ಆದರದಿ**- ಇಲ್ಲಿರುವ ಆದರವೆಂದರೆ "ಈ ಹರಿಕಥಾಮತಸಾರ ಶ್ರವಣ ಮನನ ಹಾಗೂ ಇದರಲ್ಲಿ ಹೇಳಿದ ಬಿಂಬ ಕ್ರಿಯಾನುಸಂಧಾನಜ್ಞಾನ ಇವುಗಳಿಂದ ಹಿಂದೆ ಹೇಳಿದ ರೀತಿಯಲ್ಲಿ ಮೋಕ್ಷವಾಗುತ್ತದೆ" ಎಂದು ದೃಢಭಕ್ತಿಯೇ ನಿರಂತರವಾಗಿ ಶ್ರೀಹರಿಕಥಾಮೃತಸಾರವನ್ನು ಅವಶ್ಯವಾಗಿ ಭಗವದ್ಭಭಕ್ತರು ಶ್ರವಣ ಮಾಡಬೇಕು" ಎಂಬ ಭಾವದಿಂದ ಸುಜನರು ಸಂತೋಷಹೊಂದಬೇಕು.

ಇನಿತು ಪಲ್ಲವಿಯ ಎರಡನೆಯ ಭಾವಾರ್ಥವು ಮುಗಿದುದು. ಶ್ರೀಗುರುರಾಜರಿಗೆ ಸಮರ್ಪಿತವಾಗಲಿ ।

---



### ಮಂಗಳಾಚರಣ ಸಂಧಿ ಪದ್ಯ (೧)

## ಭಾಮಿನೀ ಷಟ್ಪದಿ

**ಶ್ರೀ ರಮಣಿಕರಕಮಲ ಪೂಜಿತ ।**
**ಚಾರುಚರಣ ಸರೋಜ ಬ್ರಹ್ಮ ಸ।**
**ಮೀರವಾಣಿ ಫಣೀಂದ್ರ ವೀಂದ್ರ ಭವೇಂದ್ರ ಮುಖವಿನುತ**
**ನೀರಜಭವಾಂಡೋದಯ ಸ್ಥಿತಿ ।**
**ಕಾರಣನೆ ಕೈವಲ್ಯದಾಯಕ ।**
**ನಾರಸಿಂಹನೆ ನಮಿಪೆ ಕರುಣಿಪುದೆಮಗೆ ಮಂಗಳವಾ ॥೧॥**

### ತಾಮ್ರಪರ್ಣೀಯಾ

**ತಾಮ್ರಪರ್ಣೀಟೀಕಾ—** ಶ್ರೀಗುರುರಾಜಾಯಮಂಗಳಂ ॥ ಅಥಕವಿಕುಲತಿಲಕಶ್ರೀಮದ್ಗುರುವರಜಗನ್ನಾಥದಾಸಾರ್ಯವರ್ಯಃ ಸಕಲ ಶ್ರುತಿಸ್ಮೃತೀತಿಹಾಸಪುರಾಣರಹಸ್ಯಾರ್ಥಂ ಪ್ರಕಟಯಿತುಕಾಮೋ ವಿರಚಿತಾನೇಕಪ್ರಬಂಧಃ ತದನಧಿಕಾರಿಜನಾಪವರ್ಗಾಯ (ಪ್ರಕಟಿತ) ವೇದಾಂತಾರ್ಥ ಪ್ರಕಾಶಿಕಾಂದ್ವಾತ್ರಿಂಶತ್ ಸಂಧಿಸಮುಪೇತಾಂ ಭಾಮಿನೀ ಷಟ್ಪದೋಪೇತಾಂ ಹರಿಕಥಾಮೃತಸಾರಾಖ್ಯಾಖ್ಯಾಯಿ ಕಾಂ ಚಿಕೀರ್ಷುಃ ಸ್ವಯಮಂತರಾಯವಿಧುರೋಪಿ ಪ್ರಾರಪ್ಸಿತಪರಿಸಮಾಪ್ತ್ಯಾದ್ಯರ್ಥಪ್ರಯೋಜನಾಯ ಚ ಸ್ವೇಷ್ಟದೇವತಾಂ ನೃಸಿಂಹಾಖ್ಯಾಮನುಸ್ಮರತಿ ॥

**ತ್ವಂಕರುಣಿಪುದು ಇತ್ಯೇಕಾನ್ವಯಃ ।** ಸಮಸ್ತಾನ್ವಯಃ । ತತ್ರ ಪ್ರಥಮತೋ ಹೇನಾರಸಿಂಹ ತ್ವಾಂ ನಮಾಮೀತ್ಯನ್ವಯಃ ।ನನು ಹರೇರವತಾರಾಣಾಮಾನಂತ್ಯಾತ್ ತನ್ಮಧ್ಯೇ ನಾರಸಿಂಹಾವತಾರಸ್ಯೈಕತ್ವಾತ್ ತದ್ವಂದನಂ ಕಿಮರ್ಥಮಿತ್ಯತ ಆಹ । ಗ್ರಂಥಾರಂಭೇ ದ್ವಿವಿಧಾಹಿ ದೇವತಾ ನಮನಾದಿಮಂಗಳಕ್ರಿಯಾರ್ಹಾ । ಆಧಿಕಾರಿಕೀ ಅಭೀಷ್ಟಾಚೇತಿ । ಯಥಾಜ್ಯೋತಿಃಶಾಸ್ತ್ರೇ ಸೂರ್ಯಾದಿಗ್ರಹಲಕ್ಷಣಾ ದೇವತಾಅಧಿಕಾರಿಕೀ। ಪರಮಪ್ರೇಮವಿಷಯಾಹ್ಯಭಿಷ್ಟೇತಿ ಭಾಗವತೋಕ್ತದಿಶಾಽಸ್ಮಿನ್ ಶಾಸ್ತ್ರೇ ಪ್ರತಿಪಾದ್ಯತೇ । ನಾರಸಿಂಹಸ್ತ್ವನಿಷ್ಟಪರಿಹಾರರೂಪತ್ವಾದಾಧಿಕಾರಿಕೀ ಇಷ್ಟಫಲದಾತೃತ್ವಾದಭೀಷ್ಟೇ

ತ್ಯುಭಯರೂಪತ್ವಾತ್ ಸಕಲಪ್ರಾಣಿಸಮೂಹಸ್ವರೂಪಸ್ಥಪಂಚರೂಪಾತ್ಮಕ ಬಿಂಬರೂಪತ್ವಾತ್ ತಸ್ಯ ಖಡ್ಗಪ್ರಹಾರೇಣಸರ್ವೇಷಾಂ ಲಿಂಗವಿದಾರಕತ್ವಾಚ್ಚ ದುರಿತಧ್ವಾಂತದಿವಾಕರತ್ವಾಚ್ಚಾಯಮೇವ ನೃಸಿಂಹೋಽಸ್ಮಿನ್ ಶಾಸ್ತ್ರೇ ಪ್ರತಿಪಾದ್ಯತೇ । **ತುದುಕ್ತಂ ತತ್ವಸಂಗ್ರಹೇ** ॥ "ಸರ್ವಜೀವಸ್ವರೂಪೇಚ ನಾರಸಿಂಹೋಂತರಾತ್ಮವಾನ್ । ಮಧ್ಯಂ ನಾರಾಯಣಃ ಪ್ರೋಕ್ತೋವಾಸು ದೇವಸ್ತುಪುಚ್ಛಗಃ । ವಾಮೇ ಸಂಕರಷಣಃಪ್ರೋಕ್ತೋ ಪ್ರದ್ಯುಮ್ನೋ ದಕ್ಷಿಣೇ ತಥಾ । ಅನಿರುದ್ಧಃ ಶಿರಶ್ಚೈವ ತಥೈಕೋಪಿ ಹಿ ಪಂಚಧಾ । ಯತಃ ಪಂಚಾತ್ಮಕೋದೇವೋ ಹ್ಯತಃ ಸರ್ವತ್ರ ವರ್ತತೇ । ವಿರಜಾಸ್ನಾನತೋಲಿಂಗಂ ಸಿಕ್ತಂ ದ್ವಿಗುಣೋಚ್ಛ್ರಿತಂ।ತಂ ದೃಷ್ಟ್ವಾ ದೇವದೇವೇಶೋ ಲಿಂಗಂ ಸತ್ವಗುಣಾನ್ವಿತಂ॥ ವಿದಾರಯತಿಸರ್ವೇಶಃಸ್ವಖಡ್ಗೇನಾಂತರಾತ್ಮವಾನ್ । ನೃ ಸಿಂ ಹ ರೂ ಪೀ ಭಗವಾನ್ ಲಿಂಗಭಂಗಂ ಕರೋತಿ ಹೀತಿ ॥ ನರಸಿಂಹಮಸಹ್ಯೋರುಪ್ರತ್ಯೂಹತಿಮಿರಾಪಹಮ್ । ನರಸಿಂಹೋಽಖಿಳಾಜ್ಞಾನಮತಧ್ವಾಂತದಿವಾಕರಇತಿ **ಮಾಯಾವಾದಿಖಂಡನ**ಜಯತೀರ್ಥೀಯೇ ॥ ತದೇತತ್ಪ್ರೇಯಃ ಪುತ್ರಾತ್ಪ್ರೇಯೋ ವಿತ್ತಾತ್ಪ್ರೇಯೋಽನ್ಯಸ್ಮಾತ್ಸರ್ವಸ್ಮಾದಂತರಃ ಯದಯಮಾತ್ಮಾ ಇತಿಶ್ರುತೇಃ ॥

## ಕನ್ನಡಾರ್ಥ

ಶ್ರೀಗುರುರಾಜರಿಗೆ ಮಂಗಳವಾಗಲಿ।ಗ್ರಂಥ ಪ್ರಾರಂಭದಲ್ಲಿ ಕವಿಕುಲತಿಲಕರಾದ, ಶ್ರೀಮದ್ಗುರುವರ ಜಗನ್ನಾಥದಾಸವರ್ಯರು ಸಮಸ್ತ ವೇದ ಸ್ಮೃತಿ, ಇತಿಹಾಸ, ಪುರಾಣಗಳ ರಹಸ್ಯಾರ್ಥಗಳನ್ನು ಪ್ರಕಟಿಸಲು ಇಚ್ಛಿಸುವವರಾಗಿ ಪೂರ್ವಿಕರಿಂದ ಅನೇಕ ಪ್ರಂಬಂಧಗಳು ರಚಿತವಾಗಿದ್ದರೂ ಅದರಲ್ಲಿ ಅನಧಿಕಾರಿಗಳಾದ ಜನರಿಗೆ ಅಪವರ್ಗ( ಮೋಕ್ಷ )ವಾಗುವದಕ್ಕೋಸ್ಕರ- ವೇದಾಂತಾರ್ಥಗಳನ್ನು ಪ್ರಕಾಶಪಡಿಸುವ, ಮೂವತ್ತೆರಡು ಲಕ್ಷಣಗಳಿಂದ ಕೂಡಿರುವ ಹರಿಕಥಾಮೃತಸಾರವೆಂಬ ಪ್ರಬಂಧವನ್ನು ವಿರಚಿಸುವ ಅಪೇಕ್ಷೆಯಿಂದ ಸ್ವತಃ ನಿರ್ವಿಘ್ನ ಪುರುಷರಾಗಿದ್ದರೂ ಪ್ರಾರಂಭಿಸಲು ಅಪೇಕ್ಷಿತವಾದ ಗ್ರಂಥದ ಪರಿಸಮಾಪ್ತಿಮುಂತಾದ ಪ್ರಯೋಜನೆಗಾಗಿ ತನಗೆ ಇಷ್ಟ ದೇವತೆಯಾದ ಶ್ರೀ ನೃಸಿಂಹನನ್ನು ಸ್ಮರಿಸುತ್ತಾರೆ "ಶ್ರೀರಮಣಿ"ಎಂಬ ಪದ್ಯದಿಂದ.



"ನೀನು ಕರುಣಿಸುವುದು" ಎಂದು ಒಂದು ಅನ್ವಯವು, ಸಮಸ್ತಾನ್ವಯವು. ಮೊದಲು " ನಾರಸಿಂಹನೇ ನಿನ್ನನ್ನು ನಮಿಸುವೆನು " ಎಂದು ಅನ್ವಯವು.

ಹರಿಯ ಅನಂತ ಅವತಾರಗಳಲ್ಲಿ ನರಸಿಂಹಾವತಾರವೂ ಒಂದು; ಆದುದರಿಂದ ಗ್ರಂಥಾರಂಭದಲ್ಲಿ ಅವನನ್ನು ವಂದಿಸುವದು ಯಾವಕಾರಣದಿಂದ? ಎಂದು ಶಂಕೆಯು ಬರುತ್ತದೆ. ಅದಕ್ಕೆ ಉತ್ತರ–ಗ್ರಂಥಾರಂಭದಲ್ಲಿ "ಆಧಿಕಾರಿಕೀ ಮತ್ತು ಅಭೀಷ್ಟಾ" ಎಂಬ ಎರಡು ವಿಧವಾದ ದೇವತೆಯನ್ನು ವಂದಿಸುತ್ತಾರೆ. ಹೇಗಂದರೆ ಜ್ಯೋತಿಃಶಾಸ್ತ್ರದಲ್ಲಿ ಸೂರ್ಯಾದಿ ಗ್ರಹರೂಪವಾದ ದೇವತೆಯು ಆಧಿಕಾರಕೀ(ಗ್ರಂಥದಲ್ಲಿ ಆಧಿಕೃತವಾಗಿ ಹೇಳಲ್ಪಡುವ) ದೇವತೆಯೆನಿಸಿಕೊಳ್ಳುತ್ತದೆ. ತಮಗೆ ಪರಮ ಪ್ರೇಮಾಸ್ಪದವಾದ ದೇವತೆಯು "ಅಭೀಷ್ಟ" ಎನಿಸಿಕೊಳ್ಳುತ್ತದೆ. " ಎಂದು ಶ್ರೀ ಮ ದ್ಭಾ ಗ ವ ತ ದ ಲ್ಲಿ ಹೇಳಿದಂತೆ ಈ ಶಾಸ್ತ್ರದಲ್ಲಿ ಎರಡು ವಿಧವಾದ ರೀತಿಗಳಲ್ಲಿಯೂ ನ ರ ಸಿಂ ಹ ನು ದೇವತೆಯಾಗಿರುತ್ತಾನೆ. ನಾರಸಿಂಹನುಅನಿಷ್ಟಪರಿಹಾರಕನಾದ ಕಾರಣ ಆಧಿಕಾರಿಕೀ ದೇವತೆಯೂ ಆಗಿರುತ್ತಾನೆ. ಮತ್ತೂ ಸಕಲ ಪ್ರಾಣಿಮೂಹದ ಸ್ವರೂಪದೇಹಸ್ಥಪಂಚಾತ್ಮಕ ಬಿಂಬರೂಪನಾದುದರಿಂದಲೂ ಅವನು ಖಡ್ಗ ಪ್ರಹಾರದಿಂದ ಸರ್ವಸುಜೀವಿಗಳ ಲಿಂಗಶರೀರವನ್ನು ಕತ್ತರಿಸುವವನಾದುದರಿಂದಲೂ, ಪಾಪವೆಂಬ ಕತ್ತಲೆಗೆ ಸೂರ್ಯನಾಗಿರುವದರಿಂದಲೂ ನೃಸಿಂಹನೇ ಈ ಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಡುತ್ತಾನೆ. ತತ್ವಸಂಗ್ರಹದಲ್ಲಿ "ಸರ್ವಜೀವರ ಸ್ವರೂಪದೇಹದಲ್ಲಿ ನರಸಿಂಹನು ಅಂತರಾತ್ಮನು, ಮಧ್ಯದಲ್ಲಿ ಶ್ರೀ ನಾರಾಯಣನು, ವಾಸುದೇವನು ಪುಚ್ಛ (ಪಾದ)ಗತರೂಪನು, ಎಡದಲ್ಲಿ ಸಂಕರ್ಷಣನು, ಬಲಭಾಗದಲ್ಲಿ ಪ್ರದ್ಯುಮ್ನನು; ಅನಿರುದ್ಧನು ಶಿರಸ್ಸಿನಲ್ಲಿ; ಹೀಗೆ ಒಬ್ಬನೇಆದ ಪರಮಾತ್ಮನು ಪಂಚರೂಪನಾದುದರಿಂದ ಈ ರೂಪಗಳಿಂದ ಸರ್ವರ ಶರೀರಗಳಲ್ಲಿಯೂ ಇರುತ್ತಾನೆ. ವಿರಜಾಸ್ನಾನದಿಂದ ತೊಯ್ಯಲ್ಪಟ್ಟು ದ್ವಿಗುಣವಾಗಿ (ದುಪ್ಪಟ್ಟು) ಬೆಳೆದು ನಿಂತಿರುವ ಸತ್ವಗುಣಯುಕ್ತವಾದ ಲಿಂಗಶರೀರವನ್ನು ಕಂಡು ಭಗವಾನ್–ಸರ್ವೇಶನೂ ಅಂ ತ ರಾ ತ್ಮ ನೂ ಆ ದ ಶ್ರೀ ಮ ನ್ನ ಸಿಂಹನು ತನ್ನ ಖಡ್ಗದಿಂದ ಕತ್ತರಿಸಿ ಲಿಂಗದೇಹದ ಭಂಗವನ್ನು ಮಾಡುತ್ತಾನೆ" ಎಂದು ಹೇಳಲ್ಪಟ್ಟಿರುತ್ತದೆ. ಮಾಯಾವಾದಖಂಡನದ ಶ್ರೀಜಯತೀರ್ಥರ

ಟೀಕಾಮಂಗಲ ಪದ್ಯದಲ್ಲಿ ಅಸಹ್ಯವಾದ ಪ್ರಬಲವಾದ ವಿಘ್ನಗಳೆಂಬ ತಿಮಿರ (ಕತ್ತಲೆಯನ್ನು)ಗಳನ್ನು ಕಳೆಯುವವನೆಂದೂ "ಅಖಿಲವಾದ ಅಜ್ಞಾನಮತ (ಸರ್ವವೂಅಜ್ಞಾನಕಲ್ಪಿತವಾದುದು ಎಂಬ ಮತ)ವೆಂಬ ಕತ್ತಲೆಗೆ ಸೂರ್ಯನಾದ ನರಸಿಂಹನು" ಎಂದು ಮೂಲ ಮಂಗಲಪದ್ಯಗಳಲ್ಲಿಯೂ ವರ್ಣಿತವಾಗಿರುತ್ತದೆ.

ಅಂತಸ್ಥಿತನಾಗಿ ರಮಣವನ್ನು ಮಾಡುವ ಅಂತರಾತ್ಮನು (ಆತ್ಮನು) ಪುತ್ರನಿಗಿಂತಲೂ ಪ್ರಿಯತರನು; ವಿತ್ತಕ್ಕಿಂತಲೂ ಅಧಿಕ ಪ್ರಿಯನು; ಉಳಿದುದೆಲ್ಲಕ್ಕಿಂತಲೂ ಪ್ರಿಯತಮನು" ಎಂಬ ಶ್ರುತಿಯು ಪರಮಾತ್ಮನು "ಪ್ರಿಯತಮ"ನೆಂದು ಹೇಳುವದರಿಂದ ಪರಮ ಅಭೀಷ್ಟನೆಂದೂ ಸಿದ್ಧವಾಗುತ್ತದೆ.

### ತಾಮ್ರಪರ್ಣೀಯಾ

**ಶ್ರೀರಮಣಿ ಕರಕಮಲ ಪೂಜಿತೇತ್ಯಾದಿ** ಚತುರ್ಭಿರ್ವಿಶೇಷಣೈಃ ನಾರಸಿಂಹಶಬ್ದೋಕ್ತಾನ್ ಗುಣಾನ್ ವಿಶಿನಷ್ಟಿ ॥ ನಾರಸಿಂಹ ಶಬ್ದನಿರ್ವಚನ ಪ್ರಕಾರಮಾಹ । ನವಿದ್ಯಂತೇ ಅರಾಃ ದೋಷಾಃದುಃಖಾಜ್ಞಾನಾದಯಃ ಯಸ್ಯಾ ಸಾ ನಾರಾ ಲಕ್ಷ್ಮೀಃ ತಸ್ಯಾಃ ಸಿಂಹಃ ಪತಿರಿತ್ಯರ್ಥಃ॥ಸಿಂಹೋಧೀಶಃ ಪತಿಃ ಪ್ರಭುರಿತಿವಚನಾತ್ । ತತ್ಪ್ರೇರಕತ್ವೇನ ತದಂತಸ್ಥತ್ವೇನ ತಸ್ಯಾ ಏವ ಮುಖ್ಯಾಧಿಷ್ಠಾನತ್ವಾಚ್ಚ ॥ ನ ಅರಮಣಂ ದುಃಖಂ ಏಷಾಮಿತಿ ಅರಮಣಂ ದುಃಖಂ–ನಾ ರಮಣಂ ಏಷಾಮಿತಿ ವಾ, ನ ದೋಷಾ ಏಷಾಮಿತಿ ವಾ, ನ ವಿದ್ಯತೇ ಅರಃ ಯೋಗ್ಯನಾಶೋ ಏಷಾಮಿತಿ ವಾ **ನಾರಾಃ ಮುಕ್ತಾಃ** । ತೇಷಾಂ ಸಿಂಹಃ ಪ್ರಭುರಿತ್ಯರ್ಥಃ ।"ಯಸ್ಮಾತ್ ಸರ್ವೇಷಾಂ ಭೂತಾನಾಂ ವೀರ್ಯತಮಃ ಶ್ರೇಷ್ಠತಮಶ್ಚ **ತಸ್ಮಾನ್ನೃಸಿಂಹಃ** ಆಸೀತ್ಪರಮೇಶ್ವರ" ಇತಿ ತಾಪನೀಯಶ್ರುತೇಃ ॥

### ಕನ್ನಡಾರ್ಥ

"**ಶ್ರೀರಮಣಿ ಕರಕಮಲ ಪೂಜಿತ**" ಎಂದು ಮುಂತಾದ ನಾಲ್ಕು ವಿಶೇಷಣಗಳಿಂದ ನಾರಸಿಂಹ ಶಬ್ದದ ಅರ್ಥಗಳನ್ನು ವಿವರಿಸುತ್ತಾರೆ.— ಆದರಲ್ಲಿ ಮುಂಚೆ ನಾರ ಸಿಂಹ ಶಬ್ದಗಳಅರ್ಥಗಳನ್ನು ಹೇಳುತ್ತಾರೆ. (೧)**ನಾರಾ** ಅರ=ದೋಷಗಳು (ಅಜ್ಞಾನ ದುಃಖ ಮುಂತಾದವುಗಳು) ಯಾವಳಿಗೆ ಇಲ್ಲವೋ ಅವಳು; ಅಂದರೆ ಶ್ರೀಲಕ್ಷ್ಮಿಯು. ಅವಳಿಗೆ **ಸಿಂಹ** ಎಂದರೆ ಪತಿ. ಎಂದರೆ-ಲಕ್ಷ್ಮೀಪತಿ ಎಂದರ್ಥ. ಸಿಂಹ ಶಬ್ದಕ್ಕೆ "ಅಧೀಶ,ಪತಿ,ಪ್ರಭು"ಎಂದು ಅರ್ಥಗಳನ್ನು



ಕೋಶದಲ್ಲಿ ಹೇಳಲಾಗಿರುತ್ತದೆ. (೨) ಲಕ್ಷ್ಮೀದೇವಿಗೂ ಅಂತಃಪ್ರೇರಕನೂ ನಿಯಾಮಕನೂ ಆದುದರಿಂದ ಪ್ರಭುವೆನಿಸಿಕೊಳ್ಳುವವನು; ಆದುದರಿಂದಲೂ ನಾರಸಿಂಹನು.

(೩) **ನಾರಾಃ**–ದುಃಖ, ನಾಶ, ಸಂಸಾರವಿಲ್ಲದವರು ನಾರರು=ಮುಕ್ತರು ಅವರಿಗೆ **ಸಿಂಹ**=(ಪತಿ) ಪ್ರಭುವು; ಆದ್ದುದರಿಂದ ನಾರಸಿಂಹ=ಮುಕ್ತರ ಪ್ರಭುವು ಎಂದರ್ಥ.

(೪) **ನಾರಸಿಂಹ**–ಎಲ್ಲ ಪ್ರಾಣಿಗಳಿಗಿಂತಲೂ–ವೀರ್ಯತಮನೂ ಶ್ರೇಷ್ಠತಮನೂ ಆದುದರಿಂದ ನೃಸಿಂಹನೆನಿಸಿಕೊಳ್ಳುತ್ತಾನೆ. "ಪರಮೇಶ್ವರನಿದ್ದನು" ಎಂದು ತಾಪನೀಯ ಶ್ರುತಿಯಿರುವದು.

### ತಾಮ್ರಪರ್ಣೀಯಾ

**ಶ್ರೀರಮಣಿ ಕರಕಮಲಪೂಜಿತ ಚಾರುಚರಣೇತ್ಯನೇನ** ನಾರಸಿಂಹಸ್ಯಾಖಂಡೈಶ್ವರ್ಯಾದಿಗುಣಪೂರ್ಣತ್ವಮುಕ್ತಮ್ ॥ **ಬ್ರಹ್ಮಸಮೀರಾದಿನಂದ್ಯ**–ಇತ್ಯನೇನ ಜಗತ್ಪಾಲನಾದಿಗುಣಪೂರ್ಣತ್ವಮುಕ್ತಮ್। ಪಾಲನಪೂರಣಾಭ್ಯಾಂ ಯಥಾಸಂಭವಂ ಸೃಷ್ಟ್ಯಾದ್ಯಷ್ಟಕರ್ತೃತ್ವ ಮಪ್ಯೂಹನೀಯಮ್।ಜಗದ್ವಿಲಕ್ಷಣಸ್ಯ ಲಕ್ಷಣೋಪದೇಶಮಂತರೇಣ ಜ್ಞಾತುಮಶಕ್ಯತ್ವಾದಿತ್ಯತೋ ವಾ ಲಕ್ಷಣಮಾಹ॥

### ಕನ್ನಡಾರ್ಥ

"**ಶ್ರೀರಮಣಿಕರಕಮಲ ಪೂಜಿತ ಚಾರುಚರಣ**" ಎಂಬ ಪದದಿಂದ ನಾರಸಿಂಹನಿಗೆ ಪೂರ್ಣೈಶ್ವರ್ಯಮುಂತಾದಗುಣಪರಿಪೂರ್ಣತ್ವವು ಹೇಳಲ್ಪಟ್ಟಿರುತ್ತದೆ. "ಬ್ರಹ್ಮಸಮೀರವಾಣಿಫಣೀಂದ್ರವೀಂದ್ರಭವೇಂದ್ರಮುಖವಿನುತ" ಎಂಬ ವಿಶೇಷಣದಿಂದ ಜಗತ್ಪಾಲಕತ್ವಾದಿ ಗುಣಪೂರ್ಣತೆಯು ಹೇಳಲ್ಪಟ್ಟಿತು. ಪಾಲನ ಹಾಗೂ ಪೂರಣವೆಂಬ ಗುಣಗಳಿಂದ ಸೃಷ್ಟ್ಯಾದ್ಯಷ್ಟಕರ್ತೃತ್ವವೂ ಉಕ್ತವಾಯಿತೆಂದು ಊಹಿಸಬೇಕು. ಅಥವಾ ಜಗದ್ವಿಲಕ್ಷಣನಾದವನನ್ನು ಲಕ್ಷಣವಿಲ್ಲದೇ ತಿಳಿಯಲಶಕ್ಯವಾದುದರಿಂದ ಲಕ್ಷಣವನ್ನು ಹೇಳುತ್ತಾರೆ.

### ತಾಮ್ರಪರ್ಣೀಯಾ

**ನೀರಜಭವಾಂಡೋದಯಸ್ಥಿತಿಕಾರಣನೆ** ಇತಿ। ನೀರಾಜ್ಜಾಯತ ಇತಿ ನೀರಜಂ ಕಮಲಮ್ ಪದ್ಮಮಿತ್ಯಭಿದಾನಾತ್ । ತಸ್ಮಿನ್ ಭವತೀತಿ ನೀರಜ

ಭವೋ=ಬ್ರಹ್ಮಾ, ತಸ್ಯ ಅಂಡಮ್ । ತಸ್ಯ ಪ್ರತ್ಯಕ್ಷಸಿದ್ಧಸ್ಯ ಜಗತಃ ಉದಯೋನಾಮೋತ್ಪತ್ತಿಃ ಸೃಷ್ಟಿಃ । ಸ್ಥಿತಿರ್ನಾಮ ರಕ್ಷಣಂ ಪಾಲನಮಿತ್ಯರ್ಥಃ ॥ ಜಗಜ್ಜನ್ಮಸ್ಥಿತಿಕರ್ತೃತ್ವೇ ಕಿಂ ಮಾನಮ್ ಇತ್ಯತಆಹ । ತದುಕ್ತಂ ಸ್ಕಾಂದೇ ॥ ಸೃಷ್ಟಿಸ್ಥಿತಿಶ್ಚಸಂಹಾರೋ ನಿಯತಿಃ ಜ್ಞಾನಮಾವೃತಿಃ । ಬಂಧಮೋಕ್ಷೌಚ ಪುರುಷಾದ್ಯಸ್ಮಾತ್ಸ ಹರಿರೇಕರಾಡಿತಿ ವಚನಾತ್। "ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ।ಸೃಷ್ಟಾಪಾತಾತಥೈವಾತ್ತಾನಿಖಿಳ ಸ್ಯೈಕಏವತು" ಇತ್ಯಾದಿಸ್ಮೃತೀನಾಂಚ । "ಯತೋವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿಜೀವಂತಿ । ಯತ್ಪ್ರಯಂತ್ಯಭಿಸಂವಿಶಂತೀತ್ಯಾದಿಶ್ರುತೀನಾಂ ಚಾಸ್ಮಿನ್ನೇವ ಸಮನ್ವಯಾತ್ ॥**ಓಂ ಜನ್ಮಾದ್ಯಸ್ಯಯತ ಇತಿ ಸೂತ್ರಾಚ್ಚ** ।

**ಕನ್ನಡಾರ್ಥ**

"**ನೀರಜಭವಾಂಡೋದಯಸ್ಥಿತಿ ಕಾರಣನೆ**"ಎಂಬುದಾಗಿ. ನೀರಜಂ ನೀರಿನಿಂದ ಹುಟ್ಟಿದುದು ಕಮಲ. "ನೀರಜ, ಕಮಲ, ಪದ್ಮ" ಎಂದು ಕೋಶ. ನೀರಜ(ಕಮಲ)ದಲ್ಲಿ ಹುಟ್ಟಿದವನು=ನೀರಜಭವ, ಬ್ರಹ್ಮ. ಅವನ ಅಂಡ ನೀರಜಭವಾಂಡ=ಬ್ರಹ್ಮಾಂಡ. ಪ್ರತ್ಯಕ್ಷಸಿದ್ಧವಾದ ಈ ಜಗತ್ತಿನ, ಉದಯ ಉತ್ಪತ್ತಿ, ಸ್ಥಿತಿ=ಪಾಲನ; ಜಗಜ್ಜನ್ಮಸ್ಥಿತಿಯನ್ನು ವಿಷ್ಣುವು ಮಾಡುವನು. ಎಂಬ ವಿಷಯದಲ್ಲಿ "ಸೃಷ್ಟಿಃಸ್ಥಿತಿಶ್ಚ" ಎಂಬ ಸ್ಕಂದಪುರಾಣವಚನವು ಪ್ರಮಾಣ; ಮತ್ತು "ಅಹಂ ಸರ್ವಸ್ಯಪ್ರಭವಃ" ಎಂಬ ಗೀತಾವಾಕ್ಯ, "ಸೃಷ್ಟಾಪಾತಾ" "ಯತೋವಾ ಇಮಾನಿ ಎಂಬ ಶ್ರುತಿಸ್ಮೃತಿಗಳೂ ಜನ್ಮಾದ್ಯಸ್ಯ ಯತಃ ಎಂದು ಸೂತ್ರವೂ ಪ್ರಮಾಣವಿರುತ್ತದೆ.

**ತಾಮ್ರಪರ್ಣೀಯಾ**

**ಕೈವಲ್ಯದಾಯಕೇತ್ಯನೇನ**–ಮೋಕ್ಷದಾತೇತ್ಯರ್ಥಃ । ಮೋಕ್ಷದಾತೃತ್ವಸೂಚನೇನ ಲಯಕರ್ತೃತ್ವಂ ಸೂಚಿತಮ್। ಭಗವಾನ್ ಮಹಾಪ್ರಳಯೇ ಜಗತ್‌ಸರ್ವಂ ಕವಳೀಕೃತ್ಯ ನೃಸಿಂಹ ರೂಪೇಣ ಗ್ರಸತೇ ತದೈವ ಪ್ರಳಯೋ ಭವತಿ । ತದುಕ್ತಂ । ಸಂಕರ್ಷಣಃ ನೃಸಿಂಹೇನ ರೂಪೇಣಾಗ್ರಸದೀಶ್ವರಃ । ತತಃ ಸರ್ವಾನ್ಪೂರ್ವಕಲ್ಪೇ ಮುಕ್ತಾನ್ ಬದ್ಧಾಂಶ್ಚಚೇತನಾನ್‌ಇತಿ **ಪ್ರಕಾಶಸಂಹಿತಾಯಾಮ್** ॥ ಜಗಜ್ಜನ್ಮಸ್ಥಿತಿಪ್ರಳಯದಾತೇತ್ಯರ್ಥಃ। ಉಕ್ತಜಗಜ್ಜನ್ಮಸ್ಥಿತಿಪ್ರಳಯದಾದೃತ್ವಂ ನಿಯಮನಜ್ಞಾನಾಜ್ಞಾನಬಂಧಮೋಕ್ಷಾಣಾಮುಪಲಕ್ಷಣ



ತಯಾ ಜ್ಞಾತವ್ಯಮಿತ್ಯಭಿಪ್ರಾಯೇಣ ನೀರಜಭವಾಂಡೋದಯಸ್ಥಿತಿಕಾರಣನೆ, ಕೈವಲ್ಯದಾಯಕೇ"ತ್ಯುಕ್ತಮ್॥ಬ್ರಹ್ಮಸಮೀರವಾಣಿ ಫಣೀಂದ್ರವಿಂದ್ರ ಭವೇಂದ್ರಮುಖವಿನುತೇತ್ಯನೇನ " ನಿಯಮನ ಜ್ಞಾನಾಜ್ಞಾನಬಂಧಮೋಕ್ಷಾಶ್ಚ ಅಪಿ ಗೃಹ್ಯಂತೇ ॥ "ಬ್ರಹ್ಮಸಮೀರವಾಣಿಫಣೀಂದ್ರವೀಂದ್ರಭವೇಂದ್ರಾಣಾಂ" ತತ್ಸ್ವೇಶತ್ವಾತ್ ತದಂತರ್ಯಾಮಿತ್ವಾತ್ ತತ್ಪ್ರೇಪ್ರೇರಕತ್ವಾತ್ **ನಾರಸಿಂಹಸ್ಯ ಸೃಷ್ಟ್ಯಾದ್ಯಷ್ಟಕರ್ತೃತ್ವಂ ಸೂಚಿತಮ್** ॥

**ಕನ್ನಡಾರ್ಥ**

"**ಕೈವಲ್ಯದಾಯಕ**"= ಮೋಕ್ಷದಾಯಕ; ಇದರಿಂದ "ಲಯವನ್ನೂ ಮಾಡುವನು" ಎಂಬ ಅರ್ಥವು ಸೂಚಿತವಾಯಿತು. ಮಹಾಪ್ರಲಯದಲ್ಲಿ ನೃಸಿಂಹರೂಪದಿಂದ ಈ ಸರ್ವಜಗತ್ತನ್ನು ನುಂಗುವನು; ಇದೇ ಪ್ರಲಯವೆನಿಸುತ್ತದೆ. "ಸಂಕರ್ಷಣನು ನೃಸಿಂಹರೂಪದಿಂದ ಸಮಸ್ತ ಜಗತ್ತನ್ನು ನುಂಗುತ್ತಾನೆ," ಎಂದು ಪ್ರಕಾಶಸಂಹಿತೆಯ ವಚನವಿರುವದು. ಮೇಲಿನ ವಿಶೇಷಣಗಳಿಂದ ಜಗತ್ತಿನ ಜನ್ಮಸ್ಥಿತಿ ಪ್ರಳಯಕರ್ತಾ ಎಂಬ ಅರ್ಥವು ಹೇಳಲ್ಪಟ್ಟಿತು. ಇದರಿಂದ ಜ್ಞಾನ-ಅಜ್ಞಾನ, ಬಂಧ, ಮೋಕ್ಷ ಕರ್ತೃತ್ವವೂ ಊಹಿತವಾಗುತ್ತದೆ. ಇದನ್ನು ತಿಳಿಸುವದಕ್ಕಾಗಿಯೇ "ನೀರಜಭವಾಂಡೋದಯ ಸ್ಥಿತಿಕಾರಣನೆ" "ಕೈವಲ್ಯದಾಯಕ" ಎಂಬ ವಿಶೇಷಣವು ಹೇಳಲ್ಪಟ್ಟಿರುತ್ತದೆ. "ಬ್ರಹ್ಮಸಮೀರ" ಎಂಬ ವಿಷೇಷಣದಿಂದ–"ಬ್ರಹ್ಮಮುಂತಾದ ದೇವಶ್ರೇಷ್ಠರಿಗೂ ಅಂತಃಪ್ರೇರಕನು "ಎಂಬ ಅರ್ಥವನ್ನು ಹೇಳಿರುವದರಿಂದಲೂ ಜಗತ್ಸೃಷ್ಟ್ಯಾದಷ್ಟಕರ್ತೃತ್ವವೂ ಸೂಚಿತವಾಗುತ್ತದೆ ಎಂದೂ ತಿಳಿಯಬೇಕು.

**ತಾಮ್ರಪರ್ಣೀಯಾ**

**ನನು ನರಸಿಂಹಸ್ಯ ಸೃಷ್ಟ್ಯಾದ್ಯಷ್ಟಕರ್ತೃತ್ವಂ** ಕುತ್ರದೃಷ್ಟಮಿತ್ಯಪೇಕ್ಷಾಯಾಮಾಹ ॥ "ಯಸ್ತೇಮನ್ಯೋ"ಇತಿಮನ್ಯುಸೂಕ್ತೋಕ್ತಃ ಮನ್ಯುನಾಮಾ ನರಸಿಂಹಏವ । ಹೇಮನ್ಯೋ ಕ್ರೋಧಾಭಿಮಾನಿರುದ್ರಾಂತರ್ಗತ ! ಋತ್ವಿಗಭಿಮಾನೀಂದ್ರಾಂತರ್ಗತ ಜ್ಞಾನರೂಪತ್ವಾನ್ಮನ್ಯುನಾಮಾ ನೃಸಿಂಹ ಏವ, ತ್ವಯಾ ವಿಶ್ವಂಪ್ರಪಂಚಂ ಆನುಷಕ್‌ಸಂಬದ್ಧಂ ॥ ಪುಷ್ಯತಿ ಪುಷ್ಣಾತಿ ಪೋಷಿತಂಭವತಿ ಪುಷ ಪುಷ್ಣಾವಿತಿಧಾತೋಃ ವಿಕರ್ಣವ್ಯತ್ಯಯಃ ಛಾಂದಸಃ । ಸರ್ವಶಬ್ದವಾಚ್ಯತ್ವೇನ ಮನ್ಯುನಾಮಕ ಶ್ರೀನೃಸಿಂಹಂ ಸ್ತೌತಿ ॥ "**ಸರ್ವಾಣಿ** ನಾಮಾನಿ

ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತೀತಿ ಭಾಲ್ಲವೇಯ ಶ್ರುತೇಃ ॥ "**ಮನ್ಯುರಿಂದ್ರೋಮನ್ಯುರೇವಾಸದೇವೋ ಮನ್ಯುಹೋತಾವರುಣೋಜಾತವೇದಾ** ಇತಿ। ಏವಕಾರಃ ಸರ್ವತ್ರಾಪಿ ಸಂಬಧ್ಯತೇ. ಮನ್ಯುರೇವ ಇಂದ್ರ=ಪರಮೈಶ್ವರ್ಯಶಾಲಿತ್ವಾದಿಯೋಗೇನ ಇಂದ್ರಶಬ್ದವಾಚ್ಯಃ "ಇಂದ್ರಃಸಪರಮೈಶ್ವರ್ಯಾತ್‌ಇತಿ ಋಗ್ಭಾಷ್ಯವಚನಾತ್। ಆಸ ಬಭೂವ। "ದೇವಃ" =ಕ್ರೀಡಾದಿಗುಣವಿಶಿಷ್ಟತ್ವೇನ ದೇವಶಬ್ದವಾಚ್ಯೋಪಿ ಮನ್ಯುರೇವ ॥ ದ್ಯೋತನಾ "ದ್ವಿಜಯಾತ್ಕಾಂತ್ಯಾ ಗತ್ಯಾಸ್ತುತ್ಯಾಚ ದೇವಾಖ್ಯಾವಾನ್‌ಇತಿ" ಋಗ್ಭಾಷ್ಯವಚನಾತ್ ॥ ಇಂದ್ರಿಯೇಷು ವಿಷಯಹೋತೃತ್ವಾತ್ **ಹೋತೃನಾಮಾಪಿ** ಮನ್ಯುರೇವಾಸ। ಇಂದ್ರಿಯಾಗ್ನಿಷು ಚಾರ್ಥಾನಾಂ ಹೋತೃತ್ವಾದ್ಧೋತೃನಾಮಕ ಇತಿ ಋಗ್‌ಭಾಷ್ಯವಚನಾತ್॥ಮನ್ಯುರೇವ ವರುಣಃ ತಮಸಾ ಅಜ್ಞಾನೇನ ಆ ವೃ ಣೋ ೕ ತಿ ೕ ತಿ ವರುಣಃ "ತಮಸೋಜ್ಞಾನತೋಪಿವಾ। ವರಮುನ್ನಯತಿಹ್ಯಸ್ಮಾದ್ವರಾನಂದತ್ವತೋಪಿಚ"ಇತಿ ವಚನಾತ್ ವರುಣ ಶಬ್ದವಾಚ್ಯಃಸಏವ। ಜಾತಂ ಸರ್ವಂವೇತ್ತಿಜಾನಾತಿಇತಿ ಸರ್ವಜ್ಞತ್ವೇನ ನಿಮಿತ್ತೇನ ಜಾತವೇದಶಬ್ದವಾಚ್ಯೋಪಿ ಸಏವಾಸ। ಇತ್ಯೇವಂ ಮನ್ಯುಸೂಕ್ತವ್ಯಾಖ್ಯಾನೇ ನೃಸಿಂಹಸ್ಯೈವ ಸರ್ವಕರ್ತೃತ್ವ ಸರ್ವಶಬ್ದವಾಚ್ಯತ್ವ ಸರ್ವಾಂತರ್ಯಾಮಿತ್ವಾದಿಕಂ **ಉಕ್ತಮ್ । ತಸ್ಮಾತ್‌ಸೃಷ್ಟ್ಯಾದ್ಯಷ್ಟಕರ್ತೃತ್ವಂ** ಸಿದ್ಧಮೇವೇತಿ ಜ್ಞಾತವ್ಯಮ್। ಅಥವಾ ನೃಸಿಂಹನಾರಾಯಣಯೋರೈಕ್ಯಾಭಿಪ್ರಾಯೇಣಾಪಿ ಜ್ಞಾತವ್ಯಮ್ ॥

### ಕನ್ನಡಾರ್ಥ

ನರಸಿಂಹನಿಗೆ ಸೃಷ್ಟ್ಯಾದ್ಯಷ್ಟಕರ್ತೃತ್ವವು ಎಲ್ಲಿ ಹೇಳಲಾಗಿರುತ್ತದೆ? ಎಂದು ಪ್ರಶ್ನೆಯು ಬರುತ್ತದೆ. ಅದಕ್ಕೆ ಕೆಳಗಿನ ಸೂಕ್ತ ವಾಕ್ಯಗಳು ಈ ಅರ್ಥವನ್ನು ಹೇಳುವದರಿಂದ ಸಮಾಧಾನವಾಗುತ್ತದೆ. "ಯಸ್ತೇಮನ್ಯೋ" ಎಂಬ ಮನ್ಯುಸೂಕ್ತದಲ್ಲಿ ಮನ್ಯುನಾಮಕ ನರಸಿಂಹನನ್ನು ಈ ರೀತಿಯಾಗಿ ಸ್ತುತಿಸಿರುತ್ತದೆ. "ಹೇ ಮನ್ಯೋ=ಮನ್ಯು(ಕ್ರೋಧ) ಅಭಿಮಾನಿರುದ್ರಾಂತರ್ಗತ ಅಥವಾ ಜ್ಞಾನಿಯಾದಋತ್ವಿಗಭಿಮಾನಿ ಇಂದ್ರಾಂತರ್ಗತ ಶ್ರೀ ನೃಸಿಂಹನೇ! ತ್ವಯಾ=ನಿನ್ನಿಂದ ಆನುಷಕ್=ಸರಿಯಾಗಿ ಸಂಬದ್ಧವಾದುದಾಗಿ (ಓತಪ್ರೋತವಾಗಿ ವ್ಯಾಪಿಸಲ್ಪಟ್ಟು) ವಿಶ್ವಂ=ಸಮಸ್ತ ವಿಶ್ವವು, ಪುಷ್ಯತಿ=ಪೋಷಣೆಯನ್ನು ಹೊಂದುತ್ತದೆ. ಪೋಷಿಸು ಎಂಬ ಅರ್ಥದಲ್ಲಿರುವ ಪುಷಧಾತುವಿನಿಂದ ಪುಷ್ಯತಿ



ಎಂದು ರೂಪವು ಸಿದ್ಧವಾಗುತ್ತದೆ. ವೈದಿಕ ಪ್ರಯೋಗವಾದುದರಿಂದ ವಿಕರಣದ ವ್ಯತ್ಯಾಸವಾಗಿರುತ್ತದೆ. ಹೀಗೆ ಜಗತ್ಪೋಷಕತ್ವಾದಿಗುಣಗಳಿಂದ ನರಸಿಂಹನನ್ನು ಸ್ತುತಿಸಿ- "ಸರ್ವಶಬ್ದವಾಚ್ಯನು" ಎಂದು ಸ್ತುತಿಸಲು "ಎಲ್ಲ ನಾಮಗಳ ಸಮನ್ವಯವು ಯಾರಲ್ಲಿಯೋ ಅವನು ವಿಷ್ಣುವು" ಎಂಬ ಶ್ರುತಿಗೆ ಅನುಸಾರವಾಗಿ ಈ ಮುಂದಿನ ಮಂತ್ರವನ್ನು ಹೇಳಲಾಗುತ್ತದೆ. "ಮನ್ಯುರೇವ ಇಂದ್ರಃ ಮನ್ಯುನಾಮಕ ನರಸಿಂಹನೇ ಇಂದ್ರಶಬ್ದಮುಖ್ಯವಾಚ್ಯನು; ಆಸ ಇದ್ದನು,= ಇರುತ್ತಾನೆ. ಅವನೇ "ದೇವಃ=ಕ್ರೀಡಾದಿಗುಣವಂತನು; ಆದುದರಿಂದ ದೇವಶಬ್ದ ಮುಖ್ಯವಾಚ್ಯನು. ಇಂದ್ರಿಯಗಳಲ್ಲಿ ವಿಷಯಗಳನ್ನು ಹೋಮಿಸುವವನು (ಇಡುವನು)ಆದುದರಿಂದ ಹೋತೃ ಶಬ್ದಮುಖ್ಯವಾಚ್ಯನು. ಅವನೇ ಅಜ್ಞಾನದಿಂದ ಅಥವಾ ತಮಸ್ಸಿನಿಂದ ಆವರಿಸುವವನಾದುದರಿಂದ ವರುಣಶಬ್ದಮುಖ್ಯವಾಚ್ಯನು. ಅಥವಾ ವರದಿಂದ ಆನಂದವನ್ನಿತ್ತು ಉನ್ನತಿಯನ್ನು ತರುವವನಾದುದರಿಂದ ವರುಣಶಬ್ದವಾಚ್ಯನು; ಸರ್ವವನ್ನು ತಿಳಿಯುವವನಾದುದರಿಂದ ಜಾತವೇದ ಶಬ್ದವಾಚ್ಯನು;" ಹೀಗೆ ಮನ್ಯುಸೂಕ್ತದಲ್ಲಿ ಋಗ್ಭಾಷ್ಯದಲ್ಲಿ ಹೇಳಿದಂತೆ ನರಸಿಂಹನು ಸರ್ವಕರ್ತಾ,ಸರ್ವಶಬ್ದವಾಚ್ಯ ಎಂದು ಮುಂತಾಗಿ ತಿಳಿಯತಕ್ಕದ್ದು. ಅಥವಾ ನಾರಾಯಣನೂ ನರಸಿಂಹನೂ ಒಂದೇ (ಅಭಿನ್ನ) ಆಗಿರುವದರಿಂದ ನಾರಾಯಣನಿಗೆ ಹೇಳಿರುವ ಸೃಷ್ಟ್ಯಾದ್ಯಷ್ಟಕರ್ತೃತ್ವವು ನರಸಿಂಹನಿಗೆ ಇರುವದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ.

### ತಾಮ್ರಪರ್ಣೀಯಾ

"**ಓಂ ವಿಕಲ್ಪೋ ವಿಶಿಷ್ಟಫಲವತ್ವಾತ್ ಓಂ**" ಸ್ವಯೋಗ್ಯೋಪಾಸನಾನಂತರಂ ಸಾಮಾನ್ಯಸ್ಯಾಪಿ ಕಚ್ಚಿದುಪಾಸನಂ ವಿಕಲ್ಪೇನ ಭವಿತಿ ವಿಶಿಷ್ಟಫಲಾಪೇಕ್ಷಯಾ ॥ ತುದುಕ್ತಮ್ ॥ "**ಮುಕ್ತ್ಯರ್ಥಮಾತ್ಮಯೋಗ್ಯಂಹಿ** ಕಾರ್ಯಮೇವಹ್ಯುಪಾಸನಂ॥ ನೃಸಿಂಹಾದಿಕಮನ್ಯಚ್ಚ ದುರಿತಾದಿನಿವೃತ್ತಯೇ॥ ಉಪಾಸತೇ ಯಥಾಯೋಗ್ಯಂ ನವಾ ಫಲವಿಭೇದತಃ॥ ಇತಿಬ್ರಹ್ಮತರ್ಕೇ"॥ ಏತದರ್ಥಂ ಮನಸಿ ನಿಧಾಯ ಸ್ವೋಪಾಸ್ಯನೃಸಿಂಹೋಪಾಸನಂ ಗ್ರಂಥಕಾರೈಃಕೃತಮಿತಿ ಭಾವಃ ॥

**ಕೀದೃಶೋಯಂ ನೃಸಿಂಹಇತಿಚೇತ್ ಶ್ರೀರಮಕರಮಣಿಲಪೂಜಿತಚಾರುಚರಣಸರೋಜ।** ಶ್ರೀಕಾಂತಿವಿಶಿಷ್ಟಾ। ಭಾಃಕಾಂತಿಃಶ್ರೀಃದ್ಯುತಿಃ ಛವಿರಿತ್ಯಭಿಧಾನಾತ್ ॥ ಶ್ರೀ ಸೌಭಾಗ್ಯಾತ್ಮಿಕಾ। ರಂತು ಯೋಗ್ಯಾ ರಮಣೀ।

ರಮಣತ್ವಾದ್ರಮಣೀ । ರಮಣಶೀಲತ್ವಾದ್ರಮಣೀ ॥ ರತಿವಿಷಯಕ ಮಾ= ಜ್ಞಾನಂ ನಯತಿ ಪ್ರಾಪಯತೀತಿ ವಾ। ಣೀಇಞ್ ಪ್ರಾಪಣೇಇತಿಧಾತೋಃ। ಸಕಲ ಸೌಭಾಗ್ಯಾತ್ಮಿಕಾರಮಾ ತತ್ಕರೌಕಮಲೇ,ಇವ ತಾಭ್ಯಾಮರ್ಚಿತೌ; ಚಾರೂ= ಮನೋಹರೌ ಚರಣೌ=ಪಾದೌ, ತೌ ಸರೋಜಾವಿವಯಸ್ಯಸಃ ತಥೋಕ್ತಃ॥ತ ತ್ಸಂಬುದ್ಧಿಃ । ಹೇರಮಾಕರಕಮಲಾರ್ಚಿತಪಾದಸರೋಜ ॥

**ಬ್ರಹ್ಮಸಮೀರವಾಣಿ ಫಣೀಂದ್ರವೀಂದ್ರ ಭವೇಂದ್ರಮುಖವಿನುತೇ ತ್ಯತ್ರ** ಬ್ರಹ್ಮಾ ಚತುರಾನನಶ್ಚ ಸಮೀರೋ ವಾಯುಶ್ಚ ವಾಣೀ ಸರಸ್ವತೀಚ ಫಣಿನಾಂ ಸರ್ಪಾಣಾಂ ಇಂದ್ರಃ ಶೇಷಶ್ಚ-ವೀನಾಂ ಪಕ್ಷಿಣಾಂ ಇಂದ್ರೋಗರು ಡಶ್ಚ ಭವೋರುದ್ರಶ್ಚ ಇಂದ್ರೋ ಪುರಂದರಶ್ಚ ಏತೇ ಮುಖಮೇಷಾಂ ತೇ । ಬ್ರಹ್ಮವಾಯುವಾಣೀಶೇಷಗರುಡರುದ್ರೇಂದ್ರಾದಯಃ । ತೈಃಸುರವರ್ಯೈಃ ವಿನುತೇ ತ್ಯರ್ಥಃ । ವಿಶೇಷೇಣನುತ ಇತ್ಯರ್ಥಃ । ನಿರಜಭವಾಂಡೋದಯಸ್ಥಿತಿಕಾರಣನೆ॥ ಇತ್ಯನೇನಬ್ರಹ್ಮಾಂಡೋದಯಸ್ಥಿತಿಕರ್ತಾ, । ಕೈವಲ್ಯದಾಯಕ ಇತ್ಯ ಸ್ಯ ಮೋಕ್ಷದಃ ಇತ್ಯರ್ಥಃ । ಹೇ ನಾರಸಿಂಹ ತ್ವಾಂ ನಮಿಪೆ ಇತ್ಯಸ್ಯ ನಮಾಮಿ ಇತ್ಯರ್ಥಃ। ತ್ವಂ। ಎಮಗೇ ಇತ್ಯಸ್ಯ ಅಸ್ಮಾಕಂ, ಮಂಗಳವಾ ಇತ್ಯತ್ರಮಂಗಳಂ, ಕರುಣಿಪುದು ಇತ್ಯತ್ರ=ದದಸ್ವೇತ್ಯರ್ಥಃ ॥

**ಕನ್ನಡಾರ್ಥ**

**"ಓಂ ವಿಕಲ್ಪೋವಿಶಿಷ್ಟ ಫಲವತ್ವಾತ್‌ಓಂ"** ಎಂಬ ಸೂತ್ರದಭಾಷ್ಯ ದಲ್ಲಿ, "-ತಮ್ಮ ತಮಗೆ ಯೋಗ್ಯವಾದ ಬಿಂಬರೂಪದ ಉಪಾಸನೆಯ ಅನಂತರ ಸ್ವಬಿಂಬಾತಿರಿಕ್ತವಾದ ಶ್ರೀನೃಸಿಂಹಾದಿರೂಪಗಳ ಉಪಾಸನೆಯು ವಿಶಿಷ್ಟಫಲದ ಅಪೇಕ್ಷೆಯಿರುವಾಗ ವಿಕಲ್ಪದಿಂದ ವಿಹಿತವಾಗುತ್ತದೆ. "ಎಂದು ಹೇಳಿ "ಮುಕ್ತಿಗಾಗಿ ಸ್ವಬಿಂಬೋಪಾಸನವನ್ನು ಮಾಡಬೇಕು; ಮಿಕ್ಕ ನೃಸಿಂಹರೂ ಪಾದ್ಯುಪಾಸನವನ್ನು ದುರಿತ (ವಿಘ್ನ,ಪಾಪ,) ಮುಂತಾದವುಗಳ ಪರಿಹಾರ ಕ್ಕಾಗಿ-ಯಾರಿಗೆ ಹೇಗೆ ಅಪೇಕ್ಷೆಯಿರುತ್ತದೋ ಅವರು ಹಾಗೆ ಮಾಡುತ್ತಾರೆ. ಆ ಫಲವು ಅನಪೇಕ್ಷಿತವಾದಾಗ ಆ ರೂಪಗಳನ್ನು ನಿಯಮದಿಂದ ಉಪಾಸನ ಮಾಡುವ ಕಾರಣವಿಲ್ಲ." ಎಂಬುದಾಗಿ ಬ್ರಹ್ಮತರ್ಕದ ಆಧಾರವನ್ನು ತೋರಿಸ ಲಾಗಿರುತ್ತದೆ. ಈ ಅರ್ಥವನ್ನೂ ಮನಸ್ಸಿನಲ್ಲಿ ಇಟ್ಟುಕೊಂಡು ಗ್ರಂಥಕಾರರು ನೃಸಿಂಹೋಪಾಸನೆಯನ್ನು ಮಾಡಿರುವರು ಎಂದು ಭಾವಿಸಬೇಕು.



ನರಸಿಂಹನು ಯಂಥವನು? ಎಂದರೆ—"ಶ್ರೀರಮಣಿಕರಕಮಲ ಪೂಜಿತ ಚಾರುಚರಣಸರೋಜ " ಎಂದು ಹೇಳಲಾಗಿದೆ. "ಭಾ, ಕಾಂತಿ, ಶ್ರೀ, ದ್ಯುತಿ; ಛವಿ" ಎಂದು ಕೋಶದಲ್ಲಿ ಹೇಳಿರುವದರಿಂದ ಶ್ರೀ=ಕಾಂತಿ,ಅಂದರೆ ಸೌಭಾತ್ಮಿ ಕೆಯು ಶ್ರೀ. ರಮಿಸಿಸಲು(ವಿಹರಿಸಲು)ಯೋಗ್ಯಳಾದುದರಿಂದ ರಮಣೀ,ರಮಣ ಶೀಲಳಾದುದರಿಂದ ರಮಣೀ, ರತಿಗೆಯೋಗ್ಯವಾದ ಮಾಂ=ಜ್ಞಾನವನ್ನು ನಯತಿ ಕೊಡುವವಳು (ಹೊಂದಿಸುವವಳು) ಆದುದರಿಂದ ರಮಣೀ; ಹೀಗೇ ರಮಣೀ ಶಬ್ದಾರ್ಥವನ್ನು ತಿಳಿಯಬೇಕು. ಸಕಲ ಸೌಭಾಗ್ಯರೂಪಳಾದ ಶ್ರೀ ಮಹಾ ಲಕ್ಷ್ಮಿಯ ಕಮಲ ಸದೃಶವಾದ ಕರಗಳಿಂದ ಪೂಜಿತವಾದ ಸರೋಜದಂತಿರುವ ಪಾದಗಳಿಂದ ಕೂಡಿದವನೇ ! ಎಂದುಅರ್ಥ.

" ಬ್ರಹ್ಮಸಮೀರವಾಣಿ ಫಣೀಂದ್ರ ವೀಂದ್ರ ಭವೇಂದ್ರ ಮುಖವಿನುತ " ಇದಕ್ಕೆ "ಬ್ರಹ್ಮ=ಚತುರ್ಮುಖನು, ಸಮೀರ=ವಾಯು, ವಾಣೀ=ಸರಸ್ವತೀ, ಫಣೀಂದ್ರ=ಸರ್ಪಶ್ರೇಷ್ಠ, ವೀಂದ್ರ=ಪಕ್ಷಿರಾಜ, ( ಗರುಡ ) ಭವ=ರುದ್ರ, ಇಂದ್ರ=ದೇವೇಂದ್ರ, ಇವರೇ ಮುಂತಾದ ದೇವತೆಗಳಿಂದ ವಿನುತ=ವಿಶೇಷ ವಾಗಿ ಸನ್ನುತನೇ ! ಎಂದು ಅರ್ಥ.

ನೀರಜಭವಾಂಡೋದಯಸ್ಥಿತಿಕಾರಣನೆ-ಕೈವಲ್ಯದಾಯಕ=ಬ್ರಹ್ಮಾಂಡದ ಉದಯ ಹಾಗೂ ಸ್ಥಿತಿಗಳ ಕರ್ತೃ ಮತ್ತು ಮೋಕ್ಷದಾತೃ ಎಂದು ಅರ್ಥ. ನಾರ ಸಿಂಹನೆ=ಹೇ ನಾರಸಿಂಹನೆ- ನಮಿಪೆ=ನಿನಗೆ ನಮಿಸುವೆನು. ಎಮಗೆ=ನಮಗೆ ಮಂಗಲವ=ಶುಭವನ್ನು , ಕರುಣಿಪುದು=ಕರುಣಿಸಬೇಕು." ಎಂದು ಅರ್ಥವನ್ನು ತಿಳಿಯಬೇಕು.

**ತಾಮ್ರಪರ್ಣೀಯಾ**

**ನೃಸಿಂಹಇತ್ಯನೇನ ವಾಯುರಿತ್ಯಾಹ** ॥ ನರೀಯಂತ ಇತಿನಾರಾಃ । ರೀಜ್‌ಕ್ಷಯೇ ನ ಕ್ಷೀಣಾಃ। ಜೀವಾನಾಂ ನಿತ್ಯತ್ವಾಚ್ಚ ನಾರಾಃ ಜೀವಾ।ತೇಷಾಂ ಸಿಂಹಃಶ್ರೇಷ್ಠಃ ಜೀವೋತ್ತಮತ್ವಾದ್ವಾಯುಃ **ನಾರಸಿಂಹಃ**। ನ ವಿದ್ಯಂತೇ ಅರಾಃ ದೋಷಾಃ ಏಷಾಂ ತೇನಾರಾಃ । ಮುಕ್ತಾಃ ತೇಷಾಂ ಸಿಂಹಃ ನಿಯಾಮಕೋ ವಾಯುಃ ॥ ವಾಯೋಃ ಮುಕ್ತನಿಯಾಮಕಮಕತ್ವಂ ಕಥಂ ಯುಜ್ಯತೇಇತ್ಯಾಹ

"ಸಏನಾನ್‌ಬ್ರಹ್ಮಗಮಯತೀತಿಶ್ರುತೇಃ"ಮೋಕ್ಷದಾತಾ ವಾಯುರೇವ।ವಾಯೋರ್ವಿದ್ಯಮಾನಮೋಕ್ಷದಾತೃತ್ವಮಪಿ ಹರ್ಯಧೀನತಯೇತ್ಯಾಹ । "ವಿಷ್ಣುರ್ಹಿದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ" ಇತಿವಚನಾತ್ । ಕೈವಲ್ಯದಾಯಕೇತ್ಯಸ್ಯಾಯಮರ್ಥೋऽವ್ಯಾಖ್ಯಾತಃ ॥

**ಕನ್ನಡಾರ್ಥ**

ನಾಂಶರಾಹಿತ್ಯರೂ ನಿತ್ಯರೂ ಆದ ಜೀವರುಗಳಿಗೆ ಶ್ರೇಷ್ಠರಾದುದರಿಂದ ( ಜೀವೋತ್ತಮರಾದುದರಿಂದ ) ನಾರಸಿಂಹ ಎಂದರೆ ವಾಯುವು. "ಸಏನಾನ್ ಬ್ರಹ್ಮ ಗಮಯತಿ" "ಆ ವಾಯುದೇವನು ಈ ಜೀವರನ್ನು ಪರಮಾತ್ಮನ ಬಳಿಗೆ ಒಯ್ಯುತ್ತಾನೆ" ಎಂಬ ಪ್ರಮಾಣಾನುಸಾರವಾಗಿ ವಾಯುವು ಮುಕ್ತನಿಯಾಮಕ ಮತ್ತು ಮುಕ್ತಿದಾತೃ ಎನಿಸಿಕೊಳ್ಳುತ್ತಾನೆ. "ಮುಕ್ತಿಕೊಡುವವನು ಮುಖ್ಯವಾಗಿ ( ಸ್ವತಂತ್ರವಾಗಿ ) ವಿಷ್ಣುವು; ಅವನ ಅನುಜ್ಞೆಯಿಂದ ವಾಯುದೇವನೂ ಮೋಕ್ಷವನ್ನು ಕೊಡುತಕ್ಕವನು" ಎಂಬ ವಚನದಂತೆ ಹರಿಯ ಆಧೀನವಾದ ಮುಕ್ತಿ ದಾತೃತ್ವವು ವಾಯುವಿಗೆ ಇರುವದು ಎಂದು ಸಿದ್ಧವಾಗುತ್ತದೆ.

**ತಾಮ್ರಪರ್ಣೀಯಾ**

**ನನುಹರ್ಯಧೀನತಯಾ ವಾಯೋಃ ಮೋಕ್ಷ**ದಾತೃತ್ವ ಮಸ್ತೀತ್ಯುಕ್ತಂ, ನೀರಜಭವಾಂಡೋದಯ ಸ್ಥಿತಿಕಾರಣತ್ವಂ ಕಥಂ ಯುಜ್ಯತ ಇತ್ಯಾಹ। ನೀರಜಭವಾಂಡೋದಯಸ್ಥಿತಿಕಾರಣತ್ವಂ ಪ್ರ ಸಿ ದ್ಧ ಮೇ ವ । "ತದುಕ್ತಂ ಸರ್ವಸ್ಥೂಲಶರೀರಾಣಾಮುಪಾದಾನ್ಯಜಃ ಸ್ವಯಂ। ವಿರಾಡ್‌ದತ್ತಾನಿ ಸಂಗ್ರಹ್ಯ ಕ್ರಮಾತ್ಕಾಲಾನುಸಾರತಃ । ಚಕ್ರೇಸ್ಥೂಲಶರೀರಾಣಿ ಯದ್ದೇಶೋ ಸ್ಥಾಪಯನ್ವಿರಾಟ್ । ತೇಷಾಂ ತದುಪಯುಕ್ತಾರ್ಥಾನ್ ಜಡಾನ್ಯಪಿ ಧನಾನಿಚ । ತತ್ತದ್ಗುಣಕ್ರಿಯಾಜಾತಿರೂಪಲಕ್ಷಣಸಂಪದಃ । ವ್ಯ ವ ಹಾ ರಾ ಶ್ರ ಯಾಚಾರ ವೇಷ ಭಾಷ್ಯಾಸ್ವರೂಪಕಾನ್ । ದಾನಮಾನಾಪ ಮಾನಾರ್ಹ ಪೂರ್ವಾನಂತಾರ್ಥಸಂಚಯಾನ್ । ಚತುರ್ಲಕ್ಷಾಧಿಕಾಶೀತಿ ಲಕ್ಷಜೀವಗಣಾನ್ಸಿತಾನ್ । ವಿರಾಡುಕ್ತಾನ್ವಿರಾಡ್‌ದೃಷ್ಟಾನ್‌ತದ್ಭಾವಜ್ಞಸ್ತಥಾಚರತ್ ॥ ಇತಿ ಪ್ರಕಾಶಸಂಹಿತಾಯಾಂ ॥ "ಸಾಭ್ರೋಷ್ಣಾಭೀಶುಶುಭ್ರಪ್ರಭಮಭಯನಭೋಭೂರಿಭೂಭೃದ್ವಿಭೂತಿ ಭ್ರಾಜಿಷ್ಣುರ್ಭೂರ್ಋಭೂಣಾಂ ಭುವಮಪಿವಿಭೋ ಭೇದಿಬಭ್ರೇಬಭೂವೇ" ಇತಿವಚನಾತ್ ॥



ಸರ್ವೇಷಾಂ ಜೀವಾನಾಂ ಜ್ಞಾನಭಕ್ತಿವೈರಾಗ್ಯಾದಿಕಂದತ್ವಾ ಸ್ವಾಂತಃ ಭಗವನ್ಮೂರ್ತಿಂದರ್ಶಯಿತ್ವಾ ಇಹ ಭಗವತ್‌ಸೇವಾಸಾಧನ ಸಾಮಗ್ರ್ಯಾದಿಕಂ ಸ್ವಾನುಷ್ಠಿತಕರ್ಮಶೇಷಾದಿಕಂದತ್ವಾ– ಸ್ರಕ್ ಚಂದನ ವನಿತಾದಿಭೋಗಂದತ್ವಾ ಸ್ವಯಂ ಜೀವಾಂತರ್ಯಾಮಿತಯಾಸ್ಥಿತ್ವಾ– ಸರ್ವಕರ್ಮಕೃತ್ವಾ–ಕಾರಯಿತ್ವಾ ಪಾಲಯತಿ ॥ ಯತೋತೋ ವಾಯೋಃ ಸ್ಥಿತಿಕರ್ತೃತ್ವಂ ಉಕ್ತಮೇವ ॥

**ಕನ್ನಡಾರ್ಥ**

ಹಾಗಾದರೆ "ನೀರಜ ಭವಾಂಡೋದಯ ಸ್ಥಿತಿ ಕಾರಣನೆ" ಎಂಬ ವಿಶೇಷಣವು ಹೇಗೆ ಸಮನ್ವಯಿಸುವದು ? ಎಂಬ ಸಂಶಯವು ಬರಬಹುದು; ಆದರೆ ವಿರಾಟ್‌ನಾಮಕಪರಮಾತ್ಮನಿಂದ, ಸರ್ವರ ಸ್ಥೂಲಶರೀರಗಳ ಉಪಾದಾನ ಕಾರಣಗಳನ್ನು ಪಡೆದುಕೊಂಡಕ್ರಮ ಹಾಗೂ ಕಾಲಗಳ ಅನುಸಾರವಾಗಿ ಸ್ಥೂಲಶರೀರಗಳನ್ನು ನಿರ್ಮಿಸಿ ವಿರಾಟನು ಸ್ಥಾಪಿಸಿದ ದೇಶಗಳಲ್ಲಿ ಅವರವರಿಗೆ ಉಪಯುಕ್ತವಾದ ಜಡಪದಾರ್ಥಗಳನ್ನು ಧನ, ಗುಣ, ಕ್ರಿಯ, ಜಾತಿ ರೂಪವಾದ ಸಂಪತ್ತುಗಳನ್ನೂ ವಿರಾಟನು ತೋರಿಸಿದಂತೆ ೮೪ಲಕ್ಷ ಯೋನಿಗತರಾದ ಜೀವರಾಶಿಗಳನ್ನು ಸೃಷ್ಟಿಮಾಡುತ್ತಾನೆ." ಎಂಬ ಪ್ರಕಾಶಸಂಹಿತೆಯ ವಚನದಂತೆಯೂ "ಸಾಭ್ರೋಷ್ಣಾಭೀಶ" ಎಂಬ ವಾಯುಸ್ತುತಿಯವಚನದಂತೆಯೂ– ಶ್ರೀ ವಾಯುವೇ ಎಲ್ಲ ಜೀವರುಗಳಿಗೆ ಜ್ಞಾನ ಭಕ್ತಿ ವೈರಾಗ್ಯಗಳನ್ನು ಕೊಟ್ಟು ಹೃದಯದಲ್ಲಿರುವ ಭಗವಂತನ ಮೂರುತಿಯನ್ನು ತೋರಿಸುತ್ತಾನೆ. ಮತ್ತು ಇಹದಲ್ಲಿ ಭಗವತ್ಸೇವಾಸಾಧನಸಾಮಗ್ರಿಗಳನ್ನೂ ಅವರವರಿಂದ ಮಾಡಲ್ಪಟ್ಟ ಕರ್ಮಶೇಷಾದಿಗಳನ್ನು ಒದಗಿಸಿಕೊಡುತ್ತಾನೆ. ಹೀಗೆ ಸರ್ವಾಂತರ್ಯಾಮಿಯಾಗಿ ಸರ್ವಕರ್ಮಕರ್ತೃ ಹಾಗೂ ಕಾರಕನಾಗಿ ಸಂರಕ್ಷಿಸುವನು;" "ಎಂದು ಪ್ರಮಾಣಗಳಲ್ಲಿ ಹೇಳಿರುವದರಿಂದ ಸ್ಥಿತಿಕರ್ತೃತ್ವ ವಿಶೇಷಣವು ವಾಯುದೇವನಿಗೆ ಸಮನ್ವಯಿಸುವದು" ಎಂದು ತಿಳಿಯಬೇಕು.

**ತಾಮ್ರಪರ್ಣೀಯಾ**

**ಬ್ರಹ್ಮಸಮೀರವಂದ್ಯತ್ವಂ ವಾಯೋಃ ಕಥಂ ಯುಜ್ಯತಇತ್ಯಾಹ।** ಬ್ರಹ್ಮೇತ್ಯನೇನ ಚತುರ್ಮುಖೋನಾತ್ರಾಭಿಪ್ರೇತಃಕಿಂತು ಜೀವಃ ॥ ಬೃಹಜಾತಿಜೀವಕಮಲಾಸನ ಶಬ್ದರಾಶಿಷ್ವಿತ್ಯಭಿಧಾನಾತ್ । ವಾಯೋರ್ಜೀವೋತ್ತಮತ್ವಾ

ಜ್ಜೀವವಂದ್ಯತ್ವಂಯುಕ್ತಮೇವ । ಅಥವಾ “ ಬ್ರಹ್ಮವೇದಃತಪಸ್ತತ್ವಂ ಬ್ರಹ್ಮಾ ವಿಪ್ರಃ ಪ್ರಜಾಪತಿರಿತ್ಯಭಿಧಾನಾತ್। ಬ್ರಹ್ಮಶಬ್ದಸ್ಯವೇದಇತ್ಯರ್ಥಃ । ವಾಯೋರ್ವೇದವಂದ್ಯತ್ವಂ ಯುಕ್ತಮೇವ । ಸಮೀರ ಇತ್ಯತ್ರ ಅಹಂಕಾರಿಕ ಪ್ರಾಣಃ । ತದ್ವಂದ್ಯತ್ವಂಯುಕ್ತಮೇವ । **ವಾಣೀ** ತ್ಯತ್ರವಾಗಭೀಮಾನಿತ್ವೇನ ಉಮಾ ತಯಾವಂದ್ಯಇತ್ಯರ್ಥಃ ॥ ಫಣೀಂದ್ರಃಶೇಷಃ । ಗರುಡರುದ್ರೇಂದ್ರಾದಿ ತತ್ವಾಭಿಮಾನಿದೇವೈಃನುತತ್ವಂ ಸಹಜಮೇವ॥ **ಶ್ರೀರಮಣಿಕರಮಲಪೂಜಿತತ್ವಂ** ವಾಯೋಃ ಕಥಮಿತ್ಯತ ಆಹ ॥ ಶ್ರೀ ರಮಣೀತ್ಯನೇನ **ಭಾರತೀ** ಉಚ್ಯತೇ। ತತ್ಕರಕಮಲಪೂಜಿತತ್ವಂ ಯುಕ್ತಮೇವ। ಭಾರತ್ಯಾಃ ಶ್ರೀಶಬ್ದವಾಚ್ಯತ್ವಂ ಕುತ್ರ ದ್ರಷ್ಟಮಿತ್ಯಾಹ ॥ “ ವಾಯೋಶ್ಚಸುಖರೂಪತ್ವಾತ್ತತ್ಪತ್ನೀ ಶ್ರೀರುದಾಹೃತೇತಿ ವಚನಾತ್ । ಯದ್ಯಪಿವಾಯೋರ್ವಿದ್ಯಮಾನಂ ಜಗ ಜನ್ಮಾದಿಕರ್ತೃತ್ವ ಮಪಿ ಹರ್ಯಧೀನತ್ವಾನ್ನಾರಸಿಂಹ ಇತ್ಯನೇನ ಹರಿರೇವಾತ್ರಭಿಪ್ರೇತಃ। ನ ವಾಯುರಿತಿ ಸದ್ಭಿಃ ಸಂತೋಷ್ಟವ್ಯ**ಮಿತ್ಯಾದ್ಯಪದ್ಯ ಪ್ರಥಮಾರ್ಥಃ** ॥ ೧ ॥

## ಕನ್ನಡಾರ್ಥ

**ಬ್ರಹ್ಮಸಮೀರಾದಿ ವಂದ್ಯತ್ವವು ಹೇಗೆ?** ಎಂಬ ಸಂಶಯವು ಮೂಡಬಹುದು. ಆದರೆ ಇಲ್ಲಿರುವ ಬ್ರಹ್ಮಶಬ್ದಕ್ಕೆ ಚತುರ್ಮುಖ ಎಂದು ಅರ್ಥ ಮಾಡಬಾರದು. “ಬ್ರಾಹ್ಮಣವರ್ಣ, ಜೀವ, ಚತುರ್ಮುಖ, ವೇದ, ಪರಬ್ರಹ್ಮ” ಇಷ್ಟು ಅರ್ಥಗಳಲ್ಲಿರುವದರಿಂದ ಈಗ ಯೋಗ್ಯವಾದ “ಜೀವರು” ಎಂಬ ಅರ್ಥವನ್ನು ಮಾಡಬೇಕು. ಅಂದರೆ ಯುಕ್ತವಾಗುತ್ತದೆ. ಅಥವಾ ವೇದವಂದ್ಯನೆಂದೂ– ಜೀವವಂದ್ಯನೆಂದೂ ಅರ್ಥ ಮಾಡಬೇಕು.

ಸಮೀರ ಶಬ್ದಕ್ಕೆ ಅಹಂಕಾರಿಕಪ್ರಾಣ ಎಂದು ಅರ್ಥಮಾಡಬೇಕು. ವಾಣೀ ಶಬ್ದಕ್ಕೆ ವಾಗಭಿಮಾನಿನಿಯಾದ ಉಮಾ ಎಂದು ಅರ್ಥ ಮಾಡಬೇಕು. ಗರುಡಶೇಷರುದ್ರರಿಂದ ವಾಯುದೇವರುಸ್ತುತ್ಯರೇ ಇರುವದರಿಂದ ಆ ಪದಗಳಿಗೆ ಮೊದಲಿನ ಯಥಾಸ್ಥಿತಿವಾದ ಅರ್ಥವನ್ನೇ ತಿಳಿಯಬೇಕು. ಇನ್ನು “ಶ್ರೀರಮಣಿ ಕರಕಮಲ ಪೂಜಿತ” ಎಂಬ ವಿಶೇಷಣವು ಹೇಗೆ ? ಎಂದು ಸಂಶಯವು ಬರಬಹುದು; ಶ್ರೀ=ಅಂದರೆ–ಭಾರತೀ ಎಂದು ಅರ್ಥಮಾಡಿದರೆ ಭಾರತೀ ಕರಕಮಲಪೂಜಿತನೆಂದು ಯುಕ್ತವಾದ ಅರ್ಥವಾಗುತ್ತದೆ” ವಾಯುದೇವನು



ಸುಖರೂಪನಾದುದರಿಂದ ಅವನ ಪತ್ನಿಯಾದ ಭಾರತಿಯು ಶ್ರೀ ಎನಿಸುವಳು ಎಂಬ ವಚನದಂತೆ ಭಾರತಿಯೂ ಶ್ರೀ ಶಬ್ದವಾಚ್ಯಳೆಂದು ತಿಳಿಯಬೇಕು. ಹೀಗೆ ಇಲ್ಲಿ ಹೇಳಿರುವ ವಿಶೇಷಣಗಳು ವಾಯುದೇವರಿಗೂ ಅನ್ವಯಿಸುವದರಿಂದ ಪರಮಾತ್ಮನಿಗೇನೇ ಇವು ಅಸಾಧಾರಣವಾದ ಲಕ್ಷಣಗಳು ಹೇಗೆ ಆಗುವವು? ಎಂದು ಶಂಕಿಸಬಾರದು. ಯಾಕಂದರೆ ಇವೆಲ್ಲ ವಿಶೇಷಗಳು ಹರಿಯ ಆಧೀನವಾಗಿ ವಾಯುವಿನಲ್ಲಿ ಬರುತ್ತಿದ್ದರೂ ಮುಖ್ಯವಾಗಿ, ಶ್ರೀಹರಿಗೆ ಸಮನ್ವಯಿಸುವಂತೆ ಸ್ವತಂತ್ರವಾಗಿ ನಾರಸಿಂಹಶಬ್ದ ವಿವರಣರೂಪವಾದ ಈ ವಿಶೇಷಣಗಳು ವಾಯುವಿನಲ್ಲಿ ಸಮನ್ವಯಿಸುವದಿಲ್ಲವಾದುದರಿಂದ ನರಸಿಂಹನೇ ನಾರಶಬ್ದಕ್ಕೆ ಅಭಿಪ್ರೇತವಾದ ಅರ್ಥ; ವಾಯುವು ಅಲ್ಲ. ಎಂದು ಪ್ರಥಮ ಪದ್ಯದ ಪ್ರಥಮ ಅರ್ಥವನ್ನು ತಿಳಿದು ರಸಿಕರು ಸಂತೋಷ ಪಡಬೇಕು. ॥ ೧ ॥

## ಅಥದ್ವಿತೀಯಾರ್ಥ ತಾಮ್ರಪರ್ಣೀಯಾ

**ಶ್ರೀಮಜ್ಜಗನ್ನಾಥದಾಸಾರ್ಯವರ್ಯಃ** ಪೂರ್ವೋಕ್ತಪದ್ಯೇ ವಿಷಯಪ್ರಯೋಜನಾದೀನ್ ನಿರೂಪ್ಯ – ಪ್ರಚುರಪ್ರಮೇಯ ಗ್ರಂಥಕರಣವ್ಯಾಜೇನ ನಿಪ್ರತ್ಯೂಹಾರ್ಥಂ ಸರ್ವೇಷ್ಟದೇವತಾಂನಾರಸಿಂಹಾಭಿಧಾನಾಂಪ್ರಣಮ್ಯಸ್ವಾಭೀಷ್ಟಾರ್ಥಂ ಪ್ರಾರ್ಥಯತೇ ॥

**ಶ್ರೀರಮಣೀತಿ**= “ಶ್ರೀರಮಣಿಕರಕಮಲಪೂಜಿತ। ಚಾರುಚರಣಸರೋಜಬ್ರಹ್ಮಸಮೀರವಾಣಿ ಫಣೀಂದ್ರವೀಂದ್ರಭವೇಂದ್ರಮುಖವಿನುತಾ ॥ ನೀರಜಭವಾಂಡೋದಯಸ್ಥಿತಿ ಕಾರಣನೆಕೈವಲ್ಯದಾಯಕ । ” ಹೇನಾರಸಿಂಹತ್ವಾಂನಮಿಪೆ ನಮಾಮಿ-ನಮಸ್ಕರೋಮಿ, ತ್ವಮಸ್ಮಾಕಂ ಮಂಗಳಂದೇಹಿತಿಸಮಸ್ತಾನ್ವಯಃ। ತತ್ರಪ್ರಥಮತೋವ್ಯಸ್ತಾನ್ವಯಃ । ಹೇ ನರಸಿಂಹತ್ವಾಮ್ ಇತ್ಯಾದ್ಧ್ಯಾಹರ್ತವ್ಯಮ್ ॥ ಉತ್ತಮ ಪುರುಷಪ್ರಯೋಗಬಲಾತ್ ಅಹಮಿತಿಕರ್ತಾಲಭ್ಯತೇ ॥ ನನು ಹರೇರವತಾರಾಣಾಮಾನಂತ್ಯಾತನ್ಮಧ್ಯೇ ನಾರಸಿಂಹಸ್ಯೈಕತ್ವಾನ್ಮೂಲರೂಪ ನಾರಾಯಣಂವಿನಾನಾರಸಿಂಹವಂದನೇಕೋಹೇತುಃಇತಿಪ್ರಾಪ್ತೆ। ತತ್ರೋಚ್ಚತೇ ॥ ದ್ವಿವಿಧಾಹಿದೇವತಾಗ್ರಂಥಾರಂಭೇಮಂಗಳಕ್ರೀಯಾಮರ್ಹತಿ । ಆಧಿಕಾರಕೀ, ಅಭಿಷ್ಟಾಚೇತಿ ॥ ಯಥಾ ಜ್ಯೋತಿಃಶಾಸ್ತ್ರೇಸೂರ್ಯಾದಿಗ್ರಹಲಕ್ಷಣದೇವತಾ, ಆಧಿಕಾರಿಕೀ ।ಪರಮಪ್ರೇಮ ವಿಷಯೇಷ್ಟದಾತೃತ್ವಾತ್ ಅಭೀಷ್ಟಾಚ

ನಾರಸಿಂಹಸ್ತುಅನಿಷ್ಟ ಪರಿಹಾರಕತ್ವೇಷ್ಟಫಲದಾತೃತ್ವರೂಪೋಭಯ ಲಕ್ಷಣವ
ತ್ವಾತ್ ಅಸ್ಮಿನ್ ಶಾಸ್ತ್ರೇಪ್ರತಿಪಾದ್ಯತೇ॥ ನಾರಸಿಂಹಸ್ಯ ಪ್ರೇಮವಿಷಯತ್ವಂ
ಕುತ್ರೋಕ್ತಮಿತ್ಯಪೇಕ್ಷಯಾಂ ಚೇತ್ । ಅತ್ರಶ್ರುತಿರೇವಮಾನಮ್ । "ತದೇತ
ತ್ಪ್ರೇಯಃ ಪುತ್ರಾತ್ಪ್ರೇಯೋವಿತ್ತಾತ್ ಪ್ರೇಯೋನ್ಯಸ್ಮಾತ್ಸರ್ವಸ್ಮಾದ್ಧ್ಯದಯ ಮಾತ್ಮೇ
ತಿಶ್ರುತೌ ಪುತ್ರಾದ್ಯಪೇಕ್ಷಯಾ ಪರಮಪ್ರೇಮವಿಷಯತ್ವಂ ಉಕ್ತಮ್।ನಾರಸಿಂಹ
ಸ್ಯಾಅನಿಷ್ಟಪರಿಹಾರಕತ್ವಂ ಕುತ್ರದ್ರಷ್ಟಮಿತಚೇತ್ "ನರಸಿಂಹಮಸಂಹ್ಯೋ
ರುಪ್ರತ್ಯೂಹತಿಮಿರಾಪಹಂ । ನರಸಿಂಹೋಽಖಿಳಾಜ್ಞಾನಮತಧ್ವಾಂತದಿವಾ
ಕರಃ ॥ ಜಯತ್ಯಮಿತಸದ್ ಜ್ಞಾನಸುಖಶಕ್ತಿಪಯೋನಿಧಿರಿತಿ" ॥ ಮಾಯಾವಾದ
ಖಂಡನತತ್ ಟೀಕಾಯಾಂ ನಾರಸಿಂಹಸ್ಯೈವ ವಿಘ್ನವಿಘಾತಕತ್ವಂ ಅಜ್ಞಾನಾಂಧ
ಕಾರ ನಿರಾಸಕತ್ವಮಪ್ಯುಕ್ತಮ್।ನಾರಸಿಂಹಸ್ಯ ಜೀವಸ್ವರೂಪದೇಹಸ್ಥ ಬಿಂಬರೂ
ಪತ್ವಂ ಕುತ್ರೋಕ್ತಮ್ ಇತ್ಯತ್ರ ॥ "ಶಿರೋನಾರಾಯಣಃ ಪಕ್ಷಃದಕ್ಷಿಣಸ್ಸವ್ಯ
ಏವಚ । ಪ್ರದ್ಯುಮ್ನಶ್ಚಾನಿರುದ್ಧಶ್ಚ ಸಂದೋಹೋವಾಸುದೇವಕಃ । ನಾರಾ
ಯಣೋಽಥಸಂದೋಹೋ ವಾಸುದೇವಃಶಿರೋಪಿವಾ । ಪುಚ್ಛಂ ಸಂಕರ್ಷಣಃ
ಪ್ರೋಕ್ತಃ ಏಕ ಏವತು ಪಂಚಧಾ ॥ ಅಂಗಾಂಗಿತ್ವೇನ ಭಗವಾನ್ ನ್ನಾರ
ಸಿಂಹೋಂತರಾತ್ಮವಾನ್"॥ಇತಿ ಪ್ರಕಾಶಸಂಹಿತಾವಚನಂಮಾನಮ್ ॥ ಸರ್ವ
ಜೀವಸ್ವರೂಪೇಚನಾರಸಿಂಹೋಂತರಾತ್ಮವಾನ್ । ಪಂಚರೂಪಾತ್ಮಕತ್ವೇನ
ಸ್ಥಿತಃ ಶ್ರೀವತ್ಸಲಾಂಛನಇತಿ" **ಬ್ರಹತ್ಸಂಹಿತೋಕ್ತೇಶ್ಚ** ನಾರಸಿಂಹಸ್ಯ ಸ್ವರೂಪ
ದೇಹಸ್ಥ ಬಿಂಬತ್ವಮಭಿಹಿತಮ್।

**ನನು ನಾರಸಿಂಹಸ್ಯಾಅನಿಷ್ಟನಿರಾಸಕತ್ವಂ** ಕಥಂಯುಜ್ಯತೇ ॥ ಕಿಂ
ನಾಮಾನಿಷ್ಟಂ ?ತನ್ನಿರಾಸಕತ್ವಂ ಕೀ ದೃಗ್ವಿಧಮಿತಿ ನಶಂಕನೀಯಮ್॥ವಿರಜಾ
ನದೀಸ್ನಾನೇನ ದ್ವಿಗುಣಿತಸತ್ವಲಿಂಗಮವೇಕ್ಷ್ಯನಾರಸಿಂಹರೂಪೀಬಿಂಬಃ ಸ್ವ
ಖಡ್ಗೇನ ವಿದಾರಯತಿ । **ತದೇವೋಕ್ತಂಬ್ರಹತ್ಸಂಹಿತಾಯಾಂ** । "ವಿರಜಾ
ಸ್ನಾನತೋಲಿಂಗಂ ಸಿಕ್ತಂ ದ್ವಿಗುಣತೊಛ್ಛ್ರಿತಂ । ತಂ ದೃಷ್ಟ್ವಾದೇವದೇವೋಸೌ
ಲಿಂಗಂ ಸತ್ವಗುಣಾನ್ವಿತಂ । ವಿದಾರಯತಿ ಸರ್ವೇಶೋ ಸ್ವಖಡ್ಗೇ
ನಾಂತರಾತ್ಮವಾನ್ । ನೃಸಿಂಹರೂಪೀಭಗವಾನ್ ಕ್ರೀಡತೇಭಗವಾನ್ ಹರಿರಿತಿ"।
ತತ್ರೋಕ್ತರೀತ್ಯಾಲಿಂಗದೇಹಲಕ್ಷಣಾನಿಷ್ಟಸ್ಯಭಂಗಲಕ್ಷಣಂನಿವಾರಕತ್ವಮುಕ್ತಮ್
ಕಿನ್ನಾ ಮಅಭೀಷ್ಟದಾತೃತ್ವಮಸ್ಯಇತಿಶಂಕಾಪ್ರಾಪ್ತೌ ಅತ್ರೋಚ್ಯತೆ॥ವಾಸುದೇವಾ



ವರಣಾದವ್ಯಾಕೃತಾಕಾಶಸ್ಥ ನಾರಾಯಣವರಣ ಪ್ರಾಪ್ತಮುಕ್ತಾನಾಮಾನಂದೋ
ದ್ರೇಕಾಭೀಷ್ಟದಾ ತೃತ್ವಾದಭೀಷ್ಟೇತಿನಾಮಸಿದ್ಧಂ॥ತದುಕ್ತಂ **ಬ್ರಹತ್ಸಂಹಿತಾ
ಯಾಂ** "ಆನಂದೋದ್ರೇಕಕಾರ್ಯತ್ವಾತ್ ನಾರಸಿಂಹೋಹ್ಯಭೀಷ್ಟದಃ।ತಸ್ಮಾದ
ಭೀಷ್ಟನಾಮಾಸೌಸರ್ವಸ್ಮಾ ತ್ಪ್ರೇರ್ಯಈರಿತಃಇತಿ ॥ ಅನೇನನಾರಸಿಂಹಸ್ಯೈವ
ಅನಿಷ್ಟಪರಿಹಾರಕತ್ವೇಷ್ಟಫಲದಾತೃತ್ವಮಿತ್ಯುಭಯವಿಧ ಲಕ್ಷಣಂ ಸಿದ್ಧಮಭೂ
ದಿತಿಭಾವಃ ॥

## ೧ನೇ ಪದ್ಯದ ಎರಡನೆಯ ಕನ್ನಡಾರ್ಥ

ಶ್ರೀ ಮಜ್ಜಗನ್ನಾಥದಾಸವರ್ಯರು ಹಿಂದಿನ ಪಲ್ಲವಿ ಪದ್ಯದಿಂದ ವಿಷಯ
ಪ್ರಯೋಜನಾದಿಗಳನ್ನು ನಿರೂಪಿಸಿ ಪ್ರಮೇಯಗ್ರಂಥವನ್ನು ಮಾಡುವ ಉದ್ದಿಶ್ಯ
ವಾಗಿ ವಿಘ್ನಪರಿಹಾರದ ಸಲುದಾಗಿ ಪರಮಾಭೀಷ್ಠ ಮೂರುತಿಯಾದ ನರ
ಸಿಂಹನನ್ನು ನಮಿಸಿ ತಮ್ಮ ಅಭೀಷ್ಟವನ್ನು ಪ್ರಾರ್ಥಿಸುತ್ತಾರೆ– "ಶ್ರೀರಮಣಿ"
ಪದ್ಯದಿಂದ.

ಹೇ ನಾರಸಿಂಹನೆ! ನಿನ್ನನ್ನು ನಮಿಪೆ; ಎಮಗೆ ಮಂಗಳವ ಕರುಣಿಪುದು"
ಎಂದು ಸಮಸ್ತಾನ್ವಯ ಅದರಲ್ಲಿ ಮೊದಲು ವ್ಯಸ್ತಾನ್ವಯ ತಿಳಿಯಬೇಕು.
"ನಮಿಪೆ" ಎಂಬುದು ಉತ್ತಮಪುರುಷದ ಕ್ರಿಯಾಪದವಿರುವದರಿಂದ–
"ನಾನು" ಎಂಬ ಉತ್ತಮ ಪುರುಷದ ಏಕವಚನದ ಕರ್ತೃಪದವನ್ನು ಅಧ್ಯಾ
ಹಾರ ಮಾಡಿಕೊಳ್ಳಬೇಕು.

ಹರಿಯ ಅವತಾರಗಳು ಅನಂತ ವಿರುವದರಿಂದ ಮಿಕ್ಕ ಎಲ್ಲ ಅವತಾರ
ರೂಪಗಳನ್ನೂ ಮೂಲರೂಪ ಶ್ರೀನಾರಾಯಣನನ್ನೂ ಬಿಟ್ಟು ನರಸಿಂಹನನ್ನೇ
ಏಕೆ ನಮಸ್ಕರಿಸಬೇಕು ? ಎಂದು ಪ್ರಶ್ನೆಬರುತ್ತದೆ. ಅದಕ್ಕೆ ಮೊದಲನೆಯ
ವ್ಯಾಖ್ಯಾನದಲ್ಲಿ ಹೇಳಿದಂತೆ, ಪರಮಾಭೀಷ್ಠನೂ, ಆಧಿಕಾರಿಕನೂ ಅನಿಷ್ಟನಿವಾ
ರಕನೂ, ಇಷ್ಟಪ್ರಾಪಕನೂ, ಮತ್ತು ಸರ್ವಸ್ವರೂಪಸ್ಥ ಬಿಂಬರೂಪನೂ ಆಗಿರುವ
ದರಿಂದ ಅವನಿಗೆ ವಂದನವು ಯುಕ್ತವಾದುದೆಂದು ತಿಳಿಯಬೇಕು. ಸಾತ್ವಿಕ
ರಿಗೆ ಅನಿಷ್ಟವೆಂದರೆ–ವಿರಜಾಸ್ನಾನದಿಂದ ದ್ವಿಗುಣವಾಗಿ ಬೆಳದುನಿಂತಿರುವ
ಲಿಂಗದೇಹ; ಅದನ್ನು ನರಸಿಂಹನು ತನ್ನ ಖಡ್ಗದಿಂದಸೀಳಿ ಲಿಂಗದೇಹಭಂಗ
ಮಾಡುವನಾದುದರಿಂದ ಅನಿಷ್ಟನಿವಾರಕನೆಂದು ತಿಳಿಯಬೇಕು. ವಾಸುದೇವಾ

ವರಣದಿಂದ–ಅವ್ಯಾಕೃತಾಕಾಶದಲ್ಲಿರುವ ಶ್ರೀ ನಾರಾಯಣ ಆವರಣಕ್ಕೆ ಬಂದ ಮುಕ್ತರಿಗೆ ಆನಂದೋದ್ರೇಕಮಾಡುವವನು ಆದುದರಿಂದ ಅಭೀಷ್ಟದಾತೃನೆಂದು ತಿಳಿಯಬೇಕು. ಈ ಆನಂದೋದ್ರೇಕ ಮಾಡಿಸಿ ಸರ್ವಾಭೀಷ್ಟವನ್ನು ಪೂರೈಸುವದರಿಂದ ಅಭೀಷ್ಟನೂ ಅತ್ಯಂತ ಪ್ರಿಯತಮನೂ ಆಗುತ್ತಾನೆ" ಎಂಬ ಪ್ರಮಾಣದಂತೆ ಉಭಯ ಫಲದಾತೃತ್ವವನ್ನು ತಿಳಿಯಬೇಕಾಗಿದ್ದದ್ದು.

## ತಾಮ್ರಪರ್ಣೀಯಾ

**ನನುನಾರಸಿಂಹಸ್ಯಾ ಲೌಕಿಕ ವಸ್ತುತ್ವಾತ್** ಲಕ್ಷಣೋಪದೇಶಮಂತರಾಜ್ಞಾತುಮಶಕ್ಯತ್ವಾತ್ ಗಗನಾರವಿಂದ ಕಲ್ಪತಾಸ್ಯಾದತೋಲಕ್ಷಣಾನ್ಯಾಹ ॥ ॥**ಶ್ರೀ ರಮಣೀತಿ**॥ "ಶ್ರೀರಮಣಿ ಕರಕಮಲ ಪೂಜಿತ ಚಾರುಚರಣ ಸರೋಜೇತ್ಯಾದಿ ಚತುರ್ಭಿರ್ವಿಶೇಷಣೈಃ ನಾರಸಿಂಹ ಶಬ್ದೋಕ್ತಗುಣಾನ್ ವಿಶಿನಷ್ಟಿ। ನವಿದ್ಯಂತೇ ಅರಾಃ ದುಃಖಾಜ್ಞಾನಾದಿದೋಷಾಃ ಯಸ್ಯಾಃ ಸಾ ನಾರಾಲಕ್ಷ್ಮೀಃ ತಸ್ಯಾಃ ಸಿಂಹಃ ಪತಿಃ। ಸಿಂಹೋಧೀಶಪತಿಃ ಪ್ರಭುರಿತಿ ನಾನಾರ್ಥೇ। ನಾರಾಂ ಶ್ರೀವತ್ಸಾತ್ಮಿಕಾಂ ಲಕ್ಷ್ಮೀಂ ಸ್ವವಕ್ಷೋಮಂಡಲಗಾಂ ವಿಧಾಯ ಅನವರತಂ ಪಾತಿ ಪಾ ರಕ್ಷಣ ಇತಿಧಾತೋಃ ರಕ್ಷತೀತಿ ನಾರಸಿಂಹಃ। ಅನೇನಾಖಂಡ ಸಾಮ್ರಾಜ್ಯೈಶ್ವರ್ಯಾಧಿಪತ್ಯ ಮುಕ್ತಮ್। ನಾರಸಿಂಹಸ್ವರೂಪಭೂತ ವಿಜ್ಞಾನಮಯ ಸ್ತ್ರೀರೂಪಮೇವ ಶ್ರೀರಿತ್ಯುಚ್ಯತೇ ತಯಾಸಹ ರತಿವಿಷಯಕ **ಮಾ** ವಿಜ್ಞಾನಾಂಶಂ **ಣೀ** ಇ ಪ್ರಾಪಣಇತಿಧಾತೋಃಣಯತಿ ನಯತಿ ಪ್ರಾಪಯತೀತಿ ರಮಣೋ **ಆನಂದಮಯಃ**। ಸೋಸ್ಯಾಸ್ತೀತಿರಮಣೀ, ಶ್ರೀಚಸಾಮಣೀ ಚ ಶ್ರೀರಮಣೀ **ಶ್ರೀವತ್ಸರೂಪಿಣೀತ್ಯರ್ಥಃ**। ಶ್ರೀವತ್ಸಾತ್ಮನಾ ವಿದ್ಯಮಾನ ಚಿತ್ಪ್ರಕೃತಿಗತ **ವಿಜ್ಞಾನಮಯ ನಾರಾಯಣೀರೂಪಮೇವ ಶ್ರೀರುಚ್ಯತೇತ**।ದ್ಯಥೇತ್ಯಪೇಕ್ಷಾಯಾಮಾಹ।"ಅರ್ಧನಾರೀ ಪುಮಾಕಾರಂತಸ್ಯ ವಾಮಸ್ಥಿತಾನಿಚ। ಸ್ತ್ರೀರೂಪಾಣಿ ಚ ಸರ್ವಾಣಿ ವಿಷ್ಣೋರತ್ಯದ್ಭುತಾನಿಚ। ವಿಷ್ಣೋರ್ಯಾನಿಚ ಪುಂ ರೂಪಾಣ್ಯಾಸ್ಥಿತಾನ್ಯಸ್ಯ ದಕ್ಷಿಣ ಇತಿ ॥ **ಸತ್ತತ್ವಮಾಲೋಕ್ತ ರೀತ್ಯಾ** ಅನುಸಂಧೇಯಮ್॥ ಸ್ತ್ರೀಪುಮಾತ್ಮಕವಿಷ್ಣೋಃ ಪ್ರತಿಬಿಂಬಾ ಶ್ರೀವತ್ಸಾತ್ಮಿಕಾ। ತತ್ಪ್ರತಿಬಿಂಬಭೂತ ಶ್ರೀವತ್ಸಗತ ಸ್ತ್ರೀರೂಪಬಿಂಬತ್ವಾತ್ತಸ್ಯೈವ ಮುಖ್ಯತಯಾ ಶ್ರೀಶಬ್ದ ವಾಚ್ಯತ್ವಂ ಸಿದ್ಧಮ್ ॥ ತಸ್ಯಾಃ ಕರಾಃ ಅಂಶಾಃ



ಶ್ರೀಭೂ-ದುರ್ಗಾಭಿಧಾಃ। ತಾಸಾಂ ಕಮಲೈಃ ಕರೈಃ ಇತ್ಯರ್ಥಃ। "ಕಮಲಂಕಮಲೇ ಜಂಪ್ರೇಕಮಲಂ ಸಲಿಲೇಮೃಗೇತಿ ನಾನಾರ್ಥೇ ॥ ಶ್ರೀವತ್ಸಾಂತರ್ಗತ ಶ್ರೀರಮಣೀ ಶಬ್ದವಾಚ್ಯ ಸ್ವರೂಪಭೂತ ಶ್ರೀರೂಪಾತ್ಮಕ ವಿಜ್ಞಾನಮಯ ನಾರಾಯಣೀಕರ ಪೂಜಿತೌ-ಚಾರೂ=ಮನೋಹರೌ- ಚರಣೌ ತೌ ಸರೋಜೇಇವಯಸ್ಯ ಸಃತಥೋಕ್ತಃ। ತಸ್ಯ ಸಂಬೋಧನಂ। ಏತದ್‌ವಿಶೇಷಣದಾನೇನ ಅಖಂಡೈಶ್ವರ್ಯಾದಿ ಗುಣಪೂರ್ಣತ್ವ ಮುಕ್ತಮ್ ॥

## ಕನ್ನಡಾರ್ಥ

ಲೋಕವಿಲಕ್ಷಣನಾದ ನರಸಿಂಹನನ್ನು ಲಕ್ಷಣವಿಲ್ಲದೇ ತಿಳಿದುಕೊಳ್ಳುವದು ಅಸಾಧ್ಯವಾದುದರಿಂದ ಆಕಾಶ (ಕುಸುಮ) ಕಮಲದಂತೆ ನರಸಿಂಹನು ಅಪ್ರಸಿದ್ಧನಾಗಿರುತ್ತಾನೆ ಎಂಬ ಸಂಶಯಕ್ಕೆ ಶ್ರೀರಮಣಿಎಂಬ ಪದದಿಂದ ಉತ್ತರಿಸುತ್ತಾರೆ. ಶ್ರೀ ರಮಣಿ ಕರಕಮಲ ಪೂಜಿತ ಚಾರು ಚರಣ ಸರೋಜ ಎಂದು ಮುಂತಾದ ನಾಲ್ಕು ವಿಶೇಷಣಗಳಿಂದ ನಾರಸಿಂಹ ಶಬ್ದೋಕ್ತವಾದ ಗುಣಗಳನ್ನು ಹೇಳುತ್ತಾರೆ. (೧) ನಾರಾ=ಅಜ್ಞಾನಾದಿ ದೋಷದೂರಳಾದುದರಿಂದ ಲಕ್ಷ್ಮೀ. ಅವಳಿಗೆ ಸಿಂಹ= ಪತಿ ಅಥವಾ ಪ್ರಭು. (೨) **ನಾರಾಂ**= ಲಕ್ಷ್ಮಿಯನ್ನು **ಪತಿಃ**= ಪಾಲಿಸುವವನು, ಶ್ರೀ ವತ್ಸರೂಪಳಾದ ಶ್ರೀಯನ್ನು ವಕ್ಷಸ್ಥಳದಲ್ಲಿ ಇರುವಂತೆ ಪಾಲಿಸುವವನು. ಇದರಿಂದ ಅಖಂಡಅಷ್ಟೈಶ್ವರ್ಯಾಧಿಪತ್ಯವು ಹೇಳಲಾಗುತ್ತದೆ. ಇದೇ ಅರ್ಥವನ್ನು "ಶ್ರೀರಮಣಿ" ಎಂಬ ವಿಶೇಷಣದಿಂದ ವರ್ಣಿಸುತ್ತಾರೆ. (೧) ಶ್ರೀ=ನರಸಿಂಹ ಸ್ವರೂಪ ಭೂತವಾದ ವಿಜ್ಞಾನಮಯ ಸ್ತ್ರೀರೂಪ. ತನ್ನ ಈ ರೂಪದಿಂದ= ರ=ರತಿಸಂಬಂಧಿಯಾದ ಮಾ=ಜ್ಞಾನವನ್ನು ನಯತಿ=ಹೊಂದಿಸುವವನು ರಮಣನು; ಇಂಥ ರಮಣನನ್ನು ಹೊಂದಿದಳವಳು ರಮಣೀ. (೨) ಶ್ರೀ ರೂಪಳಾದ ರಮಣಿಯು ಶ್ರೀವತ್ಸರೂಪಿಣಿಯಾದವಳು. ಚಿತ್ಪ್ರಕೃತಿ ಎನಿಸಿದ ಮಹಾಲಕ್ಷ್ಮಿಯಲ್ಲಿರುವ ವಿಜ್ಞಾನಮಯವಾದ ನಾರಾಯಣನ ರೂಪಕ್ಕೆ ಶ್ರೀ ಎಂದು ಹೆಸರು. ಸತ್ತತ್ವರತ್ನ ಮಾಲೆಯಲ್ಲಿ ಅರ್ಧ ಸ್ತ್ರೀ-ಪುರುಷಾಕಾರದಿಂದ ಕೂಡಿದ ಭಗವಂತನ ಎಡ ಭಾಗದಲ್ಲಿರುವವೆಲ್ಲವೂ ಸ್ತ್ರೀರೂಪಗಳು; ಬಲಪಾರ್ಶ್ವದಲ್ಲರುವವು ಪುರುಷ ರೂಪಗಳು" ಎಂದು ಉಕ್ತನಾಗಿರುತ್ತದೆ. ಹೀಗೆ ಸ್ತ್ರೀ ಪುರುಷಾಕಾರನಾದ

ನಾರಾಯಣನಿಗೆ ಶ್ರೀವತ್ಸ ರೂಪಳಾದ ಲಕ್ಷ್ಮಿಯು ಪ್ರತಿಬಿಂಬಳಾಗಿರುತ್ತಾಳೆ. ಬಿಂಬಾತ್ಮಕವಾದ ಪರಮಾತ್ಮನ ರೂಪವೇ ಶ್ರೀ ಶಬ್ದಕ್ಕೆ ಮುಖ್ಯ ವಾಚ್ಯ. ಪ್ರತಿಬಿಂಬಳಾದುದರಿಂದ ಲಕ್ಷ್ಮಿಯೂ ವಾಚ್ಯಳು.

ಶ್ರೀ ರಮಣಿಯ ಕರಗಳು= ಶ್ರೀ ಲಕ್ಷ್ಮಿಯ ಅಂಶಗಳು— ಶ್ರೀ ಭೂ ದುರ್ಗಾರೂಪಗಳು. ಇವರ ಕಮಲ=ಕಮಲದಂತಿರುವ ಕರಗಳು; ಇದರಿಂದ ಪೂಜಿತವಾದ ಮನೋಹರ ಸರೋಜದಂತಿರುವ ಚರಣಗಳುಳ್ಳವನು, ಎಂದು ಸಮಗ್ರ ವಿಶೇಷಣದ ಅರ್ಥ. ಅಂದರೆ— ಶ್ರೀ ವತ್ಸಾಂತರ್ಗತ ಶ್ರೀಮಣೀ ನಾಮಕನಾದ ಶ್ರೀರೂಪಳಾದ ವಿಜ್ಞಾನಮಯ ನಾರಾಯಣೀ ಕರಕಮಲ ಪೂಜಿತ ಎಂದು ಮುಂತಾಗಿ ತಿಳಿಯಬೇಕು.

(೨) ಶ್ರೀ ಭೂ ದುರ್ಗಾ ಇವರ ಕರಕಮಲ ಪೂಜಿತ ಎಂದು ಮುಂತಾಗಿ ಎರಡನೆಯ ಅರ್ಥ.

ಈ ವಿಶೇಷಣದಿಂದ ಸಮಗ್ರೈಶ್ವರ್ಯಾದಿ ಗುಣಪೂರ್ಣತೆಯು ಉಕ್ತವಾಗುತ್ತದೆ.

### ತಾಮ್ರಪರ್ಣೀಯಾ

**ಬ್ರಹ್ಮ ಸಮೀರವಾಣಿ ಫಣೀಂದ್ರವೀಂದ್ರ ಭವೇಂದ್ರಮುಖವಿನುತೇತ್ಯನೇನ** ಬ್ರಹ್ಮಾದೀನಾಂ ತತ್ವೇಶತ್ವಾತ್ ಹರೇಸ್ತದ್ವಂದ್ಯತ್ವೇನ ಜಗತ್ಪಾಲನತ್ವಾದಿಗುಣಪೂರ್ಣತ್ವಮುಕ್ತಮ್ । ಪಾಲನತ್ವಗುಣಪೂರ್ಣತ್ವಾಭ್ಯಾಂ ಯಥಾ ಸಂಭವಂ ಸೃಷ್ಟ್ಯಾದಿಕಮುಪ್ಯೂಹನೀಯಮ್ ।“ ಜನ್ಮಾದ್ಯಸ್ಯತ ಇತಿ ಜನ್ಮಾಧಿಕರಣೋಕ್ತಂ ” ಜಗಜ್ಜನ್ಮಾದ್ಯಷ್ಟಕಂ ಪ್ರತಿಪಾದ್ಯತೇ ಅನೇನೈವ ವಿಶೇಷಣೇನ ।

### ಕನ್ನಡಾರ್ಥ

**ಬ್ರಹ್ಮ ಸಮೀರವಾಣಿ ಫಣೀಂದ್ರ ವೀಂದ್ರ ಭವೇಂದ್ರ ಮುಖ ವಿನುತ** = ಈ ವಿಶೇಷಣದಿಂದ “ ಬ್ರಹ್ಮಾದಿ ಸಕಲ ತತ್ವಾಭಿಮಾನಿಗಳಿಂದ ನಮಸ್ಕೃತನು ॥ ಎಂದು ಹೇಳಿರುವದರಿಂದ ತತ್ವೇಶರಲ್ಲಿ ಅಂತರ್ಯಾಮಿಯಾಗಿ ನಿಂತು ಜಗತ್ತಿನ ಪಾಲನಾದಿ ಕಾರ್ಯಗಳನ್ನು ಮಾಡುವವನು ” ಎಂದು ಹೇಳಿದಂತಾಗುತ್ತದೆ. ಹೀಗೆ ಜಗತ್ಪಾಲಕತ್ವ ಹಾಗೂ ಪೂರ್ಣತ್ವ ಇವುಗಳಿಂದ



ಜನ್ಮಾಧಿಕರಣದಲ್ಲಿ ಹೇಳಿದ ಸಕಲ ಲಕ್ಷಣಗಳೂ ಉಕ್ತವಾಗಿರುತ್ತವೆ ಎಂದು ಊಹಿಸಬೇಕು.

### ತಾಮ್ರಪರ್ಣೀಯಾ

**“ನೀರಜಭವಾಂಡೋದಯಸ್ಥಿತಿಕಾರಣನೆ”** ಇತಿ । ನೀರಾಜ್ಜಾಯತೇ ಇತಿ ನೀರಜಂ ಕಮಲಂ । ತಸ್ಮಾದ್ಭವತೀತಿ ನೀರಜಭವೋ= ಬ್ರಹ್ಮಾ, ತಸ್ಯಾಂಡಂ ಬ್ರಹ್ಮಾಂಡಂ, ತಸ್ಯ- ಉದಯೋನಾಮ ಕೇಷಾಂಚಿಜ್ಜಡಾನಾಮ ಭೂತ್ವಾ ಭಾವಿತ್ವಂ। ಕೇಷಾಂಚಿಜ್ಜಡಾನಾಮುಪಚಯಃ । ಕೇಷಾಂಚಿಜ್ಜೀವಾನಾಂ ಶರೀರಸಂಬಂಧಃ । ಕೇಷಾಂಚಿಜ್ಜೀವಾನಾಂ ಪರಾಧೀನವಿಶೇಷಾವಾಪ್ತಿಃ ! ಸ್ಥಿತಿಃ ಪಾಲನಂ । ಸೃಷ್ಟಿಪಾಲನಯೋರ್ನಿಮಿತ್ತಕಾರಣಮ್ । ಉದಯಸ್ಥಿತಿಪದೋಪಲಕ್ಷಣಯಾ, ನಿಯಮನಜ್ಞಾನಾಜ್ಞಾನಬಂಧಾಃ ಗೃಹ್ಯಂತೇ ।

**ಕೈವಲ್ಯದಾಯಕೇ**ತ್ಯನೇನ ಮೋಕ್ಷದಾತೃತ್ವಮುಕ್ತಮ್ । ಅನೇನ ಜಗಜ್ಜನ್ಮಾದ್ಯಷ್ಟಕರ್ತೃತ್ವಂ ಸೂಚಿತಮ್। ಕುತ್ರ ದೃಷ್ಟಮಿತಿ ಚೇತ್ ಅತ್ರೋಚ್ಯತೇ। “ ಯತೋವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯಭಿಸಂವಿಶಂತೀತಿ ಶ್ರುತೇಃ ” ॥ “ ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ । ಸೃಷ್ಟಾ ಪಾತಾ ತಥೈವಾತ್ತಾ । ನಿಖಿಲಸ್ಯೈಕ ಏವತ್ವಿತಿ ಸ್ಮೃತಿ ಸದ್ಭಾವಾಚ್ಚಾಸ್ಯೈವ ಜಗತ್ಕಾರಣತ್ವಂ ನಾನ್ಯಸ್ಯ ॥

### ಕನ್ನಡಾರ್ಥ

**ನೀರಜಭವಾಂಡೋದಯ ಸ್ಥಿತಿ ಕಾರಣನೆ** । ನೀರಜ=ನೀರಿನಿಂದ ಜನಿಸಿದ್ದು, ಕಮಲ. ಆ ನೀರಜದ(ಕಮಲದ)ದಶೆಯೆಂದ ಜನಿಸಿದವನು, ನೀರಜಭವನು = ಚತುರ್ಮುಖ ಬ್ರಹ್ಮನು. ನೀರಜ ಭವಾಂಡವು = ಬ್ರಹ್ಮಾಂಡವು. ಇದಕ್ಕೆ ಉದಯ = ಉತ್ಪತ್ತಿ. ಇದು ಅನೇಕ ವಿಧ; ಕೆಲವು ಜಡಗಳಿಗೆ “ ಅಭೂತ್ವಾಭಾವಿತ್ವ, ” (ಪೂರ್ವದಲ್ಲಿ ಇರದೇ ಇದ್ದು, ಅನಂತರ ಇರುವಿಕೆಯನ್ನು ಹೊಂದುವದು. ) ಕೆಲ ಜಡಗಳಿಗೆ- ಬೆಳವಣಿಗೆಯು, (ಅಭಿವೃದ್ಧಿಯು) ಕೆಲಜೀವರಿಗೆ ಶರೀರ ಸಂಬಂಧವು; ಇನ್ನು ಕೆಲಚೇತನಗಳಿಗೆ ವಿಶಿಷ್ಟ ಪರಾಧೀನತೆಯ ಬರುವದು; ಹೀಗೆ ವಿವಿಧತರಹದ ಸೃಷ್ಟಿಯು ಉತ್ಪತ್ತಿಯೆನಿಸುವದು. ಸ್ಥಿತಿ = ಪಾಲನ. ಇವೆರಡಕ್ಕೂ ಹರಿಯುನಿಮಿತ್ತಕಾರಣನು. ಉದಯಸ್ಥಿತಿ

ಪದಗಳಿಂದ ಲಯ, ನಿಯಮನ, ಜ್ಞಾನ, ಅಜ್ಞಾನಬಂಧಗಳನ್ನು ಊಹಿಸ ತಕ್ಕದ್ದು. ( ಸಂಗ್ರಹಿಸಬೇಕು )

**ಕೈವಲ್ಯದಾಯಕ**– ಈ ಪದದಿಂದ ಮೋಕ್ಷದಾತನೆಂಬ ಅರ್ಥವು ಉಕ್ತವಾಗಿರುತ್ತದೆ. ಹೀಗೆ ಇವೆಲ್ಲ ವಿಶೇಷಣಗಳಿಂದ " ಯತೋವಾ ಇಮಾನಿ ಭೂತಾನಿ " "ಅಹಂ ಸರ್ವಸ್ಯ ಪ್ರಭವ" ಇತ್ಯಾದಿ ಶ್ರುತಿ ಸ್ಮೃತಿಗಳಿಂದ ಪ್ರಸಿದ್ಧ ವಾದ ಎಂಟು ಲಕ್ಷಣಗಳು ಪರಮಾತ್ಮನಿಗೆ ಇರುತ್ತವೆ ಎಂದು ಹೇಳಿದಂತಾ ಗುತ್ತದೆ.

## ತಾಮ್ರಪರ್ಣೀಯಾ

**ನಾರಾಯಣಸ್ಯೋಕ್ತಜಗಜ್ಜನ್ಮಾದಿಕಾರಣತ್ವಂ ಕಥಂ ನಾರ ಸಿಂಹಸ್ಯೋಚ್ಯತ ಇತ್ಯಾಕಾಂಕ್ಷಾಯಾಂ, ನಾರಸಿಂಹಸ್ಯೈವೋಚ್ಯತ ಇತ್ಯಾಹ** । "**ಯಸ್ತೇಮನ್ಯೋ ಇತಿ** ॥ ಕ್ರೋಧಾಭಿಮಾನಿರುದ್ರಾಂತರ್ಗತ ನಾರಸಿಂಹ ತ್ವಯೇದಂ ಜಗತ್ ಪುಷ್ಯತಿ=ಪೋಷಿತಂ ಭವತಿ। ಇದಿ ಪರಮೈಶ್ವರ್ಯ ಇತಿ ಧಾ ತೋ ೯ ಃ ಪರಮೈಶ್ವರ್ಯಶಾಲಿತ್ವಾದಿಯೋಗೇನೇಂದ್ರಶಬ್ದವಾಚ್ಯಃ ॥ ಕ್ರೀಡಾದಿಗುಣವಿಶಿಷ್ಟತ್ವೇನ ದೇವ ಶಬ್ದವಾಚ್ಯಃ। ಇಂದ್ರಿಯಾಗ್ನಿಷು ವಿಷಯ ಹೋತೃತ್ವಾತ್ ಹೋತೃನಾಮಕಃ । ಜೀವಸ್ವರೂಪಭೂತಜ್ಞಾನಾನಂದಯೋಃ ಅಜ್ಞಾನಪಟಲೇನಾಚ್ಛಾದನಕರ್ತೃತ್ವಾದ್ವರುಣಶಬ್ದವಾಚ್ಯಃ । ಸ್ವಾಪರೋಕ್ಷಜ್ಞಾ ನೇನಾವೃತಾಜ್ಞಾನಪಟಲನಿರಸನದ್ವಾರಾ ಸ್ವರೂಪಾನಂದೋದ್ರೇಕಕರ್ತೃತ್ವಾತ್ ವರುಣಶಬ್ದವಾಚ್ಯಃ । ಜಾತಂ ಸರ್ವಂವೇತ್ತೀತಿ ಜಾತವೇದಶಬ್ದವಾಚ್ಯಃ। ಇತಿ ಮನ್ಯುಸೂಕ್ತ ವ್ಯಾಖ್ಯಾನಾವಸರೇ **ನಾರಸಿಂಹಸ್ಯ ಸರ್ವಕರ್ತೃತ್ವ** ಸರ್ವಶಬ್ದ ವಾಚ್ಯತ್ವಾದ್ಯಮಿತಗುಣಪೂರ್ಣತ್ವಾಜ್ಜಗಜ್ಜನ್ಮಾದಿಕಾರಣತ್ವಂ ಸ್ವತಸ್ಸಿದ್ಧಮ್॥

ಪರಮೈಶ್ವರ್ಯಶಾಲಿತ್ವಯೋಗೇನ ಇಂದ್ರ ಇತ್ಯಸ್ಯ ಶ್ರೀ ರಮಣಿ ಕರ ಕಮಲಪೂಜಿತಚಾರುಚಾರಣಸರೋಜೇತಿವಿಶೇಷಣಂ ವಿವರಣಮ್ ॥ **ವರುಣ ಇತ್ಯಸ್ಯ** ಬ್ರಹ್ಮ ಸಮೀರವಾಣಿ ಫಣೀಂದ್ರವೀಂದ್ರ ಭವೇಂದ್ರ ಮುಖ ವಿನುತೇತಿ ವಿಶೇಷಣಂ ವಿವರಣಮ್ ।। **ಜಾತವೇದ ಇತ್ಯಸ್ಯ**- ನೀರಜಭ ವಾಂಡೋದಯಸ್ಥಿತಿಕಾರಣನೆ ಇತ್ಯೇತದ್ವಿಶೇಷಣಂ ವಿವರಣಮ್ ॥ ಮನ್ಯೋ ಇತ್ಯಸ್ಯ ನಾರಸಿಂಹೇತಿ ಪದಂ ವಿವರಣಮ್॥ ಹೇ ನಾರಸಿಂಹ ! ತ್ವ ಮಸ್ಮಾಕಂ,ಮಂಗಳಂ=ಜ್ಞಾನಂಗತಿಂಚ ಲೀಲಾಂ ದದಾತೀತಿ ಮಂಗಳಂ, ತವ



ಸ್ವರೂಪಂ ದೇಹಿ ॥ ಅನೇನ ತ್ವದಪರೋಕ್ಷಜ್ಞಾನದ್ವಾರಾ ಮೋಕ್ಷಂ ಗತಿಂ ದೇಹೀತಿ ಫಲಿತಾಭಿಪ್ರಾಯಃ । ಪರ್ಯಾಪ್ತೋಯಂ ಭಗವತ್ಪರಾರ್ಥಃಶ್ರೀಗುರು ರಾಜಾರ್ಪಣಮಸ್ತು ॥

## ಕನ್ನಡ ಅರ್ಥ

ಇನ್ನು ನಾರಾಯಣವೆಂಬ ರೂಪಕ್ಕೆ ಹೇಳಲ್ಪಟ್ಟ ಜಗತ್ಕಾರಣತ್ವವು ನರ ಸಿಂಹನಿಗೆ ಹೇಗೆ ಸಲ್ಲುವದು ? ಎಂದು ಸಂಶಯವು ಬರುತ್ತದೆ. ಮನ್ಯು ಸೂಕ್ತದಲ್ಲಿ ಮನ್ಯುನಾಮಕ ನರಸಿಂಹನಿಗೆ ಈ ಲಕ್ಷಣವು ಉಕ್ತವಾಗಿರುತ್ತದೆ; ಆದುದರಿಂದ ಕೆಲ ಋಕ್‌ಗಳನ್ನು ಅರ್ಥ ಸಹಿತವಾಗಿ ಉದಾಹರಿಸುತ್ತೇವೆ.
**ಹೇಮನ್ಯೋ**=ಕ್ರೋಧಾಭಿಮಾನಿ ರುದ್ರಾಂತರ್ಗತ ನರಸಿಂಹ ! **ತ್ವಯಾ**= ನಿನ್ನಿಂದ, **ಇದಂ ಜಗತ್**=ಈ ವಿಶ್ವವು, **ಪುಷ್ಯತಿ**=ಪೋಷಣೆಯನ್ನು ಹೊಂದು ತ್ತದೆ. **ಮನ್ಯುಃ**=ಮನ್ಯುನಾಮಕ ನರಸಿಂಹನು **ಇಂದ್ರಃ**=ಪರಮೈಶ್ವರ್ಯ ಶಾಲಿಯಾದುದರಿಂದ ಇಂದ್ರಶಬ್ದಮುಖ್ಯವಾಚ್ಯನು. **ದೇವಃ** ಕ್ರೀಡಾ ಮುಂತಾದಗುಣವಂತನಾದುದರಿಂದ ದೇವ ಶಬ್ದ ವಾಚ್ಯನು. ಅವನೇ **ಹೋತಾ**=ಇಂದ್ರಿಯಾಗ್ನಿಗಳಲ್ಲಿ ವಿಷಯ ಹವಿಸ್ಸನ್ನು ಹಾಕುವದರಿಂದ ಹೋತೃ ಶಬ್ದವಾಚ್ಯನು. **ವರುಣಃ**=ಜೀವರಿಗೆ ನೈಜಾನಂದವನ್ನೀಯುವ ಲೀಲೆಗಳೆಂಬ ಆವರಣದಿಂದ ಅವರನ್ನು ಆಚ್ಛಾದಿಸುವದರಿಂದ ವರುಣಶಬ್ದವಾಚ್ಯನು. ಅಥವಾ ಸ್ವರೂಪಭೂತ ಆನಂದವನ್ನು ಅಧಿಕಗೊಳಿಸುವವನು. **ಜಾತವೇದಃ**=ಸರ್ವ ವನ್ನು ತಿಳಿಯುವವನಾದುದರಿಂದ ಜಾತವೇದ ಶಬ್ದ ಮುಖ್ಯ ವಾಚ್ಯನು.

ಹೀಗೆ ಮನ್ಯುಸೂಕ್ತವ್ಯಾಖ್ಯಾನದಲ್ಲಿ ಶ್ರೀ ನಾರಸಿಂಹನಿಗೆ ಸರ್ವ ಕರ್ತೃತ್ವ, ಸರ್ವಶಬ್ದವಾಚ್ಯತ್ವ ಮುಂತಾದಅಮಿತಗುಣಪರಿಪೂರ್ಣತ್ವವು ಹೇಳಲ್ಪಟ್ಟಿರುತ್ತದೆ. ಆದುದರಿಂದ ಜನ್ಮಾದ್ಯಷ್ಟಕಾರಣತ್ವವು ನರಸಿಂಹನಿಗೆ ಅಬಾಧಿತವಾದ ಪ್ರಮಾಣಗಳಿಂದ ಸಿದ್ಧವಿರುತ್ತದೆ.

"ಇಂದ್ರ"ಶಬ್ದಾರ್ಥವನ್ನು "ಶ್ರೀರಮಣಿ ಕರಕಮಲ ಪೂಜಿತ ಚಾರುಚರಣ ಸರೋಜ"ವೆಂಬ ವಿಶೇಷಣವು ವಿವರಿಸುತ್ತದೆ. "ವರುಣ" ಶಬ್ದಾರ್ಥವನ್ನು "ಬ್ರಹ್ಮ ಸಮೀರವಾಣಿ ಫಣೀಂದ್ರ ವೀಂದ್ರ ಭವೇಂದ್ರ ಮುಖವಿನುತ"ವೆಂಬ ಪದವು ವಿವರಿಸುತ್ತದೆ. ಜಾತವೇದ ಎಂಬುವದನ್ನು " ನೀರಜ ಭವಾಂಡೋ

ದಯ ಸ್ಥಿತಿ ಕಾರಣನೆ " ಎಂಬುದು ವಿವರಿಸುತ್ತದೆ. ಮನ್ಯೊ ಎಂಬುದನ್ನು ನಾರಸಿಂಹ ಎಂಬುದು ವಿವರಿಸುತ್ತದೆ. ಹೇ ನಾರಸಿಂಹನೇ! ನೀನು ನಮಗೆ ಮಂಗಲವ=(ಮಂ=ಜ್ಞಾನ, ಗಂ=ಗತಿ= ಲಂ= ಲಾತಿ ಕೊಡುವವ) ಜ್ಞಾನಗತಿ ದಾಯಕನಾದುದರಿಂದ ಪರಮ ಮಂಗಲರೂಪವಾದ ನಿನ್ನ ಸ್ವರೂಪವನ್ನು ಕರುಣಿಪುದು=ತೋರಿಸಿಕೊಡು! ಎಂದು ಅರ್ಥ; ಅಂದರೆ– ಅಪರೋಕ್ಷ ಜ್ಞಾನವನ್ನು ಕೊಟ್ಟು ಮೋಕ್ಷವೆಂಬ ಗತಿಯನ್ನು ಕೊಡು ! ಎಂದು ಫಲಿತ ಅಭಿಪ್ರಾಯವು.

**ಮುಖ್ಯಪ್ರಾಣಗತಂ ವಿಷ್ಣುಂ ಚಿಂತಯೇನ್ಮನಸಾ ಬುಧಃ** ॥ ತಂ ವಿನಾ ಹರಿಧ್ಯಾನಂ ತು ವೃಥಾಭವತಿ ನಾನ್ಯಥಾ ॥ ಇತಿ ಪ್ರಮಾಣೋಕ್ತತ್ವಾದಧಿಷ್ಠಾನಭೂತಮುಖ್ಯ ಪ್ರಾ ಣ ಮ ಂ ತ ರಾ ಜಗನ್ನಾಥಾರ್ಯಕೃತಬಿಂಬೋಪಾಸನಸ್ಯ ವ್ಯರ್ಥತಾಸ್ಯಾದಿತಿಪ್ರಾಪ್ತಶಂಕಾನಿರಾಸಾಯ ತದೇವ ಪದ್ಯಂ **ವಾಯುಪರತ್ವೇ**ನಾನುವದತೀತ್ಯಾಹ **ಶ್ರೀ ಮ ಣೀ ತಿ**॥ **ನೃಸಿಂಹ ಇತ್ಯನೇನ ಮುಖ್ಯಪ್ರಾಣ ಇತ್ಯರ್ಥಃ**॥ ತದ್ಯಥಾ "ರೀಙ್ ಕ್ಷಯೇ" ಇತಿಧಾತೋಃ ಸ್ವರೂಪತೋ ನಾಶಶೂನ್ಯತ್ವಾನ್ನಾರಾಃ ಜೀವಾಃ, ತೇಷಾಂ ಸಿಂಹಃ ಶ್ರೇಷ್ಠ ಇತ್ಯರ್ಥಃ। ಸರ್ವಜೀವೋತ್ತಮತ್ವಾತ್। ಹೇ ಮುಖ್ಯ ಪ್ರಾಣ!ತ್ವಾಂ ನಮಾಮಿ॥ ತ್ವಮಸ್ಮಾಕಂ " ಮಂಗಳಂ ಭಗವಾನ್ ವಿಷ್ಣುರ್ಮಂಗಳಂ ಮೋಕ್ಷ ಉಚ್ಯತ " ಇತ್ಯುಕ್ತದಿಶಾ ಮಂಗಳಂ ಬಿಂಬರೂಪಿಣಂ ದೇಹಿ। ತದನಂತರಂ ಮೋಕ್ಷಂದೇಹಿ। **ಕೀದೃಶೋಯಂ ಮುಖ್ಯಪ್ರಾಣಃ ? ತಸ್ಯಮೋಕ್ಷದಾತೃತ್ವಂಕಥಮಿತಿ ಪ್ರಾಪ್ತೇ** "ವಿಷ್ಣುರ್ಹಿದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯೇತಿ" ತಾತ್ಪರ್ಯೋಕ್ತತ್ವಾದ್ವಿಷ್ಣ್ವಾಜ್ಞಯಾ ವಾಯೋರ್ಮೋಕ್ಷದಾತೃತ್ವಸದ್ಭಾವಾನ್ಮುಖ್ಯ ಪ್ರಾಣಃ ಮೋಕ್ಷದಾತೇತಿಸಿದ್ಧೋಯಮರ್ಥಃ। **ನನು ವಾಯೋಃಸಲಿಂಗತ್ವಾತ್ ಸ್ವರೂಪದೇಹವ್ಯಾಪ್ತ್ಯಭಾವಾತ್** ವಾ ಯ್ವ ಂ ತ ರ್ಯಾ ಮಿ ತ್ವೇ ನೋಪಾಸನಸ್ಯಾಸಂಗತ್ವಾತ್ ವಾಯುಸ್ಥತ್ವೇನ ಕಿಂ ಪ್ರಯೋಜನಮಿತಿ ಪ್ರಾಪ್ತೇ ತನ್ನಿರಾಸಯತಿ ॥ **ಪವಮಾನಾಭಿಧೋವಾಯುಃ** ಜೀವಾನಾಂಚ ಸ್ವರೂಪಗಃ। ತತ್ವದೇವಾಭಿಧಾನೇನ ತತ್ವಕಾರ್ಯಾಣಿ ನಿತ್ಯಶಃ। ಕುರ್ವನ್ ಬಿಂಬ ಇವ ದೇವೋಹರೇರಾಜ್ಞಾನುಸಾರತಃ " ಇತಿ **ಪ್ರಕಾಶಸಂಹಿತೋಕ್ತ**ದಿಶಾ



ಸ್ವರೂಪದೇಹೇ ವಾಯೋರ್ವ್ಯಾಪ್ತಿಸದ್ಭಾವಾತ್ ಜಗನ್ನಾಥದಾಸವರ್ಯೇಣ ಮುಖ್ಯಪ್ರಾಣಾಧಿಷ್ಠಾನಸ್ಥಿತಸ್ವಬಿಂಬೋಪಾಸನಂ ಕೃತಮಿತಿಜ್ಞಾತವಮ್॥

**ಕನ್ನಡಾರ್ಥ**

"ಮುಖ್ಯ ಪ್ರಾಣಗತನಾದ ನಾರಾಯಣನನ್ನು ಮನಸ್ಸಿನಿಂದ ಚಿಂತಿಸಬೇಕು" ಇಂತು ಮುಂತಾಗಿರುವ ಪ್ರಮಾಣಗಳಲ್ಲಿ ಹೇಳಿರುವಂತೆ ಅಧಿಷ್ಠಾನಭೂತನಾದ ಮುಖ್ಯ ಪ್ರಾಣನಿಲ್ಲದೇ ಶ್ರೀ ಜಗನ್ನಾಥದಾಸರ ಬಿಂಬೋಪಾಸನೆಯು ವ್ಯರ್ಥವಾಗುತ್ತದೆ ಎಂಬ ಸಂದೇಹವನ್ನು ನಿರಾಕರಿಸಲು ಈ ಪದ್ಯವನ್ನು ಅಧಿಷ್ಠಾನನಾದ ಶ್ರೀ ವಾಯುಪರವಾಗಿ ವಿವರಿಸಬೇಕು. ಹೇಗಂದರೆ—

**ನಾರಾಃ**= ನಾಶರಹಿತರಾದ ಜೀವರು, ಅವರಲ್ಲಿ **ಸಿಂಹ**— ಶ್ರೇಷ್ಠನು, ಆದುದರಿಂದ **ಹೇ ನಾರಸಿಂಹ**=ಸರ್ವಜೀವೋತ್ತಮನಾದ ಮುಖ್ಯ ಪ್ರಾಣನೇ! ನಿನ್ನನ್ನು ನಮಿಪೆ ನಮಸ್ಕರಿಸುವೆ. ನೀನು ನಮಗೆ **ಮಂಗಲವ**= "ಮಂಗಲಂ ಭಗವಾನ್ ವಿಷ್ಣುಃ ಮಂಗಲಂ ಮೋಕ್ಷ ಉಚ್ಯತೆ" "ಎಂದು ಹೇಳಿದಂತೆ ಮಂಗಲಂ ಬಿಂಬರೂಪಿಯಾದ ಶ್ರೀವಿಷ್ಣುವಿನನ್ನು, ಕರುಣಿಪುದು=ಕೊಡುವದು, ಎಂದು ಖಂಡಾನ್ವಯ। ಅನಂತರ ಮೋಕ್ಷವನ್ನು ಕೊಡು." ಮುಖ್ಯ ಪ್ರಾಣನು ಎಂಥವನು ? ಅವನು ಮೋಕ್ಷದಾತನು ಹೇಗೆ ? ಎಂದರೆ- ಪರಮಾತ್ಮನೇ ಸ್ವತಂತ್ರನಾಗಿ ಮೋಕ್ಷಕೊಡತಕ್ಕವನು; ಅವನ ಆಜ್ಞೆಯಿಂದ ಅವನ ಇಚ್ಛಾನುಸಾರವಾಗಿ ವಾಯುವೂ ಕೊಡುತ್ತಾನೆ. ಹೀಗೆ ಪ್ರಮಾಣವಿರುವದರಿಂದ ವಾಯುದೇವನಿಗೆ ಮೋಕ್ಷದಾತೃತ್ವವು ಸಿದ್ಧವಾಗಿರುತ್ತದೆ. ವಾಯುದೇವರಿಗೆ ಲಿಂಗದೇಹವಿರುವುದರಿಂದ ಜೀವರ ಸ್ವರೂಪ ದೇಹದಲ್ಲಿ ವ್ಯಾಪ್ತಿಯಿಲ್ಲವಾದುದರಿಂದ- ಅಪೂರ್ಣವ್ಯಾಪ್ತನಾದ ವಾಯುವಿನಲ್ಲಿ ಪರಮಾತ್ಮನನ್ನು ಉಪಾಸಿಸುವದು ವ್ಯರ್ಥವೆಂದು ಮತ್ತೊಂದು ಆಕ್ಷೇಪವು ಬರುತ್ತದೆ. ಅದಕ್ಕೆ "ಪವಮಾನನೆಂಬ ವಾಯುವು ಜೀವರ ಸ್ವರೂಪಾಂತರ್ಗತನು; ತತ್ವದೇವತೆಗಳಲ್ಲಿ ಆಯಾ ನಾಮದಿಂದ ತತ್ವಕಾರ್ಯಗಳನ್ನು ಮಾಡುತ್ತ ಬಿಂಬನಾದ ಹರಿಯ ಆಜ್ಞೆಯಂತೆ ಅವನಂತೆಯೇ ಅವರ ಸ್ವರೂಪ ದೇಹದಲ್ಲಿ ವಾಸಿಸುತ್ತಾನೆ." ಎಂದು ಪ್ರಕಾಶ ಸಂಹಿತೆಯಲ್ಲಿ ಹೇಳಿರುತ್ತದೆ. ಆದುದರಿಂದ "ಸ್ವರೂಪ ದೇಹದಲ್ಲಿ ವ್ಯಾಪ್ತಿಯಿರುವದರಿಂದ ಜಗನ್ನಾಥದಾಸವರ್ಯರು ಮುಖ್ಯ ಪ್ರಾಣಾಧಿಷ್ಠಾನ

ದಲ್ಲಿ ಬಿಂಬೋಪಾಸನೆಯನ್ನು ಮಾಡಿರುತ್ತಾರೆ" ಎಂದು ಉತ್ತರವನ್ನು ತಿಳಿಯಬೇಕು.

### ತಾಮ್ರಪರ್ಣೀಯಾ

**ನನು ವಾಯೋಃಸ್ವರೂಪದೇಹಸ್ಥತ್ವೇಪಿ ಶ್ರೀರಮಣೀಕರಕಮಲ ಪೂಜಿತ ತತ್ವಂ ಕಥಂ ಸಂಭವತೀತ್ಯತ ಆಹ** "ಶ್ರೀರಮಣೀತಿ ॥ ಶ್ರೀಃ ಜ್ಞಾನಸುಖ-ಸೌಂದರ್ಯ-ಭಾಗ್ಯೈಶ್ವರ್ಯ-ಕಾಂತಿಷ್ವಿತಿನಾನಾರ್ಥಮಂಜರ್ಯೋಕ್ತದಿಶಾ ಜ್ಞಾನ ಸುಖಾದಿ ಗುಣವಿಶಿಷ್ಟತ್ವಾತ್ ಶ್ರೀ ಶಬ್ದವಾಚ್ಯಾ ರಮಣೀ ಭಾರತೀ,ತತ್ಕರಕಮಲಾಭ್ಯಾಂ ಪೂಜಿತೌ-ಚಾರೂಮನೋಹರೌ, ಚರಣೌ ತಾ ಸರೋಜೇಇವಯಸ್ಯಸತಥೋಕ್ತಃ। ತಸ್ಯಸಂಬೋಧನಂ॥ **ಭಾರತ್ಯಾಃ ಶ್ರೀಶಬ್ದ ವಾಚ್ಯತ್ವಂ** ಕುತ್ರೋಕ್ತಮಿತಿಪ್ರಾಪ್ತೇ ಪರಿಹರಿತಿ ॥ "ಪರಶುಕ್ಲತ್ರಯತ್ವಾಚ್ಚ ಭಾರತೀ ಶ್ರೀರುದಾಹೃತೇತಿಪ್ರಕಾಶಸಂಹಿತೋಕ್ತ್ಯಾ "ಸತ್ವಪ್ರಾಚುರ್ಯ ದೇಹತ್ವಾತ್ಪರಶುಕ್ಲತ್ರಯಾಸ್ಮೃತೇತಿ, ವಾಯೋಶ್ಚ ಸುಖರೂಪತ್ವಾತ್ತತ್ಪತ್ನೀ ಶ್ರೀರುದಾಹೃತೇತಿಚ ಬಹುಪ್ರಮಾಣಸದ್ಭಾವಾದ್ಭಾರತ್ಯಾಃ ಶ್ರೀಶಬ್ದವಾಚ್ಯತ್ವಂ ಸುದೃಢಂ ಜ್ಞಾತವ್ಯಮ್ ॥

### ಕನ್ನಡಾರ್ಥ

ಮೇಲಿನ ಆಧಾರಗಳಿಂದ ವಾಯುದೇವನಿಗೆ ಸ್ವರೂಪ ದೇಹದಲ್ಲಿ ವ್ಯಾಪ್ತಿಯು ಸಿದ್ಧವಾಗಲಿ; ಆದರೆ "ಶ್ರೀರಮಣಿ ಕರಮಲ ಪೂಜಿತ" ಎಂಬುದು ಹೇಗೆ ಸಮನ್ವಯವಾಗುತ್ತದೆ ? ಎಂದರೆ "**ಶ್ರೀರಮಣಿ**" ಎಂಬಲ್ಲಿ, ಶ್ರೀಜ್ಞಾನ ಸುಖ, ಸೌಂದರ್ಯ, ಭಾಗ್ಯ, ಐಶ್ವರ್ಯ, ಕಾಂತಿಗಳಿಗೆ ಶ್ರೀ ಎನ್ನುವರು. (ನಾನಾರ್ಥಮಂಜರೀ) ಈ ಗುಣಗಳಿಂದ ಸಹಿತಳಾಗಿರುವ ರಮಣಿ ಎಂದರೆ-ಭಾರತೀ ದೇವಿಯವರು, ಇವರ ಕರಕಮಲಗಳಿಂದ ಪೂಜಿತವಾದ ಮನೋಹರ ಸರೋಜ ಸದೃಶವಾದ ಚರಣಗಳುಳ್ಳವನೇ ! ಎಂದು ಅರ್ಥವನ್ನು ಮಾಡಬೇಕು. ಅಂದರೆ ಈ ವಿಶೇಷಣವು ಸಮನ್ವಿತವಾಗುತ್ತದೆ.

"ಪರಶುಕ್ಲತ್ರಯದಲ್ಲಿ ಅಂತರ್ಗತಳಾದುದರಿಂದ ಭಾರತೀದೇವಿಯೂ ಶ್ರೀ ಶಬ್ದವಾಚ್ಯಳು," ಎಂಬ ಪ್ರಕಾಶ ಸಂಹಿತೆಯ ವಚನದಿಂದಲೂ, "ಪ್ರಚುರವಾದ ಸತ್ವದೇಹದವಳಾದುದರಿಂದ ಪರಶಕ್ಲತ್ರಯದಲ್ಲಿದ್ದವಳೂ- ಸುಖರೂಪ



ರಾದ ಶ್ರೀವಾಯುದೇವರ ಪತ್ನಿಯೂ ಆದ ಭಾರತೀದೇವಿಯೂ ಶ್ರೀ ಶಬ್ದವಾಚ್ಯಳು;" ಎಂದು ಮುಂತಾದ ಬಹು ಪ್ರಮಾಣಗಳಿಂದಲೂ ಸಿದ್ಧವಾಗುತ್ತದೆ.

### ತಾಮ್ರಪರ್ಣೀಯಾ

ನೀರಜ ಭವಾಂಡೋಸ್ಥಿತಿ ಕಾರಣತ್ವಂ ಕಥಂ ಘಟತ ಇತಿ ಪ್ರಾಪ್ತೇತದುಚ್ಯತೇ। ವಿರಾಣ್ಣಾಮಕ ಭಗವದಾಜ್ಞಾನುಸಾರೇಣ ಸೂತ್ರನಾಮಕವಾಯುರ್ಯಾವಜ್ಜೀವಾನಾಂ ಸ್ಥೂಲಶರೀರಾಣಿ ನಿರ್ಮಾಯ ತೈರ್ಜೀವಾನ್ ಬಂಧಯಿತ್ವಾ ಸಂಸಾರೇ ಸಂಸ್ಥಾಪ್ಯ ವೈಷಯಕ ಸುಖದುಃಖಾನಿ ಭೋಜಯತಿ। ತದುಕ್ತಂ ಪ್ರಕಾಶಸಂಹಿತಾಯಾಂ॥ " ವಿರಾಡ್ದತ್ತಾನಿ ಸಂಗ್ರಹ್ಯ ಕ್ರಮಾತ್ಕಾಲಾನುಸಾರತಃ। ಚಕ್ರೇ ಸ್ಥೂಲಶರೀರಾಣಿ ಯದ್ವೇಶೇಸ್ಥಾಪಯನ್ವಿರಾಟ್। ತೇಷಾಂ ತದುಪಯುಕ್ತಾರ್ಥಾನ್‌ಜ್ಜಡಾನ್ಯಪಿಧನಾನಿಚ ಇತಿ ॥ ಸ್ವಸೃಷ್ಟಾನಾಂಜೀವಾನಾಂ ಗುಣಕ್ರಿಯಾಜಾತಿರೂಪಸಂಪದ್ವ್ಯವಹಾರಾಶ್ರಯಾಚಾರವೇಷಭಾಷಾದಾನಮಾನಾಹರ್ಾನಂತಾರ್ಥಸಂಚಯಾನ್ ದತ್ವಾ ಪಾಲನಂ ಕರೋತೀತ್ಯನೇನ ಸ್ಥಿತಿಕರ್ತೃತ್ವಮುಕ್ತಮ್। ತತ್ತದ್ಗುಣಕ್ರಿಯಾ ಜಾತಿರೂಪಲಕ್ಷಣ ಸಂಪದಃ। ವ್ಯವಹಾರಾಶ್ರಯಾಚಾರ ವೇಷ ಬಾಷಾ ಸ್ವರೂಪಕಾನ್। ದಾನ ಮಾನಾಪಮಾನಾರ್ಹಪೂರ್ವಾನಂತಾರ್ಥಸಂಚಯಾನ್। ವಿರಾಡುಕ್ತಾನ್ ವಿರಾಡ್ದತ್ತಾನ್ ತದ್ಭಾವಜ್ಞಃ ತಥಾ ಚರದಿತಿ ಪ್ರಕಾಶಸಂಹಿತಾಯಾಂ"॥ ಸಾತ್ವಿಕಾನಾಂ ಜ್ಞಾನಭಕ್ತಿವೈರಾಗ್ಯಾದಿಕಂ ದತ್ವಾ ತತ್ತದ್‌ಹೃದಯಾಂತರ್ವರ್ತಿನಂ ಬಿಂಬರೂಪಿಣಂ ಪ್ರದರ್ಶ್ಯ ಇಹ ಭಗವತ್ಪೂಜಾಸಾಧನ ಸಾಮಗ್ರೀಃದತ್ವಾಸ್ವಾನುಷ್ಠಿತಕರ್ಮಶೇಷ ಜ್ಞಾನಶೇಷ ಭಕ್ತಿಶೇಷಾನ್ನಾನಾವಿಧಸ್ರಕ್‌ಚಂದನವನಿತಾದಿ ಭೋಗಾನ್ ದತ್ವಾ ತತ್ತಜ್ಜೀವಾಂತರ್ಯಾಮಿತಯಾ ಸ್ಥಿತ್ವಾ-ಸರ್ವಕರ್ಮಾಣಿ ಕೃತ್ವಾ ಸರ್ವಕರ್ಮಾಣಿ ಕಾರಯಿತ್ವಾ ಪಾಲನಂಕರೋತೀತಿವಿಶಿಷ್ಟಾಭಿಪ್ರಾಯಃ ॥

### ಕನ್ನಡಾರ್ಥ

**ನೀರಜ ಭವಾಂಡೋದಯಸ್ಥಿತಿ ಕಾರಣನೆ**" ಎಂಬುವದರ ಸಮನ್ವಯವು ಹೇಗದಂದರೆ—

ವಿರಾಟ್‌ನಾಮಕ ಪರಮಾತ್ಮನ ಆಜ್ಞೆಯಂತೆ ಸೂತ್ರನಾಮಕ ವಾಯುವು ಜೀವರುಗಳ ಸ್ಥೂಲ ಶರೀರಗಳನ್ನು ನಿರ್ಮಿಸಿ ಅವುಗಳಿಂದ ಜೀವರನ್ನು ಬಂಧನ

ದಲ್ಲಿರಿಸಿ ಸಂಸಾರದಲ್ಲಿ ವೈಷಯಿಕ ಸುಖ ದುಃಖಗಳನ್ನು ಉಣಿಸುತ್ತಾನೆ. ಇದು ಪ್ರಕಾಶ ಸಂಹಿತೆಯಲ್ಲಿ "ವಿರಾಟ್‌ದತ್ತಾನಿ" ಎಂದು ಮುಂತಾದ ವಚನಗಳಿಂದ ಹೇಳಲ್ಪಟ್ಟಿರುತ್ತದೆ. ಆದುದರಿಂದ ಈ ವಿಶೇಷಣವೂ ಅವರಿಗೆ ಯುಕ್ತವಾಗಿರುತ್ತದೆ. ಸಾತ್ವಿಕರಿಗೆ ಜ್ಞಾನಭಕ್ತಿವೈರಾಗ್ಯಮೊದಲಾದವುಗಳನ್ನು ಕೊಟ್ಟು ಅವರವರ ಹೃದಯದಲ್ಲಿರುವ ಬಿಂಬ ಮೂರುತಿಯನ್ನು ತೋರಿಸಿ ಇಹದಲ್ಲಿ ಭಗವತ್ಪೂಜಾ ಸಾಧನ ಸಾಮಗ್ರಿಗಳನ್ನು ದಯಪಾಲಿಸಿ ಅವರವರ ಕರ್ಮ–ಜ್ಞಾನ ಭಕ್ತಿ-ಶೇಷಗಳಾದ ನಾನಾವಿಧವಾದ ಸ್ರಕ್‌ಚಂದನವನಿತಾದಿ ಭೋಗಗಳನ್ನು ಕೊಟ್ಟು–ಸರ್ವಕರ್ಮ ಕರ್ತೃವೂ ಕಾರಕನೂಆಗಿ ಪಾಲನವನ್ನು ಮಾಡುತ್ತಾನೆ ಎಂದು ವಿಶಿಷ್ಟ ಅಭಿಪ್ರಾಯವನ್ನು ತಿಳಿಯಬೇಕು.

## ತಾಮ್ರಪರ್ಣೀಯಾ

ನನು ಮುಖ್ಯಪ್ರಾಣಸ್ಯ ಬ್ರಹ್ಮಸಮೀರವಂದ್ಯತ್ವಂ ಕಥಂ ಯುಜ್ಯತೇತಿ ಪ್ರಾಪ್ತೇ ನಿವಾರಯತಿ ॥ ತದ್ಯಥಾ "ಬ್ರಹ ಜಾತಿ ಜೀವ ಕಮಲಾಸನ ಶಬ್ದರಾಶಿಷು " ಇತಿಕೋಶಪರ್ಯಾಲೋಚನಯಾ ಬ್ರಹ್ಮಶಬ್ದಸ್ಯ ಜೀವೇರೂಢತ್ವಾದ್ಬ್ರಹ್ಮಪದೇನ ಜೀವ ಇತ್ಯರ್ಥಃ । ವಾಯೋಃ ಜೀವೋತ್ತಮತ್ವಾತ್ ಜೀವವಂದ್ಯತ್ವಂ ಯುಕ್ತಮೇವ । ಅಥವಾ ಬ್ರಹ್ಮ ವೇದಃ ತಪಸ್ತತ್ವಂ ಬ್ರಹ್ಮಾ ವಿಪ್ರಃ ಪ್ರಜಾಪತಿಃ ಇತಿ ಕೋಶೋಕ್ತದಿಶಾ–ಬ್ರಹ್ಮೆತ್ಯನೇನ ವೇದ ಇತ್ಯರ್ಥಃ । ತದ್ವಂದ್ಯತ್ವಂ ಮುಖ್ಯಪ್ರಾಣಸ್ಯ ಯುಕ್ತಮೇವ । " ಪೂರ್ವಪ್ರಸಿದ್ಧವ್ಯತಿರಿಕ್ತಾನಂತವೇದಪ್ರತಿಪಾದ್ಯಮುಖ್ಯತಮೇತಿ " ಪ್ರಾತಃ ಸಂಕಲ್ಪಗದ್ಯೋಕ್ತತ್ವಾತ್‌ಸಮೀರ ಇತ್ಯನೇನಾಹಂಕಾರಿಕಪ್ರಾಣ ಇತ್ಯರ್ಥಃ । ತದ್ವಂದ್ಯತ್ವಂ ಮುಖ್ಯಪ್ರಾಣಸ್ಯ ಯುಕ್ತಮೇವ । ವಾಣೀತ್ಯನೇನ ವಾಗಭಿಮಾನಿನೀ ಉಮಾ ತದ್ವಂದ್ಯತ್ವಂ ಮುಖ್ಯಪ್ರಾಣಸ್ಯ ಯುಕ್ತಮೇವ । ಗರುಡಶೇಷರುದ್ರಾದಿಸುರೈಃ ವಂದ್ಯತ್ವಂ ಮುಖ್ಯಪ್ರಾಣಸ್ಯ ಯುಕ್ತಮೇವ । ಅನೇನಮುಖ್ಯಪ್ರಾಣಾಂತರ್ಗತಬಿಂಬಮೂರ್ತ್ಯುಪಾಸನಮೇವ ಕೃತಮಿತಿ ಸಿದ್ಧಾಂತಃ ॥ ೧ ॥

ಬ್ರಹ್ಮ ಸಮೀರವಾಣಿ ಫಣೀಂದ್ರ ವೀಂದ್ರ ಭವೇಂದ್ರ ಮುಖ ವಿನುತ ಎಂಬಲ್ಲಿ– ಬ್ರಹ್ಮ=ಜೀವ,ವೇದ; ಜೀವರಿಂದಲೂ ವೇದಗಳಿಂದಲೂ ವಾಯುವು ವಂದ್ಯನು. ಪ್ರಾತಃ ಸಂಕಲ್ಪಗದ್ಯದಲ್ಲಿ "ವಾಯುದೇವರು ಪೂರ್ವ ಪ್ರಸಿದ್ಧ



ರಮಾ ನಾರಾಯಣ ರನ್ನು ಉಳಿದು ಅನಂತವೇದಗಳಿಂದ ಪ್ರತಿಪಾದ್ಯನು " ಎಂದು ಹೇಳಿರುವದರಿಂದ "ಬ್ರಹ್ಮವಿನುತ" ಎಂಬ ವಿಶೇಷಣವು ಅವನಲ್ಲಿ ಅನ್ವಯಿಸುತ್ತದೆ. ಸಮೀರ=ಅಹಂಕಾರಿಕ ಪ್ರಾಣ; ಇವನೂ ಮುಖ್ಯಪ್ರಾಣನಿಗೆ ನಮಿಸುವವನೇ ಆದುದರಿಂದ ಸಮೀರವಿನುತ ಎಂಬ ವಿಶೇಷಣವು ಅವನಲ್ಲಿ ಸಮನ್ವಯಿಸುತ್ತದೆ. ವಾಣೀ=ವಾಗಭಿಮಾನಿನಿಯಾದಉಮಾ,ಮಿಕ್ಕ-ಫಣೀಂದ್ರ ವೀಂದ್ರ ಭವೇಂದ್ರ =ಶೇಷ, ಗರುಡ, ರುದ್ರರು. ಈ ಮೊದಲಾದವರಿಂದ ವಿನುತ=ನಮಸ್ಕೃತನು" ಎಂಬುದು ಸ್ಪಷ್ಟವಿರುವದು. ಆದುದರಿಂದ ನಾಲ್ಕು ವಿಶೇಷಣಗಳು ವಾಯುದೇವನಲ್ಲಿ ಸಮನ್ವಯಿಸುವದರಿಂದ ಈ ವಿವರಣವು ನಿರ್ದುಷ್ಟವಾಗಿದೆಯೆಂದು ತಿಳಿಯಬೇಕು. ಈ ಪದ್ಯದಿಂದ ಮುಖ್ಯಪ್ರಾಣಾಂತರ್ಗತಸ್ವಬಿಂಬಮೂರುತಿಯ ನಮಸ್ಕಾರರೂಪವಾದ ಉಪಾಸನೆಯನ್ನು ಜಗನ್ನಾಥದಾಸವರ್ಯರು ಮಾಡಿರುವದಾಗಿ ಸಿದ್ಧಾಂತವಾಯಿತು.

— ೧ನೆಯ ಪದ್ಯದ ಅರ್ಥವು ಸಮಾಪ್ತ —

## ತಾಮ್ರಪರ್ಣೀಯಾ ದ್ವಿತೀಯಪದ್ಯಾವತರಣಿಕಾ

ನನು ಲಕ್ಷ್ಮೀನಾರಾಯಣಯೋರವಿನಾಭೂತತ್ವಾತ್ ನಾರಾಯಣೇನ ಸಹರಮಾಯಾಃ ವಂದನಂ ಯುಕ್ತಂ।ತಂ ವಿನಾರಮಾಯಾಃ ವಂದನೇ"ಕ್ಲೇಶೋಧಿಕತರಸ್ತೇಷಾಂಅವ್ಯಕ್ತಾಸಕ್ತಚೇಸಾಮಿತಿಗೀತಾಯಾಮ್ ಕ್ಲೇಶಸ್ಯ ಉಕ್ತತ್ವಾತ್ ಕಥಂ ಗ್ರಂಥಕಾರ್ತ್ರೈನಾರಾಯಣಂವಿನಾ ರಮಾಯಾಃ ಪೃಥಗ್ವಂದನಂ ಕೃತಮಿತ್ಯಾಶಂಕ್ಯ ನಾರಾಯಣನಮನವೇಲಾಯಾಂ " ಶ್ರೀರಮಣಿಕರಕಮಲ ಪೂಜಿತಚಾರುಚರಣಸರೋಜೇ " ತ್ಯನೇನ ನಾರಾಯಣೇನ ಸಹ ರಮಾಯಾಃ ವಂದನಂ ಕೃತಮಪಿ ಸಕಲ ಸೌಭಾಗ್ಯಾತ್ಮಿಕತ್ವಾತ್, ಸರ್ವವೇದಾಭಿಮಾನಿತ್ವಾತ್, ಸಕಲ ವಾಗಭಿಮಾನಿತ್ವಾತ್, ತಾರತಮ್ಯದ್ಯೋತಕತ್ವಾತ್, ಸ್ವಕೃತ ಗ್ರಂಥಸ್ಯ ವೇದಾರ್ಥತ್ವಾಚ್ಚ ರಮಾಯಾಃ ಪೃಥಗ್‌ವಂದನಂಯುಕ್ತಮಿತ್ಯಭಿಪ್ರಾಯೇಣ ಮಹಾಲಕ್ಷ್ಮೀಂ ಪ್ರಾರ್ಥಯತೇ ॥

## ಕನ್ನಡ ಅನುವಾದ

ಶ್ರೀರಮಾ-ನಾರಾಯಣರಿಗೆ ನಿತ್ಯ ಸಂಬಂಧವಿರುವದರಿಂದ ನಾರಾಯಣನೊಡನೆಯೇ ರಮಾದೇವಿಯರಿಗೆ ನಮಸ್ಕರಿಸುವದು ಉಚಿತವಾಗುತ್ತದೆ

ನಾರಾಯಣನನ್ನು ಬಿಟ್ಟು ಕೇವಲ ರಮಾದೇವಿಯನ್ನೇ ನಮಸ್ಕರಿಸಿದರೆ "ಕ್ಲೇಶೋಧಿಕತರಸ್ತೇಷಾಮವ್ಯಕ್ತಾಸಕ್ತ ಚೇತಸಾಂ" ಎಂಬ ಗೀತಾ ವಚನದಂತೆ ಅನರ್ಥ (ಕ್ಲೇಶವು)ವು ಬರುವದು; ಆದುದರಿಂದ ಗ್ರಂಥಕಾರರು ನಾರಾಯಣನನ್ನು ಬಿಟ್ಟು ಕೇವಲ ರಮಾದೇವಿಯವರನ್ನಷ್ಟೇ ಪ್ರತ್ಯೇಕವಾಗಿ ಹೇಗೆ ನಮಸ್ಕರಿಸಿದರು ? ಎಂದು ಆಕ್ಷೇಪವು ಉದಯಿಸುತ್ತದೆ. ಅದಕ್ಕೆ "ನಾರಾಯಣನಿಗೆ ನಮಿಸುವ ವೇಳೆಯಲ್ಲಿ "ಶ್ರೀ ರಮಣಿ" ಎಂಬ ಪದಬಂಧದಿಂದ ಅವನೊಡನೆ ಸಹಿತವಾಗಿಯೇ ರಮಾವಂದನವೂ ಮಾಡಲ್ಪಟ್ಟದೆ; ಆದರೂ "ಸಕಲ ಸೌಭಾಗ್ಯ ಸ್ವಾಮಿನಿಯಾದುದರಿಂದ (೧) ಸರ್ವವೇದಗಳ ಅಭಿಮಾನಿ ದೇವತೆಯಾದುದರಿಂದ, (೨) ಸಕಲ ವಾಕ್ಕುಗಳಿಗೆ ಅಭಿಮಾನಿಯಾಗಿರುವದರಿಂದ, (೩) ತಾರತಮ್ಯವನ್ನು ತೋರಿಸುವದರಿಂದ (೪) ತಮ್ಮ ಗ್ರಂಥವು ವೇದಾರ್ಥ ವಿವರಣಾತ್ಮಕವಾಗಿರುವದರಿಂದ ಪ್ರತ್ಯೇಕವಾಗಿ ಭಗವಂತನ ಪತ್ನೀಭಾವ ಯುಕ್ತವಾಗಿ ನಮಸ್ಕರಿಸುವದು ಯುಕ್ತವೆಂಬ ಅಭಿಪ್ರಾಯದಿಂದ ಮಹಾಲಕ್ಷ್ಮೀಯನ್ನು ಬೇಡಿಕೊಳ್ಳುತ್ತಾರೆ. "ಜಗದುದರನತಿ" ಎಂಬುದಾಗಿ.

**ಮೂಲಪದ್ಯ:– ಜಗದುದರನತಿ ವಿಮಲ ಗುಣರೂ।**
**ಪಗಳನಾಲೋಚನದಿ ಭಾರತ।**
**ನಿಗಮತತಿಗಳತಿಕ್ರಮಿಸಿ ಕ್ರಿಯಾವಿಶೇಷಗಳ।**
**ಬಗೆಬಗೆಯ ನೂತನವಕಾಣುತ।**
**ಮಿಗೆಹರುಷದಿಂ ಪೊಗಳಿ ಹಿಗ್ಗುವ।**
**ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು ॥೨॥**

**ತಾಮ್ರಪರ್ಣೀ ವ್ಯಾಖ್ಯಾನ–** "ಜಗದುದರನಇತಿ"। ಜಗದುದರಸ್ಯೇತ್ಯರ್ಥಃ। ಜಗತ್ ಚೇತನಾಚೇತನಾತ್ಮಕಂ ಜಗತ್ ಉದರೇ ಯಸ್ಯ ಸಃ ಜಗದುದರಃ। ತಸ್ಯ ಅತೀತಾನಾಗತ ವರ್ತಮಾನಬ್ರಹ್ಮಾಂಡಾನಿ ಭಗವದುದರೇ ವರ್ತಂತ ಇತ್ಯರ್ಥಃ। ‡ "ಯತ್ಪ್ರಯಂತ್ಯಭಿಸಂ ವಿಶಂತೀತಿಶ್ರುತೇಃ"॥

‡ಯತ್ ಪ್ರಯಂತಿಅಭಿಸಂವಿಶಂತಿ=ಯತ್ ಯಾವುದನ್ನು, ಪ್ರಯಂತಿ=ಲಯದಲ್ಲಿ ಹೊಂದುವವೋ, ಅಭಿಸಂವಿಶಂತಿ=ಮುಕ್ತಿಯಲ್ಲಿ ದೃಢವಾಗಿ ಹೊಂದುವವೋ (ಸೇರುವವೋ) ತತ್=ಅದು, ಬ್ರಹ್ಮ=ಪರಬ್ರಹ್ಮವು. ತದ್ವಿಜಿಜ್ಞಾಸಸ್ವ=ಅದನ್ನು ಶ್ರವಣ ಮನನ ರೂಪವಾಗಿ ವಿಚಾರಿಸು." ಎಂದು ಪ್ರಮಾಣಾರ್ಥ.



ಅನಂತಾನಂತಕೋಟಿಬ್ರಹ್ಮಾಂಡೋದರಸ್ಯ ಹರೇಃ। ತವೋದರೇ ವಿಶ್ವಮಿದಂ ಭಾತಿ ನೂನಂ ಸದಾ ಹರೇ। ತ್ವತ್ತಃಸ್ಥೂಲೋದರ ಕಶ್ಚಿನ್ನಭೂತೋನಭವಿಷ್ಯತಿ ಇತಿವಚನಾತ್ ॥ "ಸ ವಿಶ್ವಗರ್ಭೋ ಹರಿರೇಕ ಆಸೀದಿತಿಶ್ರುತೇಶ್ಚ"॥

ಏತಾದೃಶಸ್ಯ ಹರೇಃ। ಅತಿವಿಮಲಗುಣರೂಪಗಳನು ಇತ್ಯನೇನ, ಅತಿಶಯೇನ ದುಃಖಾಸಂಭಿನ್ನತ್ವೇನ ನಿರ್ದುಷ್ಟಾಃ ಗುಣಾಃ ಜ್ಞಾನಾನಂದಾಯಃ। ರೂಪಾಣಿ ಅಚ್ಛೇದ್ಯಾಭೇದ್ಯತ್ವೇನ ಅನಾದ್ಯನಂತಕಾಲೇನ ವಿದ್ಯಮಾನಾನಿ ನಾರಾಯಣಾದಿ ಶತರೂಪಾಣಿ, ವಿಶ್ವಾದಿ ಸಹಸ್ರಾಣಿ, ಅಜಿತಾದ್ಯನಂತರೂಪಾಣಿ ॥ ರಮಾಪಿ ತತ್ತದ್ಭಾರ್ಯಾತ್ವೇನಾವತೀರ್ಯ ತತ್ತದ್ರೂಪಗುಣಾನ್ ಆಲೋಚನದಿ ನಿರಂತರಧ್ಯಾನೇನಾಪಿ ಚಿಂತಯಂತೀ ಸಾ ರಮಾ। ತತ್ತದ್ಗುಣಾನಾಮಂತಂ ನ ಪ್ರಾಪ। † "ಸಕೃದ್ಧೋಲ್ಕಾದಿಪಂಚಾತ್ಮಾ ವಿಶ್ವಾದ್ಯಷ್ಟತನುರ್ಹರಿಃ। ವಿಮಲಾದಿನವಾತ್ಮಾಭೂತ್ ಸಮತ್ಸ್ಯಾದಿದಶಾಕೃತಿಃ। ಶಕ್ತ್ಯಾದಿದ್ವಾದಶಾತ್ಮಾಭೂತ್ ಸ್ವಾದಿಷೋಡಶರೂಪವಾನ್। ಆನಂದಾದಿ ತ್ರಯೋವಿಂಶದ್ರೂಪ ಆಸೀತ್ಪರಾತ್ಪರಃ। ಕೇಶವಾದಿ ಚತುರ್ವಿಂಶದ್ರೂಪ್ರವಾನ್ ಭಗವಾನ್ ಹರಿಃ। ಅಜಾದಿ ಪಂಚಾಶದ್ರೂಪಸ್ತತೋಭೂತ್ ಪುರುಷೋತ್ತಮಃ। ನಾರಾಯಣಾದಿ ಶತಕಃ ಸವಿಶ್ವಾದಿಸಹಸ್ರಕಃ। ಪರಾದ್ಯನಂತರೂಪೋಭೂದಾತ್ಮಭೇದವಿವರ್ಜಿತಃ। ತದಾಜ್ಞಯೈವಾಸ ತದಾ ರಮಾಪಿ ಬಹುರೂಪಿಣೀ। ಸಾಪಿ ತದ್ಗುಣರೂಪಾಣಿ ಚಿಂತಯಂತೀ ನಿರಂತರಮ್ ॥ ತದಾ ತದ್ಗುಣರೂಪಾಣಾಮಂತಂ ನಾಪಾಖಿಳಾತ್ಮನಃ" ।ಇತಿ ಪ್ರಕಾಶಸಂಹಿತಾಯಾಂ॥

† ಆ ಹರಿಯು ಕೃದ್ಧೋಲ್ಕ ಮುಂತಾದ ಐದು ರೂಪಗಳನ್ನು ತಾಳಿದನು. ಅವನೇ ವಿಶ್ವಮುಂತಾದ ಎಂಟು ರೂಪದವನಾದನು. ಅನಂತರ ವಿಮಲ ಮುಂತಾದ ಒಂಬತ್ತು ರೂಪಗಳನ್ನು ತಾಳಿದನು. ಮತ್ಸ್ಯಮುಂತಾದ ಹತ್ತು ರೂಪಗಳನ್ನು ತಾಳಿದನು. ಹೀಗೇಯೇ ಶಕ್ತಿಮುಂತಾದ ಹನ್ನೆರಡು ರೂಪಗಳನ್ನೂ, ಸ್ವಾದಿ(ಸಆದಿ) ಹದಿನಾರು ರೂಪಗಳನ್ನೂ, ಆನಂದಾದಿ ಇಪ್ಪತ್ತುಮೂರು ರೂಪಗಳನ್ನೂ, ಕೇಶವಾದಿ ಇಪ್ಪತ್ತನಾಲ್ಕು ರೂಪಗಳನ್ನೂ, ಅಜಾದಿ ಐವತ್ತು ರೂಪಗಳನ್ನೂ, ನಾರಾಯಣಾದಿ ಶತ (೧೦೦) ರೂಪಗಳನ್ನೂ, ವಿಶ್ವಾದಿ ಸಹಸ್ರರೂಪಗಳನ್ನೂ, ಪರ ಮುಂತಾದ (ಬಹು) ಅನಂತರೂಪಗಳನ್ನು ತಾಳಿದನು. (ತನ್ನ ರೂಪಗಳಲ್ಲಿ) ಸ್ವಗತ ಭೇದ ವಿವರ್ಜಿತನಾದರೂ ಶ್ರೀಹರಿಯು ತಾಳಿದ ಅನಂತ ರೂಪಗಳಿಗನುಸಾರವಾಗಿ ಅವನ ಆಜ್ಞೆಯಿಂದ ರಮಾದೇವಿಯೂ ಬಹು ರೂಪಗಳನ್ನು ತಾಳಿದಳು. ಅವಳು ಹರಿಯ ಗುಣ ಹಾಗೂ ರೂಪಗಳನ್ನು ಯಾವಾಗಲೂ ಯೋಚಿಸುತ್ತಿದ್ದರೂ ಅವುಗಳ ಕೊನೆಯ ನಿರ್ಣಯವನ್ನು ಹೊಂದಲಿಲ್ಲ" ಎಂದು ಪ್ರಕಾಶ ಸಂಹಿತೆಯ ವಾಕ್ಯಗಳ ಸಂಕ್ಷಿಪ್ತಾರ್ಥ.

ಜಗತ್=ಚೇತನ ಹಾಗೂ ಅಚೇತನಗಳಿಂದ ಕೂಡಿದ ವಿಶ್ವವು ಯಾವನ ಉದರಲ್ಲಿ ಇರುವದೋ ಅವನು ಜಗದುದರನು. (ಬ. ವ್ರೀ. ಸ.) ಅಂದರೆ ಅತೀತ ಅನಾಗತ, ವರ್ತಮಾನ ಬ್ರಹ್ಮಾಂಡಗಳು ಭಗವಂತನ ಉದರದಲ್ಲಿ ಇರುತ್ತವೆ ಎಂದು ತಾತ್ಪರ್ಯ, "ಯತ್ರ್ರಯಂತಿ"ಎಂಬಶ್ರುತಿಯೂ "ತವೋದರೇ" ನೂನಂಹರೇ ಸದಾ, "ಸವಿಶ್ವಗರ್ಭ" ಇತ್ಯಾದಿ ಶ್ರುತಿ ಸ್ಮೃತಿಗಳ ವಚನಗಳೂ ಪರಮಾತ್ಮನು ಜಗದುದರನೆಂಬಲ್ಲಿ ಪ್ರಮಾಣಗಳು.

"ಅತಿ ವಿಮಲ ಗುಣರೂಪಗಳನು" ಎಂಬಲ್ಲಿ—

(೧) ಅತಿ ವಿಮಲಾ=ದುಃಖಸಂಪರ್ಕವಿಲ್ಲದ್ದರಿಂದ ಅತ್ಯಂತ ನಿರ್ದುಷ್ಟವಾದ ಗುಣಗಳು=ಜ್ಞಾನ ಆನಂದ ಮುಂತಾದವುಗಳು. ಭೇದ–ಭೇದಗಳಿಲ್ಲದ (ಭೇದಿಸಲಿಕ್ಕೂ ಒಡೆಯಲಿಕ್ಕೂ ಬಾರದ, ನಾಶ ರಹಿತವಾದ ) ಅನಾದ್ಯನಂತ ಕಾಲದಲ್ಲಿ ಇರುವ ನಾರಾಯಣಾದಿ ಶತರೂಪಗಳು, ವಿಶ್ವಾದಿ ಸಹಸ್ರಮೂರ್ತಿಗಳು ಅಜಿತ ಮುಂತಾದ ಅನಂತರೂಪಗಳು; ಇವು ರೂಪಗಳು.

ಶ್ರೀ ರಮಾದೇವಿಯೂ ಕೂಡ ಆ ರೂಪಗಳಿಗೆ ಪತ್ನಿಯಾಗಿ ಅವತರಿಸಿ ಇಂಥ ಭಗವಂತನ ಗುಣ ಹಾಗೂ ರೂಪಗಳನ್ನು ನಿರಂತರವಾಗಿ ಧ್ಯಾನದಿಂದ ಚಿಂತಿಸುತ್ತಿದ್ದರೂ ಅವುಗಳ ಕೊನೆಯನ್ನುಕಾಣಲಿಲ್ಲ. " ಸಕೃದ್ಧೋ ಲ್ಕಾದಿ " ಎಂದು ಮುಂತಾಗಿರುವ ಪ್ರಕಾಶ ಸಂಹಿತೆಯ ವಚನಗಳಿಂದ ಈ ಅರ್ಥವು ಸಿದ್ಧವೇ ಇರುತ್ತದೆ.

## ತಾಮ್ರಪರ್ಣೀಯಾ

ಭಾರತ ನಿಗಮತತಿಗಳತಿಕ್ರಮಿಸೀತ್ಯಸ್ಯಾಯಮರ್ಥಃ । ೧ " ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿನ ಕುತ್ರಚಿದಿತಿ" ವಚನಾತ್। ಭಾರತೋಕ್ತ ತದನುಕ್ತ ವೇದೋಕ್ತ ತದನುಕ್ತ ಸಂಪ್ರದಾಯಾಗತಾನ್ ಅಚಿಂತ್ಯ ಶಕ್ತಿವಿಶೇಷಾಭ್ಯಾಂ ಕ್ರಿಯಮಾಣಾನ್ ಕ್ರಿಯಾವಿಶೇಷಾನ್ ಅಣೋರಣೀಯಾನ್ ಮಹತೋಮಹೀಯಾನಿತ್ಯಾದಿಕ್ರಿಯಾವಿಶೇಷಾನ್ । ಬಗೆಬಗೆಯ ಇತ್ಯನೇನ ಬಹುಚಿತ್ರತಯಾ । ನೂತನವೇತ್ಯನೇನ=ನವೀನತ್ವಂ । ಕಾಣುತೇತ್ಯ

೧" ಈ ಗ್ರಂಥದಲ್ಲಿ ಇರುವ ವಿಷಯಗಳಲ್ಲಿ ಕೆಲವು ಬೇರೆ ಕಡೆಗೆ ಇರಬಹುದು ಆದರೆ ಇಲ್ಲಿ ಇರದಿರುವದು ಬೇರೆ ಎಲ್ಲಿಯೂ ಇರುವದಿಲ್ಲ.



ನೇನ=ದೃಷ್ಟ್ವಾ ॥ ತದುಕ್ತಂ। (೧) "ಯತ್ಪಾದಸ್ಯ ನಖಾಗ್ರೇಣ ಜಗತ್ಸೃಷ್ಟ್ಯಾದಿಕಾನಪಿ । ದೃಷ್ಟ್ವಾಶ್ರೀರ್ನೈವ ಜಾನಾತಿ ಹ್ಯನಂತಾಪಿ ವಿಚಿತ್ರತಾಂ । ನೂತನಾನ್ಯೇವ ಸಂದೃಷ್ಟ್ವಾ ಗುಣಕಾರ್ಯಾಣಿ ಸರ್ವಶಃ" ಇತಿ ತತ್ವನಿರ್ಣಯೇ॥ ಮಿಗೆ ಹರುಷ ಇತ್ಯತ್ರ=ಆನಂದೋದ್ರೇಕೇಣ। ಪೊಗಳೀತ್ಯನೇನ=ಹರ್ಷಿತಾ। ತದುಕ್ತಂ। (೨) ತದಾನಂದಾಂಬುಧೌ ಮಗ್ನಾ ರಮಾ ಹರ್ಷಾಶ್ರುಲೋಚನಾ ಇತಿ। ತ್ರಿಗುಣಮಾನೀತ್ಯತ್ರ=ಶ್ರೀರೂಪೇಣಸತ್ವಾಭಿಮಾನಿನೀ ಭೂರೂಪೇಣ ರಜೋಭಿಮಾನಿನೀ । ದುರ್ಗಾರೂಪೇಣ ತಮೋಭಿಮಾನಿನೀ। ತದುಕ್ತಂ। (೩) "ಸತ್ವಾಭಿಮಾನಿನೀ ಶ್ರೀರೂಪಾ ಭೂರೂಪಾ ರಜಸಶ್ಚ ವೈ। ತಮೋಭಿಮಾನಿನೀ ದುರ್ಗಾಖ್ಯಾ ರೂಪತ್ರಯಯುತಾ ರಮಾ॥ಶುಭ್ರೇಷು ಮುಕ್ತಿಯೋಗ್ಯೇಷು ಶುಭ್ರಾ ಶ್ರೀರಭಿಮಾನಿನೀ।ರಕ್ತೇಷು ಸರ್ವಬದ್ಧೇಷು ರಕ್ತಾಭೂರಭಿಮಾನಿನೀ" ॥ ನೀಲೇಷ್ವಯೋಗ್ಯ ಜೀವೇಷು ನೀಲಾ ದುರ್ಗಾಭಿಮಾನಿನೀ " ॥ ಇತಿ ಪ್ರಕಾಶ ಸಂಹಿತಾಯಾಂ ॥ ಯಾ ಅನಂತಗುಣಪರಿಪೂರ್ಣಸ್ಯ ಹರೇರ್ವ್ಯಾಪಾರವೈಚಿತ್ರ್ಯಂ ದೃಷ್ಟ್ವಾನಂದೋದ್ರೇಕೇಣ ಹರ್ಷಿತಾಽ ಭೂತ್ ಸಾ ರಮಾ ॥ ಮಾಂ ಅನುದಿನಂ । ಇತ್ಯನೇನ=ಮೇ ನಿರಂತರಂ । ಸಂತೈಸಲಿ ಇತ್ಯನೇನ ರಕ್ಷೇದಿತ್ಯನ್ವಯ ಯಾರ್ಥಃ ॥೨॥

೧ ಪರಮಾತ್ಮನ ಪಾದದಲ್ಲಿರುವ ನಖಾಗ್ರ (ಉಗುರಿನ ತುದಿ) ಮಾತ್ರದಿಂದಲೇ ಜಗತ್ತಿನ ಸೃಷ್ಟಿ ಮುಂತಾದವುಗಳಾಗುವದನ್ನೂ,ಅದರ ವೈಚಿತ್ರ್ಯವನ್ನೂ, ಕಂಡು ಶ್ರೀ ಲಕ್ಷ್ಮೀದೇವಿಯು ಅನಂತ(ದೇಶ ಕಾಲಾಪರಿಚ್ಛಿನ್ನ) ಳಾಗಿದ್ದರೂ ನೂತನ ನೂತನವಾಗಿ, ಕಂಡುಬರುವ ಭಗವಂತನ ಗುಣಕಾರ್ಯಗಳನ್ನು ನೋಡಿ "ಇಷ್ಟೇ" ಎಂಬ ಕೊನೆಯನ್ನು ಕಂಡು ಹಿಡಿಯಲು ಸಮರ್ಥಳಾಗಲಿಲ್ಲ.

೨ ಚತುರ್ವಿಧನಾಶರಹಿತನಾದ ಹರಿಯನ್ನು ಆನಂದೋದ್ರೇಕವುಳ್ಳ ಮನಸ್ಸಿನಿಂದ ಕಂಡು ಪರಮ ಸಂತುಷ್ಟಳಾದಳು.

ಆಗ ಆನಂದಸಮುದ್ರದಲ್ಲಿ ಮುಳುಗಿದ ರಮಾದೇವಿಯು ಹರ್ಷದಿಂದ ಅಶ್ರುಪೂರ್ಣವಾದ ಕಣ್ಣುಗಳುಳ್ಳವಳಾದಳು.

೩ ಶ್ರೀರೂಪವು ಸತ್ವಗುಣಕ್ಕೆ ಅಭಿಮಾನಿಯಾದುದು; ರಜೋಗುಣಕ್ಕೆ ಭೂರೂಪವು; ತಮೋಗುಣಕ್ಕೆ ದುರ್ಗಾರೂಪವು. ಹೀಗ ಶ್ರೀ ಭೂ ದುರ್ಗಾರೂಪತ್ರಯದಿಂದ ಯುಕ್ತಳಾದ ರಮಾದೇವಿಯು ಮುತ್ತೆ-ಮುಕ್ತಿಯೋಗ್ಯರೆನಿಸಿದ ಶುಭ್ರ ಜೀವರಲ್ಲಿ ಶುಭ್ರವಾದ ಶ್ರೀರೂಪದಿಂದಲೂ, ರಾಜಸರೆನಿಸಿದ ರಕ್ತ(ಮಿಶ್ರ)ಜೀವರಲ್ಲಿ ರಕ್ತಬಣ್ಣದ ಭೂರೂಪದಿಂದಲೂ, ತಾಮಸರೆನಿಸಿದ ಮುಕ್ತ್ಯಯೋಗ್ಯ ನೀಲಜೀವರಲ್ಲಿ ನೀಲವರ್ಣದ ದುರ್ಗಾ ರೂಪದಿಂದಲೂ ಅಭಿಮಾನಿಯಾಗಿ ಇರುತ್ತಾಳೆ.

ತನುಸಸ್ತು ದಶೋತ್ತರಮ್।ತದ್ದಂಶಾಶೇನತು ರಜೋ ಮೂಲಜಂ ಯದ್ರಜಸ್ತುತತ್।ವಿಲಯೇದಂಶಾಂಶತಃ ಸತ್ವ ಏಕಾಂಶೇನ ತಮಸ್ಯಪಿ॥ಮಿಶ್ರಿತಂ‌ಭವಿತಿ ಹ್ಯೇತಾಂ ಸಾಮ್ಯಾವಸ್ಥಾಂ ವಿದುರ್ಬುಧಾಃ॥ಯದಾ ತು ತದ್ರಜಸ್ಸರ್ವಂ ತಮಸಾಸಹ ಸಂಗತಮ್ । ತದಾತ್ವಾಹುರ್ಮಹತ್ತತ್ವಂ ತಚ್ಚತುರ್ಭಾಗಸಂಭವಮ್ ॥ ತತ್ರ ತ್ರಿಭಾಗೋ ರಜಸ ಏಕಾಂಶಸ್ತಮಸಸ್ತಥಾ । ತದಾಹುರ್ಬ್ರಹ್ಮಣೋರೂಪಂ ಗುಣವೈಷಮ್ಯನಾಮಕಮ್ । ತದೇವ ಕೇವಲಂ ಸತ್ವಮಿತರಾಪೇಕ್ಷಯಾ ಭವೇತ್”। ಇತಿ ತೃತೀಯಸ್ಕಂಧೇ।ತದ್ಗತರಜಸ್ತಮೋವಿಕಾರಶೂನ್ಯತ್ವಾತ್ ಏವ ಸತ್ವ ಪ್ರಚುರೇತ್ಯುಕ್ತಂ ಗ್ರಂಥಕಾರೈರಿತಿಶೇಷಃ ॥

## ಕನ್ನಡಾರ್ಥ

“ ನಿರುಪಮಾನಂದಾತ್ಮಭವ– ” ಅಸದೃಶವಾದ ಆನಂದಮಯ ದೇಹವುಳ್ಳ ಪರಮಾತ್ಮನಿಂದ ಜನಿಸಿದವನು. ನಿರ್ಜರ=ಮುಪ್ಪಿಲ್ಲದವರಾದ ದೇವತೆಗಳ ಸಮೂಹದಿಂದ ಸೇವ್ಯಮಾನರಾದ ಬ್ರಹ್ಮದೇವರೇ ೨೦೦ ಋಜುಗಳಲ್ಲಿ ಶ್ರೇಷ್ಠರಾದ ಕಾರಣ ಋಜುಪುಂಗವರು. ಸತ್ವಪ್ರಚರ=ಶುದ್ಧಸತ್ವಾತ್ಮಕ ಶರೀರ ಎಂದು ಅಭಿಪ್ರಾಯ. ಕೇವಲ ಶುದ್ಧ ಸತ್ವಸೃಷ್ಟಿಗೆ ಬರುವದಿಲ್ಲ. “ಮುಕ್ತರ ಕ್ರೀಡಿಗೆ ಶುದ್ಧ ಸತ್ವವು” ಎಂದು ಪ್ರಮಾಣಗಳು ಹೇಳುತ್ತಿರುವಾಗ ಶುದ್ಧಸತ್ವಾತ್ಮಕದೇಹವು ಬ್ರಹ್ಮದೇವರಿಗೆ ಹೇಗೆ ? ಎಂದರೆ ಆಶುದ್ಧ ಸತ್ವವಿಚಾರ ಹೇಳುತ್ತಾರೆ. ತಮೋಗುಣದಕಿಂತಲೂ ರಜೋಗುಣ ಎರಡು ಪಟ್ಟು ; ರಜೋಗುಣದಕಿಂತಲೂ ಸತ್ವಗುಣ ಎರಡು ಪಟ್ಟು ಹೆಚ್ಚು. ಈಪ್ರಕಾರ ಮೂಲ ಜಡ ಪ್ರಕೃತಿಯಿಂದ ಹೊರಟ ಗುಣಗಳ ಪರಿಮಾಣ. ಈ ರೀತಿ ಇರುವ ಈ ತ್ರಿಗುಣಗಳಲ್ಲಿ, ಸತ್ವಗುಣ–ಶುದ್ಧ ಶುಭ್ರಗುಣವೇ ಕೇವಲ, ಮುಖ್ಯ; ರಜಸ್ತಮೋಗುಣಗಳಲ್ಲಿ ವಿಮಿಶ್ರಿತವಾದ (ಕೂಡಿದ) ರಜೋಗುಣವು ಮೂರುಪ್ರಕಾರ. ಅದು ಹೇಗಂದರೆ, ಮೂಲರಜೋಗುಣದ ಶತಾಧಿಕ ಸತ್ವಗುಣ. ಮೂಲರಜ ಶತಾಂಶ(೧೦೦)ಗುಣಕಡ್ಮಿ ತಮೋಗುಣಹೀಗೆ, ಇದು ರಜೋರಾಶಿ ಎಂದು ಕರೆಸುತ್ತದೆ. ಮೂಲತಮೋಗುಣವಾದರೂ ಮೂರುಪ್ರಕಾರ. ಮೂಲತಮಸ್ಸಿನಲ್ಲಿ ತಮೋಗುಣದಕಿಂತಲೂ ಹತ್ತು ಗುಣ ಅಧಿಕ ಸತ್ವಗುಣ; ರಜತಮಗುಣಗಳು ಏಕಾದಶ(೧೧)ವಿಭಾಗ ಮಾಡಿ ಆದರ ಏಕಾಂಶಗುಣ ಸಂಮಿಶ್ರವಾದದುದೆಂದು ಈ ಪ್ರಕಾರ ಗುಣಗಳ ನಿಜಸ್ಥಿತಿ.



ಶ್ರೀ ವಿಜಯದಾಸಾರ್ಯರು “ಕೃತಿಕಾಂತ ಅರ್ಧನಾರೀ ರೂಪ ತಾಳಿ” ಎಂಬ ಸೃಷ್ಟಿ ಪ್ರಕರಣ ೨೦ನೇಸುಳಾದಿಯಲ್ಲಿ ವಿಸ್ತಾರವಾಗಿ ಪ್ರಳಯಕಾಲದಲ್ಲಿ ಗುಣಸಾಮ್ಯವಾದಾಗ್ಗೆ, ಸೃಷ್ಟಿಕಾಲದಲ್ಲಿ ಗುಣವೈಷಮ್ಯವಾಗಲು, ಈ ಪರಮಾಣು ಬಿಂದುಗಳ ಸ್ಥಿತಿ ಹೇಳಿದ್ದಾರೆ.

ಸೃಷ್ಟಿಗೆ ತೆಗೆದುಕೊಂಡ ಕ್ರಮ

| | | | |
|---|---|---|---|
| ೧ ತಮಸ್ಸು | ತಮ | ರಜ | ಸತ್ವ |
| ೨ ರಜೋಗುಣ | ೧ ತಮತಮ | ೧ ರಜತಮ | ೧ ಸತ್ವತಮ |
| ೪ ಸತ್ವಗುಣ | ೧ ತಮೋರಜ | ೧ ರಜೋತಮ | ೧ ಸತ್ವರಜ |
| ೭ ಹೀಗೆ | ೧ ತಮಃಸತ್ವ | ೧ ರಜಃಸತ್ವ | ೧ ಸತ್ವಸತ್ವ |

ಇದರೊಳಗೆ ತಮೋಗುಣ ವಿಚಾರ.

| ಅಂತರಗುಣತ್ರಯ— | ತಮೋಗುಣ ದ್ವಿಗುಣರಜೋಭಾಗವಿವರ |
|---|---|
| ೧ ಭಾಗ ರಜೋಗುಣ | ೧ ತಮಸ್ಸು |
| ೧೦ ಭಾಗ ತಮೋಗುಣ | ೧೦೦ ರಜಸ್ಸು |
| ೧೦೦ ಭಾಗ ಸತ್ವಗುಣ | ೧೦೦೦೦ ಸತ್ವ |
| ೧೧೧ | ೧೦,೧೦೧ |

ಈ ರಾಶಿ ಭೂತವಾದ ಸತ್ವ, ರಜ, ತಮೋಗುಣಳಿಗೆ ಶ್ರೀ ಭೂ ದುರ್ಗಾ ಈ ರೂಪಗಳು ನಿಯಾಮಕವಾಗಿರುತ್ತವೆ.

ಇನ್ನು ಮಹತ್ತತ್ವದ ವಿಚಾರ– ರಜೋರಾಶಿಯೊಳಗಿನ ರಜಃಸತ್ವ, ಮಹಾಪ್ರಳಯದಲ್ಲಿ ಮಹತತ್ವದ ಸಂಹಾರವಾದಾಗ, ಶುದ್ಧ ಸತ್ವರಾಶಿಯೊಳಗೆ ಕೂಡುವಂಥ ೧೦ ಭಾಗರಜಃ ಸತ್ವ, ಹಾಗೆಯೇ ತಮೋರಾಶಿಯೊಳಗೆ ಕೂಡುವಂಥ ೧ ಭಾಗ ರಜಸತ್ವ, ಸತ್ವರಾಶಿಯೊಳಗೆ ಕೂಡುವಂಥ ಒಂದು ಭಾಗ ರಜಸತ್ವ;ಹೀಗೆ ೧೨ ಭಾಗ ರಜಸತ್ವ,ತಮೋರಾಶಿಯೊಳಗಿನ ಒಂದು ಭಾಗ ತಮ, ೧೩ ಭಾಗದಿಂದ ಮಹತ್ತತ್ವದ ನಿರ್ಮಾಣ.

ಕ್ರೋಡೀಕರಣದಿಂದ ಮಹತ್ತತ್ವ ನಿರ್ಮಾಣ— ಮಹತ್ತತ್ವದೊಳಗೆ ಬಿದ್ದ ಗುಣಗಳ ವಿವರ. ೧ ಮಡಿ ತಮಸ್ಸು,ಅದರ ಹತ್ತುಮಡಿ ರಜಸ್ಸು, ಅದರ

(ನೂರು) ಸಾವಿರ ಮಡಿ ಸತ್ವ ಈ ಒಂದೊಂದು ಗುಣಗಳು ಮೂರು ಪ್ರಕಾರ.

ಇಂಥ ಮಹತ್ತತ್ವಕ್ಕೆ ನಾಲ್ಕು ಭಾಗದಿಂದ ನಿರ್ಮಾಣವು.ಅದು ಹೇಗಂದರೆ. ಮೊದಲಿಗೆ ಮಹತ್ತತ್ವನಾಶವಾಗಿ ಶುದ್ಧ ಸತ್ವರಾಶಿಯೊಳಗೆ ಕೂಡುವಂಥ ೧೦ ಭಾಗ ರಜಃಸತ್ವಕೂಡಿ ಒಂದು ಭಾಗ, ಮತ್ತು ತಮೋರಾಶಿಯೊಳಗೆ ಕೂಡುವಂಥ ಒಂದು ಭಾಗ ರಜಃಸತ್ವ, ಒಂದೊಂದು ಭಾಗ ಸ್ವರಾಶಿ ರಜ. ಸತ್ವದಿಂದ ಒಂದೊಂದು ಭಾಗ ರಜಸತ್ವ ಮತ್ತು ತಮೋ ರಾಶಿಯೊಳಗಿಂದ ಬಂದಂಥ ಒಂದು ತಮೋ ಭಾಗ; ಹೀಗೆ ನಾಲ್ಕು ಭಾಗಗಳಿಂದ ಮಹತತ್ವದ ಸೃಷ್ಟಿ.

ಇಂಥ ಮಹತ್ತತ್ವವು ಶುದ್ಧ ಸತ್ವಪ್ರಾಚುರ್ಯವೆಂಬ ಕಾರಣದಿಂದ, ಸತ್ವಾಧಿಕವೆನಿಸಿಕೊಂಬುವದು. ಮಹತ್ತತ್ವಕ್ಕೆ ಶುದ್ಧಸತ್ವದೊಳಗಿನ ಸತ್ವ ಬಿಂದುಗಳು ಬಿದ್ದಿಲ್ಲ. ರಜೋಗುಣದಿಂದಲೇ ನಿರ್ಮಾಣವಾದರೂ, ಬಾಹ್ಯ ಸತ್ವಾಧಿಕ್ಯ ಹೇಗಂದರೆ– ರಜೋರಜ, ಸತ್ವ ಪ್ರಾಚುರ್ಯವೆಂಬ ಕಾರಣದಿಂದ ಬಾಹ್ಯ ಸತ್ವಾಧಿಕ್ಯ ವಿರುತ್ತದೆ.

"ಮಹತಸ್ತುವಿಕುರ್ವಾಣಾತ್‌ರಜಃಸತ್ವೋಪಬೃಂಹಿತಾತ್"ಎಂದು ದ್ವಿತೀಯ ಸ್ಕಂಧ ಭಾಗವತ ಪ್ರಮಾಣ. ಮಹತ್ತತ್ವದಲ್ಲಿ ವಿಶೇಷವಾಗಿ ಸತ್ವಬಿಂದುಗಳೇ ಹೆಚ್ಚಿಗಿದ್ದ ಕಾರಣ ಸತ್ವಪ್ರಚುರವೆನಿಸಿತು. ಬ್ರಹ್ಮದೇವರ ಶರೀರ ಮಹತ್ತತ್ವಾತ್ಮಕವಾದ ಕಾರಣ ಸತ್ವ ಪ್ರಚುರರೆಂದು ಕರೆಸಿಕೊಳ್ಳುತ್ತಾರೆ. ಮೇಲೆ ವಿವರಿಸಿದ ಪ್ರಮಾಣಗಳ ಸಾರಾಂಶವೇ ಇಷ್ಟು. ವಿವರ ಸೃಷ್ಟಿ ಪ್ರಕರಣ ಸುಳಾದಿಯಲ್ಲಿ ನೋಡುವದಾಗಿ ವಿನಂತಿ.

## ತಾಮ್ರಪರ್ಣೀಯಾ

"ವಾಣೀಮುಖ ಸರೋಜ ಇನ" "ವಾಣೀ।ಗೀರ್ವಾಗ್ವಾಣೀ ಸರಸ್ವತೀತ್ಯಭಿಧಾನಾತ್ ಸರಸ್ವತೀ,ತಸ್ಯಾಃ ಮುಖಮೇವ ಸರೋಜಂ ಕಮಲಂ-"ಪದ್ಮಮಿತ್ಯಮರಃ। ತಸ್ಯ ಇನಃಸೂರ್ಯಃ ತಸ್ಯ ಸಂಬುದ್ಧಿಃ। "ಗರುಡಶೇಷಶಶಾಂಕದಳಶೇಖರರ ಜನಕ"॥ ಗರುಡಶ್ಚ ಶೇಷಶ್ಚ, (ಶಶಾಂಕದಳಃ ಬಾಲಚಂದ್ರಃ ಶೇಖರೇ ಮುಕುಟೇ। ಶೇಖರಂ ಶಿರಭೂಷಣಮಿತ್ಯಭಿಧಾನಾತ್। ಕಿರೀಟೇ ಯಸ್ಯ ಸಃ ತಥೋಕ್ತಃ ರುದ್ರಶ್ಚ,) ಗರುಡಶೇಷಶಶಾಂಕದಳಶೇಖರಾಃ। ತೇಷಾಂ ಜನಕಃ ಉತ್ಪಾದಕಃ ತಸ್ಯಸಂಬುದ್ಧಿಃ। ಹೇಗರುಡಶೇಷರುದ್ರತಾತ। ನನು ಗರುಡಶೇಷ



ರುದ್ರಾಣಾಂ ಜನಕತ್ವಂ ಬ್ರಹ್ಮಣಃಕಥಮಿತ್ಯತಆಹ॥ಬ್ರಹ್ಮಣೋ ಮಹತ್ತತ್ವಾತ್ಮಕತ್ವಾದ್ವೈಕಾರಿಕತೈಜಸತಾಮಸಾಹಂಕಾರಭೇದೇನಾಹಂಕಾರಸ್ಯ ದಳತ್ರಯತ್ವಾತ್ ಗರುಡಶೇಷರುದ್ರಾಣಾಂ ತದಾತ್ಮಕತ್ವಾದ್ಬ್ರಹ್ಮಣಃ ತಜ್ಜನಕತ್ವಂ ಯುಕ್ತಮ್। ‡ ಪ್ರಕೃತ್ಯಾಂ ಪುರುಷೋಜೀವಃಕಾಲೋ ವಾಗ್ವಾಯುಯೋಗತಃ। ಸರ್ಪಾಕಾರೋಭವಜ್ಜೀವಃ ಕಾಲೋಭೂತ್ ಪಕ್ಷಿರೂಪಧೃಕ್। ತತೋಬ್ರಹ್ಮಸುತಃ ಶಿವ" ಇತಿ ವಿಷ್ಣುರಹಸ್ಯೇ॥"ಹೇ ಜಗದ್ಗುರುವೆ!" ಬ್ರಹ್ಮಣಃ ಜಗದ್ಗುರುತ್ವಂಕಥಮಿತಿ? ತತ್ರಾಹ" "ಅಸಂಶಯಃ ಸಂಶಯಚ್ಛೇತ್ತಾ ಗುರುರುಕ್ತೋಮನೀಷಿಭಿರಿತಿ" ವಚನಾತ್ ಪ್ರಳಯೇಪಿ ಪ್ರತಿಭಾತಪರಾವರತ್ವಾದೇವ ಸರ್ವಜ್ಞತ್ವಾಚ್ಚ ಜಗದ್ಧಿತೋಪದೇಷ್ಟೃತ್ವಾಚ್ಚ ಸ್ವರೂಪೋದ್ಧಾರಕತ್ವಾಚ್ಚ ಬ್ರಹ್ಮಣಃಜಗದ್ಗುರುತ್ವಂ ಯುಕ್ತಮೇವ॥ "ತ್ವಚ್ಚರಣಗಳಿಗಭಿವಂದಿಸುವೆ" ತವಚರಣಯೋಃ ನಮಸ್ಯೇ ನಮಾಮಿ। "ಪಾಲಿಪುದುಸನ್ಮತಿಯಾ" ಸುಬುದ್ಧಿಂ ಹರಿತತ್ವವಿಷಯಿಣೀಂ ಮತಿಂ। ಧಾತೂನಾಮನೇಕಾರ್ಥತ್ವಾತ್ ಪಾಲಿಪುದು ಇತ್ಯನೇನ ದಾತವ್ಯಮಿತ್ಯರ್ಥಃ। ತ್ವಯೇತಿ ಶೇಷಃ ॥ ೩ ॥

## ಕನ್ನಡಾರ್ಥ

ವಾಣೀಮುಖ ಸರೋಜ ಇನ= ವಾಣೀ= "ಗೀರ್ವಾಗ್ವಾಣೀ ಸರಸ್ವತೀ" ಎಂಬ ಕೋಶದಂತೆ ಸರಸ್ವತೀ, ಅವಳ ಮುಖಸರೋಜ= ಕಮಲದರಂತಿರುವ (ಕಮಲಸದೃಶವಾದ)ಮುಖ, ಅದಕ್ಕೆ ಇನ=ಸೂರ್ಯ; ಇದರ ಸಂಬೋಧನ ವಿಭಕ್ತಿ. ಸರಸ್ವತಿಯ ಕಮಲಸದೃಶವಾದ ಮುಖಕ್ಕೆ ಸೂರ್ಯನಂತಿರುವವನೇ!

"ಗರುಡಶೇಷಶಶಾಂಕದಲಶೇಖರರ ಜನಕ" ಗರುಡನೂ-ಶೇಷನೂ;ಶಶಾಂಕದಲಶೇಖರ=ಶಶ=ಮೊಲ,ಅದರ ಅಂಕ=ಚಿಹ್ನವುಳ್ಳವನು ಶಶಾಂಕ (ಬಹು.ವ್ರೀ) ಶಶಾಂಕನ ದಲ=ಶಶಾಂಕದಲ. (ಷ. ತ. ಸ.) ಅಂದರೆ-ಚಂದ್ರನ ಅರ್ಧಭಾಗವು ಅಂದರೆ ಖಂಡಚಂದ್ರಮನು ಎಂದು ತಾತ್ಪರ್ಯ. ಶಶಾಂಕದಲವು ಶೇಖರದಲ್ಲಿ= ಮುಕುಟದಲ್ಲಿ ಯಾವನಿಗೋ ಅವನು ಶಶಾಂಕದಲ ಶೇಖರನು=(ಬ್ರ. ವ್ರಿ. ಸ.)

‡ ಪ್ರಕೃತಿಯಲ್ಲಿ ಪುರುಷನಾಮಕನಾದ ಚತುರ್ಮುಖನು ಉತ್ಪನ್ನನಾದನು. ಅವನಿಂದ ವಾಣಿಯಲ್ಲಿ ಜೀವಾಭಿಮಾನಿಯಾದ ಶೇಷನು, ಕಾಲಾಭಿಮಾನಿಯಾದ ಗರುಡನು, ಅನಂತರ ರುದ್ರನು, ಇವರು ಹುಟ್ಟಿದರು.

ಇವರಿಗೆ ಜನಕನೇ ! ಎಂದು ಸಂಬೋಧನಾರ್ಥವು.

ಬ್ರಹ್ಮದೇವರು ಗರುಡಶೇಷರುದ್ರರಿಗೆ ಜನಕರು ಹೇಗೆ ? ಎಂದರೆ ಮಹತ್ತತ್ವಶರೀರವುಳ್ಳವರು ಬ್ರಹ್ಮದೇವರು. ಈಮಹತ್ತತ್ವದಿಂದ "ವೈಕಾರಿಕ, ತೈಜಸ, ತಾಮಸ" ಎಂದು ಮೂರು ವಿಧವಾದ ಅಹಂಕಾರತತ್ವವು ಹುಟ್ಟಿತು. ಈ ಮೂರುವಿಧ ಅಹಂಕಾರಕ್ಕೆ ಗರುಡ ಶೇಷ ರುದ್ರರು ಅಭಿಮಾನಿಗಳಾಗಿರುವರು; ಆದುದರಿಂದ ಚತುರ್ಮುಖಬ್ರಹ್ಮನು ಇವರಿಗೆ ಜನಕನಾಗಿರುತ್ತಾನೆ. "ಮಹತ್ತತ್ವಾದಹಂಕಾರಂ" ಎಂದು ಮುಂತಾದ ವಿಷ್ಣುರಹಸ್ಯದ ವಚನವು ಇದರಲ್ಲಿ ಪ್ರಮಾಣವಾಗಿರುತ್ತದೆ.

"ಹೇ ಜಗದ್ಗುರುವೆ"–ಬ್ರಹ್ಮದೇವರು ಪ್ರಲಯದಲ್ಲಿಯೂ ಪರಮಾತ್ಮನನ್ನು ಕಾಣುವಂತಹಪ್ರತಿಭಾಯುಕ್ತರೂ ಸರ್ವಜ್ಞರೂ,ಜಗತ್ತಿಗೆ ಹಿತೋಪದೇಶಕರೂ, ಸ್ವರೂಪವನ್ನು ಉದ್ಧರಿಸುವವರೂ, ಆಗಿರುವದರಿಂದ " ಅಸಂಶಯಃ " ಎಂದು ಹೇಳಿದಂತೆ ಅವರು ಜಗದ್ಗುರುಗಳೆಂಬುದು ಅತ್ಯಂತ ಯುಕ್ತವೇ !

"ತ್ವಚ್ಚರಣಗಳಿಗಭಿವಂದಿಸುವೆ" ತವ-ಚರಣಗಳಿಗೆ= ನಿನ್ನ ಅಡಿಗಳಿಗೆ ಅಭಿವಂದಿಸುವೆ ನಮಸ್ಕರಿಸುವೆ. ಸನ್ಮತಿಯ= ಹರಿತತ್ವವನ್ನು ವಿಷಯೀಕರಿಸುವ ಸದ್ಬುದ್ಧಿಯನ್ನು, ಪಾಲಿಪುದು=ಕರುಣಿಸುವದು-ಕೊಡುವದು" ಎಂದು ಅರ್ಥ. || ೩ ||

**ಅವತರಣಿಕಾ- ಇದಾನೀಂ ಸರ್ವೇಷಾಮುತ್ತಮ ಮಧ್ಯಮಾಧಮಾನಾಂ ಜೀವಾನಾಂ ಅಂತಃ ಸ್ಥಿತ್ವಾ ಶ್ವಾಸರೂಪಜಪಾದೀನ್ ಕೃತ್ವಾ, ತತ್ತದ್ಯೋಗ್ಯತಾನುಸಾರೇಣ ತೇಷಾಂ ಸ್ವಗತಿದಾತೃತ್ವಾದ್ವಾಯುಂ ಸ್ತೌತಿ ||**

**ಅರ್ಥ- ಈಗ ಸಕಲ ಉತ್ತಮ ಮಧ್ಯಮ ಅಧಮ ಜೀವರ ಅಂತರಂಗದಲ್ಲಿದ್ದು, ಶ್ವಾಸರೂಪವಾದ ಹಂಸಮಂತ್ರ ಜಪವನ್ನು ಮಾಡಿ ಅವರವರ ಯೋಗ್ಯತಾನುಸಾರೇಣ ಅವರಿಗೆ ನಿಜಗತಿಯನ್ನು ಕೊಡುವದರಿಂದ ಶ್ರೀ ವಾಯುದೇವರ ಸ್ತೋತ್ರವನ್ನು ಮಾಡುತ್ತಾರೆ.**

ಮೂಲ- **ಆರು ಮೂರೆರಡೊಂದು ಸಾವಿರ |**
**ಮೂರೆರಡು ಶತಶ್ವಾಸ ಜಪಗಳ |**
**ಮೂರುವಿಧ ಜೀವರೊಳಗಬ್ಜಜಕಲ್ಪಪರಿಯಂತ ||**



**ತಾರಚಿಸಿ ಸತ್ವರಿಗೆ ಸುಖ ಸಂ- |**
**ಸಾರ ಮಿಶ್ರರಿ ಗಧಮಜನರಿಗ- |**
**ಪಾರದುಃಖಗಳೀವ ಗುರು ಪವಮಾನ ಸಲಹೆಮ್ಮ ||೪||**

## ತಾಮ್ರಪರ್ಣೀಯಾ

"ಆರು ಮೂರೆರಡೊಂದು ಸಾವಿರೇತಿ || ಷಟ್‌ಶತಾಧಿಕ ಏಕವಿಂಶತಿಸಹಸ್ರಾಣಿ - ಶ್ವಾಸರೂಪಹಂಸಮಂತ್ರಜಪಾನ್, ಮೂ ರು ವಿ ಧ ಜೀವರೊಳಗೆ ಇತ್ಯತ್ರ ಸತ್ವರಜಸ್ತಾಮಸಭೇದೇನ ತ್ರಿವಿಧೇಷು ಸ್ಥಿತ್ವಾ ಭೂ-ಅಭೂ-ಭೂರಭೂರಿತಿ, ಅಬ್ಜಜಕಲ್ಪ ಪರ್ಯಂತ್ಯೇತ್ಯತ್ರ || ಬ್ರಹ್ಮಕಲ್ಪ ಪರ್ಯಂತಮಿತ್ಯರ್ಥಃ | ಸ್ವಯಂ ಕೃತ್ವಾ | ಸತ್ವರಿಗೆ ಸುಖಮಿತ್ಯತ್ರ=ಬ್ರಹ್ಮಾದಿ ತೃಣಾಂತ ಮುಕ್ತಿಯೋಗ್ಯಜೀವಾನಾಂಸ್ವಸ್ವರೂಪಾನಂದಾವಿರ್ಭಾವಮೋಕ್ಷಂ ದ ದಾ ತಿ || ದನು ವಾಯೋರ್ಮೋಕ್ಷದಾತೃತ್ವಂ ಕಥಮಿತ್ಯಾಹ|| † " ಸವನಾನ್ ಬ್ರಹ್ಮಗಮಯತೀತಿ ಶ್ರುತೇಃ | " ವಿಷ್ಣುರ್ಹಿದಾತಾ ಮೋ ಕ್ಷ ಸ್ಯ ವಾಯುಶ್ಚ ತದನುಜ್ಞಯೇತಿ " ಸ್ಮೃತೇಶ್ಚ ವಾಯೋಃ ಮೋಕ್ಷದಾತೃತ್ವಮಸ್ತೀತ್ಯರ್ಥಃ | ಮಿಶ್ರರಿಗೆ=ರಜೋಜೀವಾನಾಂ ನಿತ್ಯಸಂಸಾರಿಣಾಂ ಸಂಸಾರಂ ಸುಖದುಃಖಾತ್ಮಕಫಲಂ ದದಾತಿ || " ತ್ರಿದಿವ ನಿರಯಭೂಗೋಚರಾನ್ನಿತ್ಯ ಬದ್ಧಾನಿತಿ " ವಚನಾತ್ | ಅಧಮ ಜನರಿಗಪಾರ ದುಃಖಗಳೀವೇತ್ಯತ್ರ | ತಮೋಜೀವಾನಾಂ ಕಲ್ಯಾದೀನಾಂ ತಮಃಪ್ರಾಪ್ತಿಃವಾಯುನ್ನೈವ ಭವಿಷ್ಯತಿಇತಿವಚನಾತ್"ಸಾತ್ವಿಕಾ ದೇವತಾಃ ಪ್ರೋಕ್ತಾಃ ಮಾನುಷಾ ರಾಜಸಾಃ ಸ್ಮೃತಾಃ|ದೈತ್ಯಾಸ್ತು ತಾಮಸಾ ವಿಧಂ ಜೀವಾನಾಂ ತ್ರಿವಿಧಂ ಸ್ಮೃತಮಿತಿವಚನಾತ್ | ಹೇಗುರುಪವಮಾನ ಸಲಹೆಮ್ಮ ಇತ್ಯತ್ರ ಅಸ್ಮಾನ್ ಪಾಹೀತ್ಯನ್ವಯಃ |

## ಕನ್ನಡಾರ್ಥ

ಆರು ಮೂರೆರಡೊಂದು ಸಾವಿರ= ಇಪ್ಪೊತ್ತೊಂದು ಸಹಸ್ರದ ಮೇಲೆ ಆರುನೂರು (೨೧೬೦೦) ಶ್ವಾಸರೂಪ (ಉಸಿರು)ವಾದ ಹಂಸಮಂತ್ರದ ಜಪಗಳನ್ನು, ಸಾತ್ವಿಕ, ರಾಜಸ ತಾಮಸ ಎಂಬ ಮೂರು ತರಹದ ಜೀವರಗಳಲ್ಲಿ ಇದ್ದು "ಭೂ–ಅಭೂ–ಭೂರಭೂ" ಎಂದು "ಅಬ್ಬಜಕಲ್ಪ" ಬ್ರಹ್ಮಕಲ್ಪ ಪರ್ಯಂತವಾಗಿ "ತಾರಚಿಸಿ"=ಸ್ವತಃ ಮಾಡಿ, " ಸತ್ವರಿಗೆ ಸುಖ" ಬ್ರಹ್ಮನಿಂದ

ಆರಂಭಿಸಿ ತೃಣಗಳ ವರೆಗೂ ಇರುವ ಮುಕ್ತಿಯೋಗ್ಯರಾದ ಸುಜೀವರಿಗೆ ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷವನ್ನು ಕೊಡುತ್ತಾನೆ. " ಸಪಿನಾನ್ " ಎಂದು ಮುಂತಾದ ಶ್ರುತಿಸ್ಮೃತಿಗಳಿರುವದರಿಂದ ವಾಯುದೇವನಿಗೂ ಮೋಕ್ಷದಾತೃತ್ವವು ಇರುವದೆಂದು ತಿಳಿಯಬೇಕು.

ಸಂಸಾರ ಮಿಶ್ರರಿಗೆ— ನಿತ್ಯ ಸಾಂಸಾರಿಕರಾದ ರಾಜಸ ಜೀವರಿಗೆ " ತ್ರಿದಿವನಿರಯಭೂ " ಎಂಬ ವಚನದಂತೆ ಸುಖ ದುಃಖಮಿಶ್ರವಾದ ಫಲವನ್ನು ಕೊಡುತ್ತಾನೆ. "ಅಧಮಜನರಿಗಪಾರದುಃಖಗಳೀವ"— ತಮೋಜೀವರೆನಿಸಿರ್ಪ ಕಲಿ ಮುಂತಾದ ದೈತ್ಯರಿಗೆ ಅಂಧಃತಮಸ್ಸೆಂಬ ದುಃಖವನ್ನು ಕೊಡುತ್ತಾನೆ. ಈ ವಿಷಯದಲ್ಲಿ "ಕಲ್ಯಾದೀನಾಂ" ಎಂದು ಮುಂತಾದ ಭವಿಷ್ಯತ್ಪುರಾಣದಲ್ಲಿಯ ವಚನಗಳು ಪ್ರಮಾಣವಾಗಿರುತ್ತವೆ. ಇಂಥ ಗುರುಪವಮಾನನೇ! ನಮ್ಮನ್ನು ಸಲುಹು" ಎಂದು ಅನ್ವಯಾರ್ಥ.

ಅವತರಣಿಕಾ— **ಸಕಲ ವೇದಾಭಿಮಾನಿತ್ವಾ ದ್ವಾಜ್ಮಾನಿತ್ವಾದ್ವಾಣೀಂ ಪ್ರಣಮತಿ॥**

ಈಗ ಸಕಲ ವೇದಾಭಿಮಾನಿಗಳೂ ಸಕಲ ವಾಕ್ಯರೂಪವಾದವಾಙ್ನಿಯಾಮಕಳೂ ಆದುದರಿಂದ ಸರಸ್ವತೀ ದೇವಿಯರನ್ನು ನಮಿಸುತ್ತಾರೆ.

ಮೂಲ— **ಚತುರ ವದನನ ರಾಣಿಯು(ಅ) ತಿರೋ–।**
**ಹಿತ ವಿಮಲ ವಿಜ್ಞಾನಿ ನಿಗಮ।**
**ಪ್ರತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ ॥**
**ನತಿಸಿ ಬೇಡುವೆ ಜನನಿ ಲಕ್ಷ್ಮೀ।**
**ಪತಿಯ ಗುಣಗಳ ತುತಿಪುದಕೆ ಸ– ।**
**ನ್ಮತಿಯ ಪಾಲಿಸಿ ನೆಲೆಸು ನೀ ಮದ್ವದನ ಸದನದಲಿ ॥ ೫ ॥**

**ತಾಮ್ರಪರ್ಣೀಯಾ**

"ಚತುರವದನನರಾಣಿ"ಚತ್ವಾರಿ ವದನಾನಿ ಆಸ್ಯಾನಿ ಯಸ್ಯ ಸಃ ತಥೋಕ್ತಃ ಬ್ರಹ್ಮಾ,ರಾಣೀ ಪತ್ನೀತ್ಯರ್ಥಃ। ತಸ್ಯಾಃಸಂಬುದ್ಧಿಃ। ಹೇ ಚತುರವದನನರಾಣಿ ! "ಸರಸ್ವತೀಂತು ತತ್ರಾದ್ಯಾಂ ಬ್ರಹ್ಮಣಾ ಸಮಯೋಜಯದಿತಿ " ವಿಷ್ಣು ರಹಸ್ಯೇ॥ "ಅತಿರೋಹಿತ ವಿಮಲ ವಿಜ್ಞಾನಿ"ಪರಶುಕ್ಲತ್ರಯತ್ವಾದೇವ ತಿರೋಭಾವರಹಿತ ನಿರ್ದುಷ್ಟವಿಜ್ಞಾನವತೀತ್ಯರ್ಥಃ। "ಪರಶುಕ್ಲತ್ರಯೋ ಬ್ರಹ್ಮಾ ವಾಯುರ್ವಾಣೀಚ ಭಾರತೀ"ಇತಿ ವಚನಾತ್। ನಿಗಮ ಪ್ರತತಿಗಳಿಗಭಿಮಾನಿ=ಗಾಯತ್ರೀರೂಪೇಣ ಸಕಲವೇದರಾಶಿಮಾನೀತ್ಯರ್ಥಃ।"ವಾಣೀ ವೇದಾಭಿಮಾನಿನೀ"ಇತಿವಚನಾತ್॥ ವೀಣಾಪಾಣಿ। ವೀಣಾ ಪಾಣೌ ಯಸ್ಯಾಃಸಾ ತಥೋಕ್ತಾ।" ಹೇ ವೀಣಾಪಾಣಿ। ಬ್ರಹ್ಮಾಣಿ=ಬ್ರಹ್ಮವೇದಃ ತಪಸ್ತತ್ವಂ ಬ್ರಹ್ಮಾ ವಿಪ್ರಃಪ್ರಜಾಪತಿರಿತ್ಯಭಿಧಾನಾತ್ "ಬ್ರಹ್ಮ ವೇದಾನ್ ಣಯತಿ" ಪ್ರಾಪಯತೀತೀವಾ । ಬ್ರಹ್ಮ ತಪಃ ಪ್ರಾಪಯತೀತಿವಾ, ಬ್ರಹ್ಮತತ್ವಂ ಪ್ರಾಪಯತೀತಿವಾ, ಬ್ರಹ್ಮ ಪರಮಾತ್ಮಾನಂ ಪ್ರಾಪಯತೀತಿವಾ। ಜೀವಾನಿತಿಶೇಷಃ । ಬ್ರಹ್ಮಣಃ ಇಯಂ ಬ್ರಹ್ಮಾಣೀತಿ ವಿಗ್ರಹೇ ಕೃತೇ ಇತಿ ಪುನರುಕ್ತೇಃ, ತಚ್ಚಿಂತ್ಯಂ । ತ್ವಾಮಿತ್ಯಧ್ಯಾಹೃತ್ಯಾನ್ವಯಃ। ತ್ವಾಂನತ್ವಾ, ಬೇಡುವೆ=ಯಾಚೇ। ಯಾಚಾಮಿ। ಹೇ ಜನನಿ! ಲಕ್ಷ್ಮೀಪತಿಯ ಗುಣಗಳ ತುತಿಪುದಕೆ=ರಮಾರಮಣಸ್ಯ ಹರೇಃ ಜ್ಞಾನಾನಂದಾದಿಗುಣಾನ್ ಸ್ತೋತುಂ। ಸನ್ಮತಿಯ, ಏಕಾಗ್ರಬುದ್ಧಿಂ।ಪಾಲಿಸಿ=ದತ್ವಾ, ತ್ವಂ ಮದ್ವದನಸದನದಲಿ ಮನ್ಮುಖಮಂದಿರೇ, ನೆಲಿಸು=ನಿವಸ" ಇತ್ಯರ್ಥಃ ॥ ೫ ॥



**ಕನ್ನಡಾರ್ಥ**

"ಚತುರವದನನ ರಾಣಿ" ಚತುರವದನ = ನಾಲ್ಕುಮುಖವುಳ್ಳವನು (ಬ. ಪ್ರೀ. ಸ.) ಬ್ರಹ್ಮನು; ಅವನ ರಾಣಿ=ಪತ್ನಿ. " ಸರಸ್ವತೀಂ ತುತತ್ರಾದೌ " ಎಂಬ ವಿಷ್ಣುರಹಸ್ಯದ ವಚನದಂತೆ ಸರಸ್ವತಿಯು-ಬ್ರಹ್ಮಪತ್ನಿಯು. ಹೇ ಬ್ರಹ್ಮಪತ್ನಿಯಾದ ಸರಸ್ವತಿಯೇ ! " ಅತಿರೋಹಿತ ವಿಮಲವಿಜ್ಞಾನಿ" ಪರಶುಕ್ಲತ್ರಯದಲ್ಲಿ ಒಬ್ಬರಾದುದರಿಂದಲೇ ನಿರ್ದುಷ್ಟವಾದ ತಿರೋಧಾನವನ್ನು (ನಾಶವನ್ನು) ಹೊಂದದಿರುವ ವಿಜ್ಞಾನವಂತಿಯೇ ! "ಬ್ರಹ್ಮ-ವಾಯು, ಸರಸ್ವತಿ ಭಾರತಿಯರು ಪರಶುಕ್ಲತ್ರಯರು" ಎಂದು ಪ್ರಮಾಣವಿರುವದರಿಂದ ಸರಸ್ವತಿಯು ಪರಶುಕ್ಲತ್ರಯದಲ್ಲಿ ಸೇರಿದವಳು.

" ನಿಗಮಪ್ರತತಿಗಳಿಗಭಿಮಾನಿ " "ಸರಸ್ವತಿಯು ವೇದಾಭಿಮಾನಿನೀ" ಎಂಬ ಪ್ರಮಾಣಾನುಸಾರವಾಗಿ ಗಾಯತ್ರೀರೂಪದಿಂದ ಸಕಲವೇದರಾಶಿಗಳಿಗಭಿಮಾನಿಯೆಂದರ್ಥ

"ವೀಣಾಪಾಣಿ"–ಪಾಣಿಃ-ಕೈ.ಅದರಲ್ಲಿ ವೀಣೆಯು ಯಾವಳಿಗೋ ಅವಳು ವೀಣಾಪಾಣಿ. [ ಬ. ಪ್ರೀಸ. ]

"ಬ್ರಹ್ಮಾಣಿ!"—"ಬ್ರ ಹ್ಮ ವೇ ದ" ಎಂಬ ಕೋಶವಿರುವದರಿಂದ

[೧] ಬ್ರಹ್ಮ=ವೇದಗಳನ್ನು, ಣಯತಿ=ಹೊಂದಿಸುವವಳು

[೨] ಬ್ರಹ್ಮ=ತಪಸ್ಸನ್ನು,=ಣಯತಿ=ಹೊಂದಿಸುವವಳು=

[೩] ಬ್ರಹ್ಮ=ಪರಮಾತ್ಮನನ್ನು, ಣಯತಿ=ಜೀವರಿಗೆ ಹೊಂದಿಸುವವಳು

[೪] "ಬ್ರಹ್ಮಣಃ ಇಯಂ="ಚತುರ್ಮುಖನ ಪತ್ನಿಯಾದವಳು."

ಹೀಗೆ ಅರ್ಥಗಳಾಗುವವು. ಕೊನೆಯ ವಿಗ್ರಹವನ್ನು ಮಾಡಿದರೆ, ಚತುರ ವದನನ ರಾಣಿ ಎಂಬುದರಿಂದ ಪೌನರುಕ್ತ್ಯದೋಷವು ಬರುವದರಿಂದ ಇದರಲ್ಲಿ ವಿಚಾರಾಂಶವಿರುತ್ತದೆ.

"ನಿನ್ನನ್ನು" ಎಂದು ಅಧ್ಯಾಹಾರಮಾಡಿ ಅನ್ವಯವನ್ನು ಹಚ್ಚಬೇಕು. ನಿನ್ನನ್ನು "ನತಿಸಿ=" ಸಮಸ್ಕರಿಸಿ. "ಬೇಡುವೆ=" ಯಾಚಿಸುವೆ. ಹೇಜನನಿ! "ಲಕ್ಷ್ಮೀಪತಿಯ ಗುಣಗಳ ತುತಿಪುದಕೆ" ರಮಾಪತಿಯ ಗುಣಗಳನ್ನು ಸ್ತುತಿಸಲು "ಸನ್ಮತಿಯ"= ನಿಶ್ಚಲ ಬುದ್ಧಿಯನ್ನು, ಪಾಲಿಸಿ=ಕೊಟ್ಟು, ನೀನು "ಮದ್ವದನ ಸದನದಲಿ= ನನ್ನ ಮುಖ ಮಂದಿರದಲ್ಲಿ "ನೆಲಿಸು=" ವಾಸಮಾಡು ಎಂದು ಅರ್ಥ ॥ ॥ ೫ ॥

ಅವತರಣಿಕಾ:– ಸದ್ಬುದ್ಧಿ ಪ್ರದಾತೃ ತ್ವಾತ್–ಸದ್ಭಕ್ತಿಪ್ರದಾತೃತ್ವಾತ್ ಬುದ್ಧ್ಯಭಿಮಾನಿನೀಂ ಭಕ್ತ್ಯಭಿಮಾನಿನೀಂ ಭಾರತೀಂ ಪ್ರಣಮತಿ ॥

ಸದ್ಬುದ್ಧಿ-ಸದ್ಭಕ್ತಿಗಳನ್ನು ಕೊಡುವವರಾದಕಾರಣ ಬುದ್ಧಿಗೂ, ಭಕ್ತಿಗೂ ಅಭಿಮಾನಿಗಳಾದ ಶ್ರೀ ಭಾರತೀದೇವಿಯುವರನ್ನು ನಮುಸ್ಕರಿಸುತ್ತಾರೆ.

**ಮೂಲ– ಕೃತಿರಮಣ ಪ್ರದ್ಯುಮ್ನನಂದನೆ ।**
**ಚತುರ ವಿಂಶತಿ ತತ್ವಪತಿ ದೇ– ।**
**ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನಿ ॥**
**ಸತತ ಹರಿಯಲಿ ಗುರುಗಳಲಿ ಸ ।**
**ದ್ರತಿಯ ಪಾಲಿಸಿ ಭಾಗವತ ಭಾ ।**
**ರತ ಪುರಾಣ ರಹಸ್ಯ ತತ್ವಗಳರುಪು ಕರುಣದಲಿ ॥ ೬ ॥**

ತಾಮ್ರಪರ್ಣೀಯಾ

"ಕೃತಿರಮಣ ಪ್ರದ್ಯುಮ್ನನಂದನೆ"= ಕೃತಿಪತೇಃ ಪ್ರದ್ಯುಮ್ನಸ್ಯ ಪುತ್ರೀ



ಇತ್ಯರ್ಥಃ । "ಚತುರವಿಂಶತಿತತ್ವಪತಿದೇವತಿಗಳಿಗೆ"= ಚತುರ್ವಿಂಶತಿತತ್ವಾನಿ ಕಾನಿ? ತೇಷಾಂ ಅಭಿಮಾನಿನಃ ಕೇ? ಇತ್ಯತಆಹ॥ಆದ್ಯಮವ್ಯಕ್ತಂ=ತದಭಿಮಾನಿನ್ಯೌ ಅಮುಖ್ಯತಯಾ ಸರಸ್ವತೀಭಾರತ್ಯೌ । ನನು ಅವ್ಯಕ್ತತತ್ವಾತ್ಮಾ [illegible] ಲಕ್ಷ್ಮೀರುದಾಹೃತೇತಿ ಶಾಂಡಿಲ್ಯಶ್ರುತ್ಯುಕ್ತತ್ವಾದವ್ಯಕ್ತಸ್ಯ [illegible]ಯಾಃ ಮುಖ್ಯಾಭಿಮಾನಿತ್ವಾತ್ತಾಂ ವಿಹಾಯ, ಅಮುಖ್ಯಾಭಿಮಾನಿನ್ಯೋಃ ಭಾರತೀಸರಸ್ವತ್ಯೋರ್ಗ್ರಹಣೇ ಕಿಂ ಬೀಜಮಿತ್ಯಪೇಕ್ಷಯಾಮಾಹ ॥ [illegible]ಯಾಃ ಅವ್ಯಕ್ತತತ್ವಾಭಿಮಾನಿತ್ವೇಪಿ ವಾ ಯೋ ಸ್ತ ದ್ಗು ರು ತ್ವಾ [illegible]ತ್ತಾಂ ವಿನಾ ವಾಣೀಭಾರತ್ಯೌ ಸಂಗ್ರಹೀತೇ ಇತಿಜ್ಞಾತವ್ಯಂ॥ತದುಕ್ತಂ। "ಅವ್ಯಕ್ತ ತತ್ವ ರೂಪಿಣ್ಯೌ ಭಾರತೀಚ ಸರಸ್ವತೀತಿ ಶಾಂಡಿಲ್ಯತತ್ವೇ ॥ ದ್ವಿತೀಯಂ ತು ಮಹತ್ತತ್ವಂ। ತದಭಿಮಾನಿನೌ ಬ್ರಹ್ಮವಾಯೂ, ತದುಕ್ತಂ। "ಬ್ರಹ್ಮವಾಯೂ ಮಹಾತ್ಮಾನೌ ಮಹತ್ತತ್ವ ನಿಯಾಮಕಾವಿತಿ ಶಾಂಡಿಲ್ಯೇ। ತೃತೀಯಮಹಂಕಾರಮಿತಿ । ತದಭಿಮಾನಿನಃ ಗರುಡಶೇಷ ರುದ್ರಾ ಇತಿ । ತದುಕ್ತಂ । "ಶೇಷವೀಂದ್ರ ಮೃಡಾಹ್ಯೇತೇ ಹ್ಯಹಂತತ್ವಾಭಿಮಾನಿನ ಇತಿ ಶಾಂಡಿಲ್ಯೇ। ಚತುರ್ಥಂ ತು ಮನಸ್ತತ್ವಂ ತದಭಿಮಾನಿನೌ ಇಂದ್ರಕಾಮೌ॥ತದುಕ್ತಂ॥ ಮನಸ್ತತ್ವಸ್ವರೂಪೌ ತೌ ಶಚೀಪತಿಮನೋಭವೌ ಇತಿ ಶಾಂಡಲ್ಯೇ । ಪಂಚಮಮ್-ಶ್ರೋತ್ರತತ್ವಂ॥ ತದಭಿಮಾನಿನ್ಯಃ ದಿಗ್ದೇವತಾ ಇಂದ್ರಾದಯಃ ಚಂದ್ರಮಾಶ್ಚ । ತದುಕ್ತಂ । ದಿಗ್ದೇವತಾಃ ಚಂದ್ರಮಾಶ್ಚ ಶ್ರೋತ್ರ ತತ್ವಾಭಿಮಾನಿನ ಇತಿ ಶಾಂಡಿಲ್ಯೇ । ಷಷ್ಠಂ ತು ತ್ವಕ್‌ತತ್ವಂ । ಸಪ್ತಮಂ ಚಕ್ಷುಸ್ತತ್ವಂ। ತದಭಿಮಾನಿನ್ಯೌ ದೇವತೇ ಅಹಂಕಾರಿಕಪ್ರಾಣಃಸೂರ್ಯಶ್ಚ। ತದುಕ್ತಂ ಪ್ರಾಣಸ್ತ್ವಗಾತ್ಮಾ ಸೂರ್ಯಶ್ಚ ಚಕ್ಷುರಿಂದ್ರಿಯ ದೇವತೇ ಇತಿ ಶಾಂಡಿಲ್ಯೇ।ಅಷ್ಟಮಂ ತು ಜಿಹ್ವಾತತ್ವಂ, ನವಮಂ ಘ್ರಾಣತತ್ವಂ।ತದಭಿಮಾನಿನ್ಯೌದೇವತೇ ವರುಣಶ್ಚಾಶ್ವಿನೌಚ। ತದುಕ್ತಂ॥ ಜಿಹ್ವಾತ್ಮಾ ವರಣೋಘ್ರಾಣಸ್ವರೂಪಾವಶ್ವಿನೌತಥೇತಿಶ್ಯಾಂಡಿಲ್ಯೇ ॥ ದಶಮಂ ವಾಕ್ ತತ್ವಂ । ತದಭಿಮಾನಿದೇವತಾ ವನಿಃ। ತದುಕ್ತಂ। ವಾಗಾತ್ಮಾ ಚ ತಥಾ ವನ್ಹಿರಿತಿಶಾಂಡಿಲ್ಯೇ । ಏಕಾದಶ ತತ್ವಂ ಪಾಣಿತತ್ವಂ। ತದಭಿಮಾನಿನ್ಯೋ ದೇವತಾಃ– ಶಚೀರತ್ಯನಿರುದ್ಧ ಸ್ವಾಯಂಭುವ ಬೃಹಸ್ಪತಿದಕ್ಷಾಃ ತದುಕ್ತಂ। ಶಚೀರತಿಶ್ಚಾನಿರುದ್ಧಸ್ತಥಾಸ್ವಾಯಂಭುವೋಃ ಮನುಃ। ಬೃಹಸ್ಪತಿಸ್ತಥಾ ದಕ್ಷ ಏತೇ ಪಾಣ್ಯಾತ್ಮಕಾಃಸ್ಮೃತಾಃ ಇತಿಗಾರುಡೇ।ದ್ವಾದಶಂ ತು ಪಾದತತ್ವಂ।

ತ್ರಯೋದಶಂ ಪಾಯುತತ್ವಂ। ತದಭಿಮಾನಿನೌ ದೇವತೇಜಯಂತೋಮಿತ್ರಶ್ಚ। ತದುಕ್ತಂ।ಪಾದಾತ್ಮಾ ಚ ಜಯಂತಶ್ಚ-ಪಾಯ್ವಾತ್ಮಾ ಮಿತ್ರಸಂಜ್ಞಕಃ ಇತಿ ವಚನಾತ್।ಚತುರ್ದಶಂಉಪಸ್ಥತತ್ವಂ । ವಿಶ್ವಾಮಿತ್ರಃ ವಶಿಷ್ಠಃಅತ್ರಿಃಮರೀಚಿಃಪುಲಹಃ ಕೃತುಃಪುಲಸ್ತ್ಯಃ ಅಭಿಮಾನಿನಃ । ತದುಕ್ತಂ । ಉಪಸ್ಥಮಾನಿನೌ ವೀಂದ್ರ ಬಭೂವುಸ್ತದನಂತರಮ್ । ವಿಶ್ವಾಮಿತ್ರೋವಶಿಷ್ಟೋಽತ್ರಿಃ ಮರೀಚಿಃ ಪುಲಹಃ ಕೃತುಃ। ಪುಲಸ್ತ್ಯಂಗಿರಸೌಚೈವ ತಥಾ ವೈವಸ್ವತೋಮನುಃ ಮನ್ವಾದ್ಯಾಃ ನವಸಂಖ್ಯಾಕಾಃ ಉಪಸ್ಥಾತ್ಮಾನಈರಿತಾ ಇತಿಗಾರುಡೇ।ಪಂಚದಶ ತತ್ವಂ ಶಬ್ದತತ್ವಂ । ತದಭಿಮಾನೀ ಬ್ರಹಸ್ಪತಿಃ । ಶಬ್ದಾತ್ಮಾಽಥ ಬಹ್ರಸ್ಪತಿರಿತಿ ಶಾಂಡಿಲ್ಯ ಶ್ರುತೇಃ। ಷೋಡಶಂ-ಸ್ಪರ್ಶತತ್ವಂ। ಸಪ್ತದಶಂ। ರೂಪತತ್ವಂ। ತದಭಿಮಾನಿನೌ ಅಪಾನವ್ಯಾನೌ ವಾಯೂ। ತದುಕ್ತಂ। ಅಪಾನಸ್ಪರ್ಶತತ್ವಾತ್ಮಾ- ರೂಪಾತ್ಮಾ ವ್ಯಾನನಾಮಕಃ ಇತಿ ಗಾರುಡೇ। ಅಷ್ಟಾದಶಂ-ರಸತತ್ವಂ।ಏಕೋನವಿಂಶತಿತತ್ವಂ ಗಂಧತತ್ವಂ। ತದಭಿಮಾನಿನೌ ಉದಾನಃ ಸಮಾನಶ್ಚ। ತದುಕ್ತಂ। ರಸಾತ್ಮಕಃ ಉದಾನಶ್ಚ ಸಮಾನೋ ಗಂಧ ಉಚ್ಯತ ಇತಿ ಗಾರುಡೇ।ವಿಂಶತಿತತ್ವಂ ಆಕಾಶತತ್ವಂ, ಏಕವಿಂಶತಿ ತತ್ವಂ ವಾಯುತತ್ವಂ।ತದಭಿಮಾನಿನೌ ಗಣೇಶಜಡವಾಯೂ।ತದುಕ್ತಂ।ವ್ಯೋಮಾತ್ಮಾ ಗಜವಕ್ತ್ರಶ್ಚ ವಾಯುರ್ವಾಯುಸ್ವರೂಪವಾನಿತಿ। ದ್ವಾವಿಂಶತಿತತ್ವಂ- ತೈಜಸಂ। ತ್ರಯೋವಿಂಶತಿ ತತ್ವಂ ಅಪ್‌ತತ್ವಂ। ತದಭಿಮಾನಿನೌಃ ಅಗ್ನಿ ವರುಣಶ್ಚ। ತದುಕ್ತಂ। ತೇಜಸ್ತತ್ವಾತ್ಮಕೋ ವನ್ಹಿಃ ಜಲಾತ್ಮಾ ವರುಣೋಮಹಾನ್ । ಚತುರ್ವಿಂಶತಿ ತತ್ವಂ ಪೃಥಿವೀತತ್ವಂ॥ ತದಭಿಮಾನಿನೀ ಧರಾ। ಧರೇತಿಕಾಚನದೇವತಾ।ಪೃಥಿವ್ಯಾತ್ಮಾ ಧರಾ ಚೈವ ದೇವೀವಿಷ್ಣೋರಧೀನಗಾ ಇತಿಶಾಂಡಿಲ್ಯಶ್ರುತೇಃ।ಏತೇಷಾಂ ಚತುರ್ವಿಂಶತಿತತ್ವಾಭಿಮಾನಿದೇವಾನಾಂ। "ಗುರುವೆನಿಸುತಿಹ" ತದಂತರ್ಯಾಮಿತ್ವೇನ ತನ್ನಿಯಮನಾದ್ಗುರುಃ । ಸರ್ವಜೀವಾಭಿಮಾನಿತ್ವಾಚ್ಚ ವಾಯೋಃ ಜಗದ್ಗುರುತ್ವಾತ್ ತೇಷಾಂ ಜಗದಂತಃಪಾತಿತ್ವಾ ತ್ತದ್ಗುರುತ್ವಂಯುಕ್ತಮೇವ। ತದುಕ್ತಂ ವಾಯುರ್ಹಿಸರ್ವಜೀವಾನಾಮಭಿಮಾನೀ ನಿಯಾಮಕಃ । ಬಲಮೇಧಾಧೃತಿಸ್ಥೈರ್ಯಧ್ಯಾನ ವೈರಾಗ್ಯಮಾನವಾನ್ । ಸದ್‌ಜ್ಞಾನಾನಂದ ಭಕ್ತ್ಯಾದಿಗುಣಮಾನೀ ಸಪಿಕಲಃ॥ ಆನಂದಾನುಭವಸ್ಯಾಪಿ ವಿಮುಕ್ತೇರಪಿ ಸಪ್ರಭುಃ ॥ ಔತ್ಪತ್ತಿಕಗುಣಸ್ಯಾಪಿ ಹ್ಯಭಿಮಾನೀ ಜಗದ್ಗುರುರಿತಿ ಸತ್ತತ್ವರತ್ನಮಾಲಾಯಾಂ‡॥ ಏತಾದೃಶಮಹಿಮೋಪೇತಸ್ಯ ವಾಯೋಶ್ಚತುರ್ವಿಂಶತಿ ತತ್ವೇಶಾಧಿಪತಿತ್ವಂ ಕಿಂ ಚಿತ್ರಂ। "ಮಾರುತನ"ಮಾರುತಸ್ಯವಾಯೋಃ। "ನಿಜಪತ್ನೀ"ನಿಯತ ಭಾರ್ಯಾ ಇತ್ಯರ್ಥಃ।ಏತಾದೃಶಃತ್ವಂ।"ಸತತಂ" ನಿರಂತರ। "ಹರಿಯಲಿ"-ಹರೌ, ಪರಮಾತ್ಮನಿ, ಗುರುಗಳಲಿ=ಜಗದ್ಗುರುವಾಯ್ವಾದಿಮೂಲಗುರು ಷು=ಸ್ವಗುರಾವಪಿ । "ರತಿಯ"=ಸಮೀಚೀನಾಸಕ್ತಿಂ। "ಪಾಲಿಸಿ"=ದತ್ವಾ, "ಭಾಗವತ ಭಾರತ ಪುರಾಣ ರಹಸ್ಯತತ್ವಗಳರುಪು ಕರುಣದಲಿ"। ಭಾಗವತಸ್ಯಭಾರತಸ್ಯ ಅಷ್ಟಾದಶ ಪುರಾಣಾನಾಂ ಚ ರಹಸ್ಯತತ್ವಮಿತಿ ಸರ್ವತ್ರಾಪಿ ಸಂಬಧ್ಯತೇ। ಜ್ಞಾಪಯ ಕರುಣಯೇತ್ಯರ್ಥಃ ॥ ೬ ॥



## ಕನ್ನಡಾರ್ಥ

"ಕೃತಿರಮಣ ಪ್ರದ್ಯುಮ್ನನಂದನೆ–" ಕೃತಿಯಪತಿಯಾದ ಪ್ರದ್ಯುಮ್ನನ ಪುತ್ರಿಯೆ ! "ಚತುರ ವಿಂಶತಿ ತತ್ವಪತಿ ದೇವತೆಗಳಿಗೆ"=ಇಪ್ಪತ್ತುನಾಲ್ಕು ತತ್ವಾಭಿಮಾನಿಗಳಾದ ದೇವತೆಗಳಿಗೆ. ಇಪ್ಪತ್ತುನಾಲ್ಕು ತತ್ವಗಳಾವವು ? ಅವುಗಳ ಅಭಿಮಾನಿಗಳಾರು ? ಎಂದರೆ— ಮೊದಲನೆಯದು (೧) ಅವ್ಯಕ್ತತತ್ವ. ಈ ಅವ್ಯಕ್ತ ತತ್ವಕ್ಕೆ ಅಮುಖ್ಯವಾಗಿ ಅಭಿಮಾನಿಗಳು ಭಾರತಿ ಸರಸ್ವತಿಯರು. "ಶ್ರೀ ಲಕ್ಷ್ಮೀದೇವಿಯು ಅವ್ಯಕ್ತತತ್ವಕ್ಕೆ ಅಭಿಮಾನಿ" ಎಂದು ಶಾಂಡಿಲ್ಯ ತತ್ವದಲ್ಲಿ ಹೇಳಿದಂತೆ ಮುಖ್ಯಾಭಿಮಾನಿಯಾದ ರಮಾದೇವಿಯನ್ನು ಬಿಟ್ಟು ಅಮುಖ್ಯರಾದ ಭಾರತಿ ಸರಸ್ವತಿಯರನ್ನು ಯಾಕೆ ತೆಗೆದುಕೊಳ್ಳಬೇಕು.("ಸ್ವೀಕರಿಸಬೇಕು)? ಎಂದು ಆಕ್ಷೇಪವು ಹುಟ್ಟುವದು. ಆದರೆ ಇಲ್ಲಿ "ತತ್ವಪತಿ ದೇವತೆಗಳಿಗೆ ಗುರುವೆನಿಸುತಿಹ" ಎಂಬ ವಿಶೇಷಣವನ್ನು ಕೊಟ್ಟರುತ್ತಾರೆ. ಅವ್ಯಕ್ತತತ್ವಾಭಿಮಾನಿಯೆಂದು ಶ್ರೀ ರಮಾದೇವಿಯನ್ನು ಪರಿಗ್ರಹಿಸಿದರೆ— "ಅವರಿಗೆ ಗುರುವು ವಾಯುವು" ಎಂಬ ಭಾವವು ಕೂಡುವದಿಲ್ಲ. ಮೂಲಕ್ಕೆ ವಿಸಂಗತವಾಗುತ್ತದೆ. ಆದುದರಿಂದ ಅಮುಖ್ಯ ಅಭಿಮಾನಿಗಳಾದ ಭಾರತಿ ಸರಸ್ವತಿಯರನ್ನು ಸ್ವೀಕರಿಸಿದರೆ– ಮೇಲಿನ ಮೂಲ ಪದ್ಯದ ಭಾವವು ಸಮಂಜ

‡ "ವಾಯುವು ಸರ್ವಜೀವರ ಅಭಿಮಾನಿಯೂ ನಿಯಾಮಕನೂ ಆಗಿರುತ್ತಾನೆ. ಬಲ, ಬುದ್ಧಿ, ( ಮೇಧಸ್ಸು ) ಧೈರ್ಯ, ಸ್ಥೈರ್ಯ, ವೈರಾಗ್ಯ, ಜ್ಞಾನ, ಆನಂದ ಭಕ್ತಿ, ಸ್ವಾಭಾವಿಕಗುಣ ಮುಕ್ತಿ ಅನಂದಾನುಭವ; ಇವುಗಳಿಗೆ ಅಭಿಮಾನಿಯಾಗಿರುತ್ತಾನೆ" ಎಂದು ಸತ್ತತ್ವರತ್ನಮಾಲೆಯ ಪ್ರಮಾಣಾರ್ಥ

ಸವಾಗಿ ಹೊಂದುತ್ತವೆ. ಈ ಕಾರಣದಿಂದ ಭಾರತಿ ಸರಸ್ವತಿಯರನ್ನು ಅವ್ಯಕ್ತ ತತ್ವಾಭಿಮಾನಿಗಳೆಂದು ಸಂಗ್ರಹಿಸಿರುವದಾಗಿ ತಿಳಿಯಬೇಕು. ಶಾಂಡಿಲ್ಯ ತತ್ವ ದಲ್ಲಿಯೂ " ಭಾರತೀ ಸರಸ್ವತಿಯರೂ ಅವ್ಯಕ್ತತತ್ವಾಭಿಮಾನಿಗಳು " ಎಂದು ಹೇಳಲಾಗಿರುತ್ತದೆ.

ಎರಡನೆಯದು "ಮಹತ್ತತ್ವ ಇದಕ್ಕೆ ಬ್ರಹ್ಮವಾಯು ಇವರು ಅಭಿಮಾನಿ" ಗಳು. " ಮಹಾತ್ಮರಾದ ಬ್ರಹ್ಮವಾಯುಗಳು ಮಹತ್ತತ್ವಾಭಿಮಾನಿಗಳು " ಎಂದು ಶಾಂಡಿಲ್ಯತತ್ವದ ವಚನವಿದೆ.

"ಮೂರನೆಯದು"ಅಹಂಕಾರ ತತ್ವ" "ಶೇಷ-ಗರುಡ ರುದ್ರರು ಅಹಂಕಾರ ತತ್ವಾಭಿಮಾನಿಗಳು; ಎಂಬ ಶಾಂಡಿಲ್ಯತತ್ವದ ವಚನದಂತೆ ಗರುಡ-ಶೇಷ-ರುದ್ರರು ಅಹಂಕಾರ ತತ್ವಾಭಿಮಾನಿಗಳು.

" ನಾಲ್ಕನೆಯದು– "ಮನಸ್ತತ್ವ " ಶಾಂಡಿಲ್ಯ ವಚನದಂತೆ– ಇಂದ್ರ ಕಾಮರು ಮನಸ್ತತ್ವಾಭಿಮಾನಿಗಳು.

"ಐದನೆಯದು– "ಶ್ರೋತ್ರತತ್ವ"= ಶಾಂಡಿಲ್ಯ ವಚನದಂತೆ ದಿಗ್ದೇವತೆ ಗಳಾದ ಇಂದ್ರಾದಿಗಳೂ ಚಂದ್ರಮನೂ ಶ್ರೋತ್ರತತ್ವಾಭಿಮಾನಿಗಳು.

"ಆರನೆಯದು ತ್ವಕ್ತತ್ವ" ಇದಕ್ಕೆ ಅಭಿಮಾನಿ ಅಹಂಕಾರಿಕ ಪ್ರಾಣನು.

"ಏಳನೆಯದು "ಚಕ್ಷುಸ್ತತ್ವ" ಇದಕ್ಕೆ ಸೂರ್ಯನು ಅಭಿಮಾನಿ.

"ಎಂಟನೆಯದು "ಜಿಹ್ವಾತತ್ವ" ಇದಕ್ಕೆ ವರುಣನು.

ಒಂಭತ್ತನೆಯದು"ಘ್ರಾಣ"=ಇದಕ್ಕೆ ಅಭಿಮಾನಿಗಳು ಅಶ್ವಿನಿದೇವತೆಗಳು.

"ಹತ್ತನೆಯದು "ವಾಕ್"=ಇದಕ್ಕೆ ಅಭಿಮಾನಿ ಅಗ್ನಿಯು.

"ಹನ್ನೊಂದನೆಯದು"ಪಾಣಿ"= ಇದಕ್ಕೆ ಶಚಿ, ರತಿ,ಅನಿರುದ್ಧ, ಸ್ವಾಯಂ ಭುವ ಮನು ದಕ್ಷ–ಬ್ರಹಸ್ಪತಿಗಳು ಅಭಿಮಾನಿಗಳು. ಮೂಲೋಕ್ತ ಗರುಡ ಪುರಾಣದ ವಚನವು ಇದರಲ್ಲಿ ಪ್ರಮಾಣವಿದೆ.

"ಹನ್ನೆರಡನೆಯದು "ಪಾದತತ್ವ"–ಇದಕ್ಕೆ ಅಭಿಮಾನಿ, ಜಯಂತನು.

"ಹದಿಮೂರನೆಯದು–"ಪಾಯು"= ಇದಕ್ಕೆ ಅಭಿಮಾನಿ ಮಿತ್ರನು.

"ಹದಿನಾಲ್ಕನೆಯದು– "ಉಪಸ್ಥ "– ಇದಕ್ಕೆ " ವಿಶ್ವಾಮಿತ್ರ, ವಶಿಷ್ಠ, ಅತ್ರಿ, ಮರೀಚಿ, ಪುಲಸ್ತ್ಯ, ಪುಲಹ, ಕ್ರತು, ಅಂಗಿರಾ, ವೈವಸ್ವತಮನು" ಇವರು



ಅಭಿಮಾನಿಗಳು. ಈ ವಿಷಯದಲ್ಲಿ ಮೂಲದಲ್ಲಿ ತೋರಿಸಿದ ಗರುಡ ಪುರಾಣದ ವಚನವು ಆಧಾರವಾಗಿದೆ.

"ಹದಿನೈದನೆಯದು– "ಶಬ್ದತತ್ವ"=ಇದಕ್ಕೆ "ಬ್ರಹಸ್ಪತಿಯು"ಅಭಿಮಾನಿಯು

"ಹದಿನಾರನೆಯದು–"ಸ್ಪರ್ಶ"=ಇದಕ್ಕೆ "ಅಪಾನನು" ಅಭಿಮಾನಿಯು.

"ಹದಿನೇಳನೆಯದು–"ರೂಪ"=ಇದಕ್ಕೆ "ವ್ಯಾನನು" ಅಭಿಮಾನಿಯು.

"ಹದಿನೆಂಟನೆಯದು–"ರಸ"=ಇದಕ್ಕೆ "ಉದಾನನು" ಅಭಿಮಾನಿಯು.

"ಹತ್ತೊಂಭತ್ತನೆಯದು–"ಗಂಧ"=ಇದಕ್ಕೆ "ಸಮಾನನು" ಅಭಿಮಾನಿಯು

"ಇಪ್ಪತ್ತನೆಯದು–"ಆಕಾಶ"=ಇದಕ್ಕೆ ಗಣಪತಿಯು ಅಭಿಮಾನಿಯು

"ಇಪ್ಪತ್ತೊಂದನೆಯದು-"ವಾಯು"-ಇದಕ್ಕೆ(ಜಡ)ವಾಯುವುಅಭಿಮಾನಿಯು

"ಇಪ್ಪತ್ತೆರಡನೆಯದು–"ತೇಜ"=ಇದಕ್ಕೆ ಅಗ್ನಿಯು ಅಭಿಮಾನಿಯು.

"ಇಪ್ಪತ್ತುಮೂರನೆಯದು–"ಜಲ"=ಇದಕ್ಕೆ ವರುಣನು ಅಭಿಮಾನಿಯು.

"ಇಪ್ಪತ್ತುನಾಲ್ಕನೆಯದು"-ಪೃಥ್ವೀ"=ಇದಕ್ಕೆ ಧರಾದೇವಿಯು ಅಭಿಮಾನಿಯು.

ಈ ಇಪ್ಪತ್ತುನಾಲ್ಕು ತತ್ವಾಭಿಮಾನಿಗಳಾದ ದೇವತೆಗಳಿಗೆ ಅಂತರ್ಗತನೂ ನಿಯಾಮಕನೂ ಆಗಿರುವದರಿಂದ "ಗುರು" ವೆನಿಸಿಕೊಳ್ಳುವನು. ಮತ್ತು ಎಲ್ಲ ಜೀವರಿಗೆ ಅಭಿಮಾನಿಯಾಗಿರುವದರಿಂದಲೂ–ಜಗದ್ಗುರುವಾಗಿರುವದ ರಿಂದಲೂ ಜಗತ್ತಿನೊಳಗೆ ಇರುವ (ಸೇರ್ಪಡೆಹೊಂದಿರುವ) ಈ ತತ್ವಪತಿ ದೇವತೆ ಗಳಿಗೆ "ವಾಯುವು ಗುರುವು" ಎಂಬುದು ಯುಕ್ತವೇ ಸರಿ "ವಾಯುರ್ಹಿ ಸರ್ವ ಜೀವಾನಾಂ" ಎಂಬ "ಸತ್ತತ್ವರತ್ನಮಾಲಾ" ಗ್ರಂಥದ ವಚನಗಳು ಈ ಅರ್ಥ ವನ್ನು ಪುಷ್ಟೀಕರಿಸುತ್ತವೆ. ಮೇಲೆ ಹೇಳಿದ ಮಹಿಮೆಯಿಂದ ಕೂಡಿದ ವಾಯು ದೇವನಿಗೆ "ಇಪ್ಪತ್ತುನಾಲ್ಕು ತತ್ವಪತಿದೇವತೆಗಳಿಗೆ ಗುರು" ಎನ್ನುವದು ಏನು ಆಶ್ಚರ್ಯಕರ ?

"ಮಾರುತನ ನಿಜಪತ್ನಿ"=ವಾಯುದೇವನ ನಿಯತ (ಸ್ವರೂಪದಲ್ಲಿಯೂ) ಹೆಂಡತಿ ಎಂದು ಅರ್ಥ.

ಇಂಥನೀನು ನಿರಂತರವಾಗಿ ಪರಮಾತ್ಮನಲ್ಲಿಯೂ, ಜಗದ್ಗುರುಗಳಾದ ವಾಯುದೇವರು, ಮೂಲಗುರು, ಮತ್ತು ಸ್ವ (ನಮ್ಮನಮ್ಮ) ಗುರುಗಳಲ್ಲಿಯೂ, ಅತ್ಯಂಕ ಆಸಕ್ತಿಯನ್ನು ಹುಟ್ಟಿಸಿ, ಭಾಗವತ ಭಾರತ ಹದಿನೆಂಟು ಪುರಾಣಗಳ

ರಹಸ್ಯ ಅರ್ಥಗಳನ್ನು ತಿಳಿಪಡಿಸಬೇಕು'' ಎಂದು ಭಾವವು.

**ಅವತರಣಿಕಾ**— ಇದಾನೀಂ ಸ್ವಚಿಕೀರ್ಷಿತಸ್ಯ ಸಕಲ ಶ್ರುತಿ ಸ್ಮೃತೀತಿ
ಹಾಸ ಪುರಾಣಾದಿ ಪ್ರಮಾಣಗ್ರಂಥೈಃ ಪ್ರಾಮಾಣ್ಯಜ್ಞಾಪನಾಯ ತಾದೃಶಪುರಾ
ಣಾದೀನಾಂ ವ್ಯಾಸಪ್ರಣೀತತ್ವಾತ್ ವ್ಯಾಸಂ ಪ್ರಣಮತೀತ್ಯಾಹ ||

ಮೂಲ- **ವೇದಪೀಠ ವಿರಿಂಚಿ ಭವ ಶ |**
**ಕ್ರಾದಿಸುರವಿಜ್ಞಾನ ದಾಯಕ |**
**ಮೋದ ಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ ||**
**ಛೇದ ಭೇದ ವಿಷಾದ ಕುಟಿಲಾಂ |**
**ತಾದಿಮಧ್ಯವಿದೂರ ಆದಾ-**
**ನಾದಿಕಾರಣ ಬಾದರಾಯಣ ಪಾಹಿ ಸತ್ರಾಣ || ೭ ||**

**ತಾಮ್ರಪರ್ಣೀ ವ್ಯಾಖ್ಯಾನ-ವೇದಪೀಠ ಇತಿ**|ವೇದಃಸನ್ನಹನೋಪಾ
ಯಧ್ಯಾನಸಂಗತಿಯುಕ್ತಿಷ್ವಿತ್ಯಭಿಧಾನಾತ್ | ವೇದಃಉಪಾಯಃ | ಉಪಾಯೋ
ನಾಮ ಯೋಗಃ | ಸಏವ ಪೀಠಮಾಸನಂ ಯಸ್ಯ ಸಃ ವೇದಪೀಠಃ | ಯೋಗಾ
ಸನವಿಶಿಷ್ಟ ಇತ್ಯರ್ಥಃ |"ವಿರಿಂಚಿಭವಶಕ್ರಾದಿಸುರವಿಜ್ಞಾನದಾಯಕ"- ವಿರಿಂಚಿಃ
ಬ್ರಹ್ಮಾಚ | ಭವೋರುದ್ರಶ್ಚ | ಶಕ್ರೋಇಂದ್ರಶ್ಚ | ವಿರಿಂಚಿಭವಶಕ್ರಾಃ | ತಏವ
ಆದಯಃ ಏಷಾಂತೇ ತಥೋಕ್ತಾಃ | ಸುರಾಃ ದೇವಾಃ ತೇಷಾಂ ವಿಜ್ಞಾನದಾತಃ|
ಮೋದಚಿನ್ಮಯಗಾತ್ರ"ಮೋದೋನಾಮ ಆನಂದಃ| ಚಿತ್ ಜ್ಞಾನಂ, ತಯೋರ್ಮ
ಯಂ | ಜ್ಞಾನಾನಂದಾತ್ಮೇತ್ಯರ್ಥಃ | ತಾದಾತ್ಮ್ಯಾರ್ಥೇ ವಿಕಾರಾರ್ಥೇ ಪ್ರಾಚು
ರ್ಯಾರ್ಥೇಮಯಟ್ ತ್ರಿಧೇತಿವಚನಾತ್|ಗಾತ್ರಂ=ಶರೀರಂ ಯಸ್ಯಸಃತಥೋಕ್ತಃ
ತತ್ಸಂಬುದ್ಧಿ | "ಲೋಕಪವಿತ್ರಃ"ಲೋಕಸ್ತು ಭುವನೇ ಜನ ಇತ್ಯಭಿಧಾನಾತ್ |
ಜಗತ್ಪಾವನ ಇತ್ಯರ್ಥಃ|ಯದ್ವಾಲೋಕಾನ್ ಜನಾನ್ ಪಾಂತೀತಿಲೋಕಪಾಃ|ಪಾ
ಕ್ಷರಣೇಇತಿಧಾತೋಃ|ಬ್ರಹ್ಮಾದಯಃ,ತಾನ್ ವಿಶೇಷೇಣತ್ರಾಯತಇತಿಲೋಕಪವಿ
ತ್ರಃ ಸಂಬೋಧನಂ| "ಸುಚರಿತ್ರ" ಶೋಭನಕರವ್ಯಾಪಾರವಾನಿತ್ಯರ್ಥಃ|ಯದ್ವಾ
ಸುಷ್ಟು ಚರಂ ಜ್ಞಾನಂ ಇಃ ಭಗವದಿಚ್ಛಾ ಏಷಾಂ ತೇ ಸುಚರಿಣಃ | ಜ್ಞಾನಿನಃ
ತಾನ್ ತ್ರಾಯತ ಇತಿ ಸುಚರಿತ್ರಃ ಸಂಬೋಧನಂ || ಯದ್ವಾ, ಸಶ್ಚ, ಉಶ್ಚ,ರಶ್ಚ,
ಇಶ್ಚತಥೋಕ್ತಾ: | ತಾನ್-ದೇವ-ಋಷಿ ಪಿತೃಗಂಧರ್ವಪಕ್ಷಿಜೀವಾನ್ ತ್ರಾಯತ



ಇತಿ ಸುಚರಿತ್ರಃ ಸಂಬೋಧನಂ | ಸುಚರಿತ್ರ | ಏಕಾಕ್ಷರಕೋಶಪರ್ಯಾಲೋ
ಚನಯಾ, ವರುಣ, ರುದ್ರ, ಚಂದ್ರ, ವಾಯು, ಕಾಮಾನಾಂ ಪಾಲಕೇತ್ಯರ್ಥಃ |
ಛೇದ ಭೇದ ವಿಷಾದ ಕುಟಿಲಾಂತಾದಿಮಧ್ಯವಿದೂರಃ | ಖಡ್ಗಾದಿಶಸ್ತ್ರೈಃ ಛೇದ
ನಂ | ಇಷ್ವಾದ್ಯಸ್ತ್ರೈರ್ಭೇದನಂ| "ವಿಷಾದ" ಇತ್ಯನೇನ ಖೇದಇತ್ಯರ್ಥಃ|ಕುಟಿಲ
ಇತ್ಯನೇನ ವಕ್ರಃ| ಅಂತೋ ನಾಶಃ ಆದಿಪದೇನಸೃಷ್ಟಿಃ | ಮಧ್ಯಇತ್ಯನೇನಸ್ಥಿತಿಃ,
ಏತೈರ್ವಿದೂರಃ, ವಿಶೇಷೇಣರಹಿತಃ | ತದುಕ್ತಂ | * ಅಚ್ಛೇದ್ಯೋಯ
ಮಭೇದ್ಯೋಯಂ | ಉತ್ಪತ್ತಿಸ್ಥಿತಿಸಂಹಾರವಿದೂರೋ ಹರಿರೇಕ
ರಾಡಿರಿತಿ ಸ್ಕಾಂದೇ | "ಆದಾನಾದಿಕಾರಣ" ಆಶ್ಚ ದಾಶ್ಚ ನಶ್ಚ ಆದಾನಾಃ
ತೇಷಾಂ ಜಗತ್ಸೃಷ್ಟಿಸ್ಥಿತಿನಿಧನಾನಾಂ | ಆದಿಕಾರಣ ಮೂಲಕಾರಣಮಿತ್ಯ
ರ್ಥಃ|ತದುಕ್ತಂ|ಸೃಷ್ಟಿಸ್ಥಿತಿಶ್ಚ ಸಂಹಾರೋ ನಿಯತಿಜ್ಞಾನಮಾವೃತಿಃಬಂಧಮೋ
ಕ್ಷೌಚ ಪುರುಷಾದ್ಯಸ್ಮಾತ್ಸಹರಿರೇಕರಾಡಿತಿ ಸ್ಕಾಂದೇ|| ‡ "ಅಹಂಸರ್ವಸ್ಯ ಪ್ರಭ
ವೋ ಮತ್ತಸ್ಸರ್ವಂ ಪ್ರವರ್ತತೇ | ಸೃಷ್ಟಾಪಾತಾತಥೈವಾತ್ತಾನಿಖಿಳಸ್ಯೈಕ ಏವ
ತ್ವಿತ್ಯಾದಿ ವಚನಾತ್ | ಸ್ವಯಂಸೃಷ್ಟಿಸ್ಥಿತಿಲಯವಿಧುರೋಪಿ ಜಗತಾಂ ಸೃಷ್ಟಿ
ಸ್ಥಿತಿಲಯಕರ್ತೇತ್ಯರ್ಥಃ|"ಬಾದರಾಯಣ"ಬದರಸ್ಯ ಸಂಬಧೀದಂ ಬಾದರಂ ಬದ
ರೀವೃಕ್ಷಸಮೂಹಃ(ವನಂ)ಇತರ್ಥ್ಯಃ|ಸಏವಅಯನಮಾಶ್ರಯೋಯಸ್ಯಸಃ ಬಾದ
ರಾಯಣಃ| ತಸ್ಯ ಸಂಬುದ್ಧಿಃ| "ಸತ್ರಾಣ" ಸತಾಂ ಸಜ್ಜನಾನಾಂ ತ್ರಾಣಃ|ರಕ್ಷಕಃ
ಪಾಲಕೇತ್ಯರ್ಥ: ಹೇ ಸಜ್ಜನಪಾಲಕ ತ್ವಂ ಪಾಹಿಮಾಮಿತಿಶೇಷಃ || ೭ ||

ಅವತರಣಿಕೆ—''ವೇದಪೀಠ'' ಎಂಬ ಪದ್ಯದಿಂದ ಗ್ರಂಥಕಾರರು ''ತಾವು
ರಚಿಸಿರುವ ಗ್ರಂಥವು ಸಕಲವೇದಪುರಾಣಸ್ಮೃತಿ ಇತಿಹಾಸಗಳಿಂದ ಸಂಮ್ಮತ
ವಾದ ಅರ್ಥವನ್ನು ಹೇಳುತ್ತದೆ " ಎಂದು ತಿಳಿಸಲು ಅಪೇಕ್ಷಿಸಿ, ಆ ಪುರಾಣ

---

* "ಪರಮಾತ್ಮನು (ಛೇದಿಸಲಿಕ್ಕೆ ಬಾರದವನು) ಅಚ್ಛೇದ್ಯನು, ಅಭೇದ್ಯನು
(ಒಡೆಯಲಿಕ್ಕೆ ಬಾರದವನು) ಖೇದ, ವಿಷಾದ, ಜನನ-ಸಂರಕ್ಷಣ-ಮರಣ-ಉತ್ಪತ್ತಿ,
ಸ್ಥಿತಿ, ಸಂಹಾರ ಮೊದಲಾದ ದೋಷಗಳಿಂದ ದೂರನು; ಸ್ವತಂತ್ರನು; " ಎಂದು
ಸ್ಕಂದ ಪುರಾಣ ವಚನದ ಅರ್ಥ.

‡ "ನಾನೇ (ಶ್ರೀ ಕೃಷ್ಣನೇ) ಸಮಸ್ತ ಜಗತ್ತನ್ನು ಹುಟ್ಟಿಸತಕ್ಕವನು; ನನ್ನಿಂದಲೇ
ಸರ್ವಜಗತ್ತು ನಡೆಯುತ್ತದೆ." ಇದು ಗೀತಾವಾಕ್ಯ. "ಸೃಷ್ಟಿಸುವವನೂ ಸಂರಕ್ಷಿಸುವ
ವನೂ ಸಂಹಾರಕನೂ ಪರಮಾತ್ಮನೊಬ್ಬನೇ (ಶ್ರೀಹರಿಯೊಬ್ಬನೇ) ಆಗಿರುತ್ತಾನೆ."
ಎರಡೂ ಪ್ರಮಾಣ ವಾಕ್ಯಗಳ ತಾತ್ಪರ್ಯ.

ಗಳನ್ನು ಶ್ರೀ ವೇದವ್ಯಾಸರು ರಚಿಸಿರುವದರಿಂದ ಅವರನ್ನು ("ನಮಸ್ಕರಿಸುವೆ" ಎಂಬುದಾಗಿ ಹೇಳುತ್ತಾರೆ.) ನಮುಸ್ಕರಿಸುತ್ತಾರೆ.

"ವೇದಪೀಠ"= ಸನ್ನಹನ-ಉಪಾಯ-ಧ್ಯಾನ-ಸಂಗತಿ ಯುಕ್ತಿ" ಎಂಬ ಕೋಶವಿರುವದರಿಂದ ವೇದ=ಉಪಾಯ. ಉಪಾಯವೆಂದರೆ ಯೋಗ; ಈ ಯೋಗವೇ "ಪೀಠ" ಆಸನವಾಗಿ ಉಳ್ಳವನು. ಅಂದರೆ "ಯೋಗಾಸನದಲ್ಲಿ ಆರೂಢನಾದವನು" ಎಂದು ಅರ್ಥ.

"ವಿರಿಂಚಿ ಭವ ಶಕ್ರಾದಿಸುರವಿಜ್ಞಾನದಾಯಕ"- ವಿರಿಂಚಿ=ಬ್ರಹ್ಮ, ಭವ=ರುದ್ರ, ಶಕ್ರ=ಇಂದ್ರ, ಇವರೇ ಮುಂತಾಗಿರುವ ದೇವತೆಗಳಿಗೆ ವಿಜ್ಞಾನವನ್ನು ಕೊಡುವವನೇ !

"ಮೋದಚಿನ್ಮಯಗಾತ್ರ"— ಮೋದ= ಆನಂದ, = ಚಿತ್=ಜ್ಞಾನ ಜ್ಞಾನ ಆನಂದಗಳೇ ಸ್ವರೂಪಭೂತವಾದ ದೇಹವುಳ್ಳವನೇ ! ಎಂದರ್ಥ

"ಲೊಕಪವಿತ್ರ"— (೧) ಜಗತ್ಪಾವನನೇ ! (೨) ಲೋಕಪ=ಲೋಕವನ್ನು ಪಾಲಿಸುವ ಬ್ರಹ್ಮಾದಿಗಳನ್ನು, ವಿ=ವಿಶೇಷವಾಗಿ, ತ್ರ=ಸಂರಕ್ಷಣ ಮಾಡುವವನೇ ! ಎಂದು ಅರ್ಥಗಳು.

ಸುಚರಿತ್ರ:-(೧) ಶುಭಕರವಾದ ವ್ಯಾಪಾರಗಳುಳ್ಳವನು. (೨) ಸು=ಸಮೀಚೀನವಾದ ಚರಂ=ಜ್ಞಾನ ಇ=ಭಗವದಿಚ್ಛೆ, ಇವುಗಳುಳ್ಳವರನ್ನು "ಸುಚರಿ" (ರ್ಯ)ಗಳನ್ನು, ತ್ರ=ರಕ್ಷಿಸುವವನೇ! (೩)ಸ=ದೇವ, ಉ=ಋಷಿ, ಚ=ಪಿತೃ, ರ=ಗಂಧರ್ವ, ಇ=ಪಕ್ಷಿ ಜೀವ. ಇವರನ್ನು ತ್ರ=ರಕ್ಷಿಸುವವನೇ ! (೪) ಸ=ವರುಣ, ಉ=ಇಂದ್ರ,ಚ=ಚಂದ್ರ,ರ=ವಾಯು, ಇ=ಕಾಮ,ಇವರನ್ನು,ತ್ರ=ಪಾಲಿಸುವವನೇ (ಏಕಾಕ್ಷರ ಕೋಶದಬಲದಿಂದ ಈ ಅರ್ಥವು.)

"ಛೇದ ಭೇದ ವಿಷಾದ ಕುಟಿಲಾಂತಾದಿ ಮಧ್ಯವಿದೂರ"— ಖಡ್ಗ ಮುಂತಾದ ಅಸ್ತ್ರಗಳಿಂದ ಛೇದ (ಸೀಳುವದು) ವಿಷಾದ = ಖೇದ, ಕುಟಿಲ=ವಕ್ರತಾ, ಅಂತ=ನಾಶ, ಆದಿ=ಜನನ, ಮಧ್ಯ=ಸಂರಕ್ಷಣ-ಇವುಗಳಿಂದ ಅತ್ಯಂತ (ಯಾವಾಗಲೂ) ರಹಿತನು. "ಅಚ್ಛೇದ್ಯೋಯಂ" ಎಂದು ಮುಂತಾದ ಸ್ಕಂದ ಪುರಾಣದ ವಾಕ್ಯಗಳು ಇದರಲ್ಲಿ ಆಧಾರವಾಗಿರುತ್ತವೆ.

"ಆದಾನಾದಿ"ಕಾರಣ ಆ=ಉತ್ಪತ್ತಿ, ದಾ=ಸ್ಥಿತಿ, ನ=ಸಂಹಾರ,ಇವುಗಳಿಗೆ ಆದಿಕಾರಣ=ಮೂಲಕಾರಣನು. "ಸೃಷ್ಟಿಸ್ಥಿತಿಶ್ಚ" ಎಂಬ ಸ್ಕಂದ ಪುರಾಣದಲ್ಲಿ



ಈ ವಿಷಯವು ಹೇಳಲ್ಪಟ್ಟಿರುತ್ತದೆ. "ಅಹಂ ಸರ್ವಸ್ಯ" ಇತ್ಯಾದಿ ಪ್ರಮಾಣಗಳಂತೆ ಸ್ವತಃ ಸೃಷ್ಟಿಸ್ಥಿತಿ ಲಯಗಳಿಲ್ಲದವನಾದರೂ ಜಗತ್ತಿನ "ಸೃಷ್ಟಿ ಸ್ಥಿತಿ ಸಂಹಾರಕರ್ತಾ" ಎಂದು ಅಭಿಪ್ರಾಯವು.

"ಬಾದರಾಯಣ"— ಬಾದರ=ಬಾರಿಯಸಮೂಹ. ಇದನ್ನು ಆಶ್ರಯಿಸಿದವನು ಬಾದರಾಯಣ ಎಂದು ಅರ್ಥ.

"ಸತ್ರಾಣ"=ಸಜ್ಜನರನ್ನು ಸಂರಕ್ಷಿಸುವವನೇ! ನೀನು ನಮ್ಮನ್ನು, ಪಾಹಿ=ಸಂರಕ್ಷಿಸು ! ಎಂದು ಅಭಿಪ್ರಾಯ.

**ಅವತರಣಿಕಾ**— ಅತೀತಕಾಲೇ ಕೃತವೈರಪ್ರತ್ಯಪಕಾರಾರ್ಥಂ ಭೂಮೌ ಜಾತೈರ್ಮಣಿ ಮದಾದಿ ದಿತಿಸುತೈರ್ವಿರಚಿತೈಕ ವಿಂಶತಿ ಕುಭಾಷ್ಯ ದೂಷಣಾಯಾವಿರ್ಭೂತಮಾನಂದತೀರ್ಥಮುನಿಂ ಪ್ರಣಮಿತಿ ॥

ಮೂಲ- **ಕ್ಷಿತಿಯೊಳಗೆ ಮಣಿಮಂತ ಮೊದಲಾ।**
**ದತಿ ದುರಾತ್ಮರು ಒಂದಧಿಕ ವಿಂ।**
**ಶತಿ ಕುಭಾಷ್ಯವ ರಚಿಸೆ ನಡುಮನೆಯೆಂಬ ಬ್ರಾಹ್ಮಣನ।**
**ಸತಿಯ ಜಠರದೊಳವತರಿಸಿ ಭಾ।**
**ರತಿರಮಣ ಮಧ್ವಾಭಿಧಾನದಿ।**
**ಚತುರದಶ ಲೋಕದಲಿ ಮೆರೆದ ಪ್ರತಿಮಗೊಂದಿಸುವೆ ॥೮॥**

**ತಾಮ್ರಪರ್ಣೀಯಾ**

"ಕ್ಷಿತಿಯೊಳಗೆ"=ಭೂಮೌ,"ಮಣಿಮಂತ"ಮೊದಲಾದಮಣಿಮದಾದಯಃ "ಅತಿದುರಾತ್ಮರು"ಅತಿಶಯೇನ ದುಷ್ಟಸ್ವಭಾವವಂತಃ ಏತೇದೈತ್ಯಾಃ । "ಒಂದಧಿಕ ವಿಂಶತಿಕುಭಾಷ್ಯವ"ಏಕವಿಂಶತಿಕುಭಾಷ್ಯಾಣಿ ಕುತ್ಸಿತಭಾಷ್ಯಾಣೀತ್ಯರ್ಥಃ ಏಕವಿಂಶತಿಕುಭಾಷ್ಯಕರ್ತೃಣಾಂ ನಾಮಾನ್ಯಾಹ । ೧ ಭಾರತೀವಿಜಯಃ ೨ ಸಚ್ಚಿದಾನಂದಭಟ್ಟಃ ೩ ಬ್ರಹ್ಮಘೋಷಃ ೪ ಶತಾನಂದಃ. ೫ ಉದ್ಧತಃ ೬ ವಿಜಯಃ. ೭ ರುದ್ರಭಟ್ಟಃ. ೮ ವಾಮನಃ. ೯ ಯಾದವಪ್ರಕಾಶಃ. ೧೦ ರಾಮಾನುಜಃ. ೧೧ ಭರ್ತೃಪ್ರಪಂಚಃ ೧೨ ದ್ರಮಿಡಃ. ೧೩ ಬ್ರಹ್ಮದತ್ತಃ ೧೪ ಭಾಸ್ಕರಃ. ೧೫ ವಿಶಾರದಃ. ೧೬ ವೃತ್ತಿಕಾರಕಃ. ೧೭ ಜಯಭಟ್ಟಃ ೧೮ ವಿಷ್ಣುಕ್ರಾಂತಃ. ೧೯ ವಾದೀಂದ್ರಃ. ೨೦ ಮಾಧವಭಟ್ಟಃ ೨೧ ಸಂಕರಃ

ಏತೇ ಏಕವಿಂಶತಿಕುವಾದಿನಃ ॥ ತದುಕ್ತಂ,।.ಭಾರತೀವಿಜಯ ಶ್ಚೈವ ಸಚ್ಚಿದಾನಂದನಾಮಕಃ। ಬ್ರಹ್ಮಘೋಷಃಶತಾನಂದೋ ಉದ್ಧತೋ ವಿಜಯಸ್ತಥಾ ॥೧॥ ರುದ್ರಭಟ್ಟೋವಾಮನಶ್ಚ ಸಯಾದವಪ್ರಕಾಶಕಃ॥ತಥಾ ರಾಮಾನುಜಶ್ಚೈವ ದಶಮಶ್ಚಉದಾಹೃತಃ ॥ ಭರ್ತೃಪ್ರಪಂಚೋದ್ರಮಿಡಃ ಬ್ರಹ್ಮದತ್ತಶ್ಚಭಾಸ್ಕರಃ ।ವಿಶಾರದೋ ವೃತ್ತಿಕಾರಃ ಜಯಭಟ್ಟಸ್ತಥೈವಚ । ವಿಷ್ಣುಕ್ರಾಂತಶ್ಚ ವಾದೀಂದ್ರೋಮಾಧವಾಖ್ಯಸ್ತಥೈವಚ । ಸಂಕರಸ್ತ್ವೇಕವಿಂಶಶ್ಚ ಕುವಾದಿನ ಇತೀರಿತಾಃ । ತತ್ಪ್ರಣೀತಾನಿ ಭಾಷ್ಯಾಣಿ ನಿರಾಚಕ್ರೇ ಮಹಾಶಯಃ ಇತಿಃ ವಚನಾತ್ । ತತ್ಪ್ರಣೀತತ್ವಾತ್ತನ್ನಾಮಕಾನಿ ಭಾಷ್ಯಾಣಿ ಇತ್ಯರ್ಥಃ। 'ಯದಾಕೃತವಂತಃ, ತದಾ। "ನಡುಮನೆಯೆಂಬಬ್ರಾಹ್ಮಣನಾ" ಮಧ್ಯಗೇಹಾಖ್ಯವಿಪ್ರಸ್ಯಸತಿಯಜಠರದೊಳು" ಭಾರ್ಯಾಯಾಃ ಉದರೇ । "ಅವತರಿಸಿ" ಅವತಾರಂಕೃತ್ವಾ, "ಭಾರತೀರಮಣ" ಮುಖ್ಯಪ್ರಾಣಃ । "ಮಧ್ವಾಭಿಧಾನದಿ" । ಮಧ್ವ ಇತ್ಯಭಿಧಾನೇನ। ತದುಕ್ತಂ। ‡ ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ ಇತಿ ॥ † ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ

---

‡ ಅಸ್ಯ= ಈ,ವೃಷಭಸ್ಯ=ದೇವಶ್ರೇಷ್ಠನಾದ ವಾಯುದೇವನ, ತೃತೀಯಂ=ಮೂರನೆಯ ಅವತಾರರೂಪರಾದ, ದಶಪ್ರಮತಿಂ= ಪೂರ್ಣಪ್ರಜ್ಞರನ್ನು। (ಶ್ರೀಮನ್ಮಧ್ವಾಚಾರ್ಯರನ್ನು) ಯೋಷಣಃ=ವೇದಾಭಿಮಾನಿಗಳಾದ ಶ್ರೀ ಭೂ ದುರ್ಗಾದೇವಿಯವರು, ದೋಹಸೇ=ಜ್ಞಾನವನ್ನು ಪೂರೈಸಲು, ಅಜನಯಂತ= ಜನಯಿಸಿದರು (ಹುಟ್ಟಿಸಿದರು) (ಬಳಿತ್ಥಾಸೂಕ್ತವ್ಯಾಖ್ಯಾವಾದಿರಾಜೀಯಾ) ಶ್ರೀಭೂದುರ್ಗಾಎಂಬ ಋಗಾದಿವೇದಾಭಿಮಾನಿನಿಯರಾದ ದೇವತೆಗಳು ತಪ್ಪುವ್ಯಾಖ್ಯಾನದಿಂದ ಕೂಡಿರುವ, ತಮ್ಮ ಅಭಿಮಾನಾಸ್ಪದವಾದ ವೇದಗಳನ್ನು ಯಥಾಸ್ಥಿತವಾಗಿ (ಸರಿಯಾಗಿ) ವ್ಯಾಖ್ಯಾನಿಸುವದಕ್ಕಾಗಿ ಮಧ್ಯಗೇಹನೆಂಬ ಬ್ರಾಹ್ಮಣನ ಪತ್ನಿಯ ಉದರದಲ್ಲಿ ನಿಂತು ಈ ವಾಯುದೇವನನ್ನು ಪ್ರಾದುರ್ಭಾವಗೊಳಿಸಿದರು. (ಹುಟ್ಟಿಸಿದರು). †ರಾಮವಚೋನಯಂ= ರಾಮದೇವರ ವಚನವನ್ನು ಸೀತಾಮಾತೆಗೆ ತಂದಿತ್ತಿರುವ ಹನುಮರೂಪವು, ವಾಯೋಃ ಪ್ರಥಮಕಂ ವಪುಃ=ವಾಯುದೇವನ ಮೊದಲನೆಯ ರೂಪವು; ಪೃತ್ಕ್ಷೋ = ಕೌರವ ಸೇನಾಕ್ಷಯವನ್ನು ಮಾಡಿ ಪ್ರಸಿದವಾದ ಭೀಮಸೇನ ರೂಪವು,ದ್ವಿತೀಯಂ=ಎರಡನೆಯದು. ಯತ್ ಮಧ್ವಃ=ಯಾವದು ಶ್ರೀ ಮಧ್ವರೂಪದಿಂದ ಆನಂದಕರ ಶಾಸ್ತ್ರವನ್ನು ಮಾಡಿರುವದೋ, ಏತತ್= ಈ ಮಧ್ವರೂಪವು, ತೃತೀಯಂ=ಮೂರನೆಯದು. ಅಮುನಾ= ಈ ವಾಯ್ವವತಾರರಾದ ಶ್ರೀಮನ್ಮಧ್ವಾಚಾರ್ಯರಿಂದ, ಕೇಶವೇ- ಕೇಶವನ ವಿಷಯದಲ್ಲಿ (ಅವನ ಪ್ರೀತಿ ಹಾಗೂ ಬೋಧನೆಗಾಗಿ) ಗ್ರಂಥಃ= ಈ ಗ್ರಂಥವು, ಕೃತಃ= ವಿರಚಿತವಾಯಿತು. (ಆಗಿದೆ.) ಇದು ಶ್ರೀಮಧ್ವಾಚಾರ್ಯರ ನಿರ್ಣಯದ ಕೊನೆಯ ಶ್ಲೋಕ.



ವಪುಃ । ಮಧ್ವೋಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ" ಇತ್ಯಾದಿವಚನಾತ್।"ಚತುರದಶಲೋಕದಲಿ" ಚತುರ್ದಶಭುವನೇಷು।ಮೆರೆದ= ಭಾಸಿತವಾನಿತ್ಯರ್ಥಃ ತಸ್ಯ । ಅಪ್ರತಿಮಗೆ=ಅಸದೃಶಸ್ಯ । ಅದ್ವೀತಿಯಸ್ಯವಾ। "ವಂದಿಸುವೆ"ವದಿಅಭಿವಾದನಸ್ತುತ್ಯೋಃಇತಿಧಾತೋಃನಮಸ್ಕರೋಮೀತ್ಯರ್ಥಃ। ಉತ್ತಮಪುರುಷಪ್ರಯೋಗಾದಹಮಿತಿಕರ್ತಾ ಮನ್ಯತೇ ॥ ೮ ॥

## ಕನ್ನಡಾರ್ಥ

ಹಿಂದಿನ ಯುಗದಲ್ಲಿ ತಮಗಾದ ಪರಾಜಯಕ್ಕೆ ಪ್ರತಿ ಅಪಕಾರವನ್ನು ಮಾಡಬಯಸಿ ಭೂಮಿಯಲ್ಲಿ ಹುಟ್ಟಿದ ಮಣಿಮಂತ ಮುಂತಾದದೈತ್ಯರು ರಚಿಸಿರುವ ಇಪ್ಪತ್ತೊಂದು ದುಷ್ಟಭಾಷ್ಯಗಳನ್ನು ಖಂಡಿಸಲು (ದೂಷಣಮಾಡಲು) ಅವತರಿಸಿರುವ ಶ್ರೀಮದಾನಂದ ತೀರ್ಥಮುನಿಗಳನ್ನು ಈ ಪದ್ಯದಲ್ಲಿ ನಮಸ್ಕರಿಸುತ್ತಾರೆ—

"ಕ್ಷಿತಿಯೊಳಗೆ"ಭೂಮಿಯಲ್ಲಿ "ಮಣಿಮಂತ ಮೊದಲಾದ" "ಅತಿದುರಾತ್ಮರು" ಅತಿ ದುಷ್ಟಸ್ವಭಾವದ ದೈತ್ಯರು. "ಒಂದಧಿಕವಿಂಶತಿ"=ಇಪ್ಪತ್ತೊಂದು ಕುಭಾಷ್ಯ= ಕೆಟ್ಟಭಾಷ್ಯಗಳನ್ನು,(ಈಕುಭಾಷ್ಯಗಳ ಹೆಸರುಗಳನ್ನು-ಮೂಲ ಟೀಕೆಯಲ್ಲಿ ಹೇಳಲಾಗಿದೆ.) ಇಂಥ ಭಾಷ್ಯವನ್ನುರಚಿಸೆ=ಯಾವಾಗ ವಿರಚಿಸಿದರೋ ಆಗನಡುಮನೆಯೆಂಬ ಬ್ರಾಹ್ಮಣನ=ಮಧ್ಯೆಗೇಹವೆಂಬ ಬ್ರಾಹ್ಮಣನ ,ಸತಿಯ ಜಠರದಲಿ=ಹೆಂಡತಿಯಉದರದಲ್ಲಿ, ಅವತರಿಸಿ=ಅವತಾರಮಾಡಿ,ಮಧ್ವಾಭಿದಾನದಿ=ಶ್ರೀ"ಮಧ್ವ" ಎಂಬ ನಾಮದಿಂದ, ಚತುರದಶಲೋಕದಲಿ = ಹದಿನಾಲ್ಕು ಲೋಕಗಳಲ್ಲಿ ಮೆರೆದ = ಶೋಭಿಸಿದ, ಅಪ್ರತಿಮಗೆ = ಇನ್ನೊಬ್ಬರಿಗೆ ಸರಿಯೆನಿಸಿಕೊಳ್ಳದ ಅದ್ವಿತೀಯನಿಗೆ ವಂದಿಸುವೆ = ನಮಸ್ಕರಿಸುತ್ತೇನೆ. ಉತ್ತಮ ಪುರುಷದ ಪ್ರಯೋಗವಿರುವದರಿಂದ "ನಾನು" ಎಂಬ ಕರ್ತೃವನ್ನು ಇಟ್ಟುಕೊಳ್ಳಬೇಕು.

## ತಾಮ್ರಪರ್ಣೀಯಾ

**ಅವತಾರಣಿಕಾ**– "ವಿಶ್ವಂಮಿಥ್ಯಾ" ವಿಭುರಗುಣವಾನಾತ್ಮನಾಂ ನಾಸ್ತಿ ಭೇದಃ ಇತ್ಯದ್ವೈತಜ್ಞಾನೇನ ವ್ಯಾಪ್ತಪ್ರಪಂಚಸ್ಯ ಅಭೇದಜ್ಞಾನನಿರಾಸಾಂ, ಸಾಧಿತ ಪಂಚಭೇದತಾರತಮ್ಯಾದಿಸಚ್ಛಾಸ್ತ್ರಪ್ರವಕ್ತಾರಂ ಶ್ರೀಮದಾನಂದತೀರ್ಥಮುನಿಂ ಪುನರಪಿ ಪ್ರಾರ್ಥಯತೇ ॥ ಪಂಚಭೇದ ಇತಿ।

ಮೂಲ– **ಪಂಚಭೇದಾತ್ಮಕ ಪ್ರಪಂಚಕೆ।**
**ಪಂಚರೂಪಾತ್ಮಕನೆ ದೈವಕ।**
**ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ।**
**ಪಂಚವಿಂಶತಿ ತತ್ವತರತಮ।**
**ಪಂಚಿಕೆಗಳನು ಪೇಳ್ದ ಭಾವಿ ವಿ–।**
**ರಿಂಚಿಯೆನಿಪಾನಂದತೀರ್ಥರ ನೆನೆವೆನನುದಿನವು ॥ ೯ ॥**

"ಪಂಚಭೇದಾತ್ಮಕ ಪ್ರಪಂಚಕೆ" ಇತ್ಯತ್ರ ಭೇದಪಂಚಕವಿಶಿಷ್ಟ ವಿಶ್ವಸ್ಯ ಜಗತಃ। ಭೇದಾಃ ಕೇ ಇತ್ಯತಆಹ ॥ ಜೀವೇಶ್ವರಯೋರ್ಭೇದಃ। ಜಡೇಶ್ವರಯೋರ್ಭೇದಃ। ಜಡಜೀವಯೋರ್ಭೇದಃ।ಜಡಾನಾಂ ಪರಸ್ಪರಂಭೇದಃ। ಜೀವಾನಾಂ ಪರಸ್ಪರಂ ಭೇದಃ। ಏತೇಪಂಚಭೇದಾಃ। ತದುಕ್ತಂ। ಜೀವೇಶ್ವರ ಭಿದಾಚೈವ ಜಡೇಶ್ವರಭಿದಾತಥಾ। ಜಡಭೇದೋಮಿಥಶ್ಚೈವ ಜಡಜೀವಭಿದಾ ತಥಾ ॥ ಮಿಥಶ್ಚಜೀವಭೇದೋಽಯಂ ಪ್ರಪಂಚೋಭೇದಪಂಚಕ ಇತಿ ವಚನಾತ್। ಏತಾದೃಶಸ್ಯ ವಿಶ್ವಸ್ಯ। "ಪಂಚರೂಪಾತ್ಮಕನೆ ದೈವಕ" ಇತ್ಯತ್ರ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣಾದಿ ಪಂಚರೂಪಾತ್ಮಕ-ನೃಸಿಂಹಃ, ದೈವಕ ದೈವಮೇವ ದೈವಕಃ ಸ್ವಾರ್ಥೇ ಕಪ್ರತ್ಯಯಃ।ಸಏವದೈವಮಿತಿ ಯೋವದತ್ ಅಬ್ರವೀತ್। ನನು ರುದ್ರಾದೀನಾಂ ಜಗದ್ವ್ಯಾಪ್ತತ್ವಾತ್ತತ್ರೈರಕತ್ವಾತ್‌ದೈವತ್ವಮಸ್ತಿ ತಾದೃಶರುದ್ರಾದೀನ್‌ವಿಹಾಯಕಿಮರ್ಥಂ ಭಗವತಏವ ಜಗದ್ದೈವತ್ವಮುಕ್ತಮಿತ್ಯಪೇಕ್ಷಾಯಾಮಾಹ।ಪಂಚಮುಖಶಕ್ರಾದಿಗಳು ಕಿಂಕರರು = ಪಂಚಮುಖೋರುದ್ರಃ ಶಕ್ರಃ=ಇಂದ್ರಃ, ತಾವೇವಾದೀ ಏಷಾಂ ತೇ ತಥೋಕ್ತಾಃ। ತೇ ಕಿಂಕರಾಃ ಭೃತ್ಯಾಃ ಯಸ್ಯ। ಶ್ರೀಹರಿಗೆ– ಶ್ರೀಮನ್ನಾರಾಯಣಸ್ಯೇತ್ಯರ್ಥಃ ಸೋಽಯಂ ನಾರಾಯಣ ಏವಾಸ್ಯ ಪ್ರಪಂಚಸ್ಯ ಪರದೇವತಾ ಇತ್ಯರ್ಥಃ। ಯಶ್ಚ "ಪಂಚವಿಂಶತಿ ತತ್ವತರತಮ ಪಂಚಿಕೆಗಳನು"= ಪಂಚವಿಂಶತಿತತ್ವಾನಾಂ ತತ್ಪತೀನಾಂ ಚ ಗುಣತಾರತಮ್ಯ ಪ್ರಕಾರಂ ಆಹ ತತ್ರಾದೌ। (೧) ಅವ್ಯಕ್ತ ತತ್ವಾಭಿಮಾನಿನೀ ರಮಾ ಹರೇಃ ಸಕಾಶಾತ್ ಅನಂತಗುಣೈರ್ನೀಚಾ। ತತ್‌ಸಕಾಶಾತ್ (೨) ಮಹತ್ತತ್ವಾಭಿಮಾನೀ ಬ್ರಹ್ಮಾ ವಿಜ್ಞಾನ ತತ್ವಾಭಿಮಾನೀ ವಾಯುಃ ತೌಕೋಟಿಗುಣತಃ ನೀಚೌ। ತದುಕ್ತಂ।



ಸರ್ವದಾ ಸುಖರೂಪಾ ಚ ಸರ್ವದಾ ಜ್ಞಾನರೂಪಿಣೀ ವಿಷ್ಣ್ವಾವೇಶಯುತಾನಂತಗುಣೈರ್ಹೀನಾ ಹರೇಃ ಸ್ಮೃತಾ ॥ ವಿಷ್ಣ್ವಾವಿಷ್ಟೌ ಬ್ರಹ್ಮ ವಾಯೂ ಶ್ರಿಯಃ ಕೋಟಿಗುಣಾಧಮಾವಿತಿಬೃಹತ್ತಾರತಮ್ಯೇ" ॥ ವೇದಾಭಿಮಾನಿನೀ ವಾಣೀ, ಭಕ್ತ್ಯಭಿಮಾನಿನೀ ಭಾರತೀ, ಇಮೇ ಗುಣತಃ ಸಮೇಪಿ ಸ್ವಸ್ವಪತ್ಯೋಃ ಸಕಾಶಾತ್ ಶತಗುಣನೀಚೇ। ತದುಕ್ತಂ। "ಸರಸ್ವತೀ ಹರಿಪ್ರೀತಿ ಸರ್ವವೇದಾತ್ಮಿಕಾಭುಜಿಃ। ಗಾಯತ್ರೀ ಗುರುಭಕ್ತಿಶ್ಚ ಶ್ರದ್ಧಾಪ್ರೀತಿ ಸುಖಾತ್ಮಿಕಾ ಚಂದ್ರೇತಿ ಬ್ರಹ್ಮವಾಯ್ವೋಸ್ತುಭಾರ್ಯೇ ಭರ್ತ್ರೋಃ ಶತಾಧಮೇಇತಿ ಬ್ರಹತ್ತಾರತಮ್ಯೇ॥ ಕಾಲಾಭಿಮಾನೀ ಗರುಡಃ ಜೀವಾಭಿಮಾನೀ ಶೇಷಃ ಅಹಂಕಾರಾಭಿಮಾನೀ ರುದ್ರಃ। ಏತೇಸಮಾಃ। ತಾಭ್ಯಾಂ ಸಕಾಶಾತ್ ಶತಗುಣತಃ ನೀಚಾಃ। ವಾಯೋಃಸಕಾಶಾತ್ ಸಹಸ್ರಗುಣತಃ ನೀಚಾಃ। ತದುಕ್ತಂ। "ಗುರುಡಾದ್ಯಾಃ ತ್ರಯಶ್ಚೈತೇ ಸರಸ್ವತ್ಯಾಃ ಶತಾವರಾಃ।ಸಹಸ್ರಗುಣತೋ ವಾಯೋಃಹೀನಾಶ್ಚೈತೇ ನಸಂಶಯಃ" ಇತಿ ವಚನಾತ್॥ ಸೌಪರ್ಣೀ ಗುರುಡಪತ್ನೀ,ವಾರುಣೀಶೇಷಪತ್ನೀ, ಪಾರ್ವತೀ ರುದ್ರಪತ್ನೀ। ಏತಾಃ ಪರಸ್ಪರಂ ಸಮಾಃ। ಸ್ವಪತಿಭ್ಯಃ ಶತಗುಣತೋ ನೀಚಾಃ। ಬೃಹತ್ತಾರತಮ್ಯಾನುಸಾರೇಣ। ತದುಕ್ತಂ "ಸೌಪರ್ಣೀ ಪಾರ್ವತೀ ಚೈವ ತಿಸ್ರಃ ಶೇಷಾಚ್ಛತಾವರಾ"ಇತಿ। ಋಗ್ಭಾಷ್ಯಾನುಸಾರೇಣ ಶತಗುಣನೀಚಾಃ। ಶೇಷಾದ್ಯೈತಾಃ ಶತಾವರಾಃ ಇತಿ ವಚನಾತ್। ಛಾಂದೋಗ್ಯ ಭಾಷ್ಯಾನುಸಾರೇಣ ದಶಗುಣ ನೀಚಾಃ। ಏತಾಃ ಸ್ವ ಸ್ವಪತಿಭ್ಯಶ್ಚಃಹೀನಾ ದಶಗುಣೇನ ಚೇತಿವಚನಾತ್। ತಾಸಾಂಸಕಾಶಾತ್। ಐಶ್ವರ್ಯಾಭಿಮಾನೀ ಇಂದ್ರಃ ಅವೈರಾಗ್ಯಾಧಿಪತಿಃ ಕಾಮಃ।ಏತೌ ಸಮಾವೇವ, ತಥಾಪಿಕಿಂಚಿದಧಿಕಃ ಇಂದ್ರಃ ಪದನಿಮಿತ್ತಾತ್। ಬೃಹತ್ತಾರತಮ್ಯಾನುಸಾರೇಣ ಶತಗುಣ ನೀಚೌ। ತದುಕ್ತಂ ಶತಾವರಾ ಉಮಾಯಾಶ್ಚಕಾಮ ಇಂದ್ರಾಧಮೋಲ್ಪತಃ ಇತಿ। ಇತ್ಥಂ ಪಂಚವಿಂಶತಿ ತತ್ವಾನಾಂ ತತ್ಪತೀನಾಂಚ। ತರತಮಪಂಚಿಕೆಗಳನು। ಪಚಿವಿಸ್ತಾರೇ॥ ಧಾತು ಪರ್ಯಾಲೋಚನಯಾ ತದ್ವಿಸ್ತಾರಂಚ। ಪೇಳ್ದ–ಅಬ್ರವೀತ್। ಯಶ್ಚ, ಭಾವಿವಿರಿಂಚಿಯೆನಿಪ=ಭಾವಿ ಚತುರ್ಮುಖ ಇತ್ಯುದೀರಿತಃ। ತಮಾನಂದತೀರ್ಥ ಮುನಿಂ। ನೆನೆವೆ=ಸ್ಮರಾಮಿ. ಅನುದಿನವು ನಿರಂತರಮಿತ್ಯರ್ಥಃ ॥ ೯"

**ಕನ್ನಡಾರ್ಥ**

ಜಗತ್ತು ಸುಳ್ಳು; ದೇವರಿಗೆ ಜ್ಞಾನಾನಂದಾದಿ ಗುಣಗಳು ಇಲ್ಲ; ಜೀವ

ರಿಂದ ಭೇದವಿಲ್ಲ. ಜೀವರಲ್ಲಿಯೂ ಜಡಗಳಲ್ಲಿಯೂ ಪರಸ್ಪರ ಭೇದಗಳಿಲ್ಲ"ವೆಂಬ ಅದ್ವೈತವಾದವು ಪ್ರಪಂಚದಲ್ಲಿ ತುಂಬ ಹರಡಿರಲು ಈ ಅಜ್ಞಾನವನ್ನು ಕಳೆಯಲು ಪಂಚಭೇದ-ತಾರತಮ್ಯಗಳನ್ನು ಸಮರ್ಥನೆಗೆಯ್ಯುವ ಸಚ್ಛಾಸ್ತ್ರಗಳನ್ನು ಉಪದೇಶಿಸಿದ ಶ್ರೀ ವ:ದಾನಂದ ತೀರ್ಥ ಮುನಿಗಳನ್ನು ಮತ್ತೊಮ್ಮೆ ಬೇಡಿಕೊಳ್ಳುತ್ತಾರೆ.

"ಪಂಚಭೇದಾತ್ಮಕ ಪ್ರಪಂಚಕೆ"=ಐದು ಶರಹದ ಭೇದಗಳಿಂದ ಕೂಡಿದ ಜಗತ್ತಿಗೆ. ೧) ಜೀವೇಶ್ವರ ಭೇದ. ೨) ಜಡೇಶ್ವರ ಭೇದ (೩) ಜಡಜೀವಭೇದ (೪) ಜೀವ ಜೀವ ಭೇದ (೫) ಜಡ-ಜಡಭೇದ. "ಜೀವೇಶ್ವರಭಿದಾ" ಎಂಬ ಪ್ರಮಾಣಗಳಿಂದ ಭೇದಪಂಚಕವು ಪ್ರಮಿತವಾಗಿರುತ್ತದೆ.

" ಪಂಚರೂಪಾತ್ಮಕನೆ ದೈವಕ "— ೧) ಅನಿರುದ್ಧ, ೨) ಪ್ರದ್ಯುಮ್ನ, ಸಂಕರ್ಷಣ, ೪) ವಾಸುದೇವ, ೫) ನಾರಾಯಣ; ಇವು ಐದು ರೂಪಗಳು. ಈ ಐದು ರೂಪಗಳನ್ನು ತಾಳಿದ ಶ್ರೀ ನೃಸಿಂಹನೇ ದೇವನು. ರುದ್ರಮುಂತಾದವರು ಜಗದ್ವ್ಯಾಪಕರೂ, ಜಗತ್ಪ್ರೇರಕರೂ ಆಗಿರುವರು. ಅವರೂ ದೇವತೆಗಳೇ; ಆದುದರಿಂದ ರುದ್ರಾದಿಗಳನ್ನು ಬಿಟ್ಟು "ನಾರಾಯಣನೇ ಪರಮದೇವ" ನೆಂಬುದು ಹೇಗೆ? ಎಂದು ಆಕ್ಷೇಪವುಂಟಾಗಲು "ಪಂಚಮುಖ ಶಕ್ರಾದಿಗಳು" ಎಂದು ಹೇಳಿರುತ್ತಾರೆ. ರುದ್ರ ಇಂದ್ರ ಮುಂತಾದದೇವತೆಗಳು ಭೃತ್ಯರು; ಆದುದರಿಂದ ಹರಿಯೇ ಪರಮದೈವನು ಎಂದು ಅಭಿಪ್ರಾಯ.

"ಪಂಚವಿಂಶತಿ ತತ್ವ ತರತಮ ಪಂಚಿಕೆಗಳಂ"= ಪಂಚವಿಂಶತಿ ತತ್ವಗಳು ಹಾಗೂ ಅವುಗಳ ಅಭಿಮಾನಿಗಳು,=ಇವರುಗಳ ಗುಣ ತಾರತಮ್ಯ ಪ್ರಕಾರವನ್ನು ಎಂದು ಅರ್ಥ.

ಅವ್ಯಕ್ತ ತತ್ವಾಭಿಮಾನಿಯಾದ ರಮಾದೇವಿಯು ಹರಿಯ ದಶೆಯಿಂದ (ಹರಿಗಿಂತಲೂ) ಅನಂತಗುಣಗಳಿಂದ ನೀಚಳು; ಕಡಿಮೆಯವಳು. ಮಹತ್ತತ್ವಾಭಿಮಾನಿ ಚತುರ್ಮುಖ ಹಾಗೂ ವಿಜ್ಞಾನತತ್ವಾಭಿಮಾನಿ ವಾಯು, ಇವರೀರ್ವರೂ ರಮಾದೇವಿಗಿಂತಲೂ ಕೋಟಿ ಗುಣಗಳಿಂದ ಕಡಿಮೆಯುವರು. ವೇದಾಭಿಮಾನಿಯಾದ ಸರಸ್ವತೀ, ಭಕ್ತ್ಯಭಿಮಾನಿಯಾದ ಭಾರತೀ, ಇವರೀರ್ವರೂ ತಮ್ಮ ಪತಿಗಳ ದೆಶೆಯಿಂದ (ಅವರಕಿಂತಲೂ) ಒಂದುನೂರು ಗುಣಗಳಿಂದ ಕಡಿಮೆಯುವರು. ಕಾಲಾಭಿಮಾನಿ ಗರುಡ, ಜೀವಾಭಿಮಾನಿಶೇಷ,



ಅಹಂಕಾರಾಭಿಮಾನಿ ರುದ್ರ, ಇವರು ಪರಸ್ಪರ ಸಮರಾಗಿದ್ದರೂ ಭಾರತೀ ಸರಸ್ವತಿಯರಿಗಿಂತ ಒಂದುನೂರು ಗುಣಗಳಿಂದ ಕಡಿಮೆಯವರು. ಗರುಡಪತ್ನಿಯಾದ ಸೌಪರ್ಣಿ, ಶೇಷಪತ್ನಿಯಾದ ವಾರುಣಿ, ರ:ದ್ರಪತ್ನಿಯಾದ ಉಮಾ, ಇವರು ಪರಸ್ಪರ ಸಮರೂ, ತಮ್ಮತಮ್ಮ ಪತಿಗಳಿಗಿಂತ ಒಂದುನೂರು ಗುಣಗಳಿಂದ ಅಧಮರೂ ಇರುತ್ತಾರೆ. ಇದನ್ನು ಋಗ್ಭಾಷ್ಯದಲ್ಲಿ ಹೇಳಿರುತ್ತದೆ. ಛಾಂದೋಗ್ಯ ಉಪನಿಷತ್ತಿನ ಭಾಷ್ಯದಲ್ಲಿ "ಹತ್ತುಗುಣಗಳಿಂದ ಕಡಿಮೆಯವರು." ಎಂದು ಹೇಳಲ್ಪಟ್ಟಿರುತ್ತದೆ.

ಇವರುಗಳಿಗಿಂತಲೂ ಒಂದುನೂರು ಗುಣಗಳಿಂದ ಐಶ್ವರ್ಯಾಭಿಮಾನಿಯಾದ ಇಂದ್ರ, ಅವೈರಾಗ್ಯಾಧಿಪತಿ ಕಾಮ, ಇವರಿಬ್ಬರು- ಅಧಮರು ( ಕಡಿಮೆಯವರು) ಮತ್ತು ಪರಸ್ಪರ ಸಮರು. ಪದನಿಮಿತ್ತವಾಗಿ ಇಂದ್ರನು ಕಾಮನಿಗಿಂತಲೂ ಕಿಂಚಿತ್ ಅಧಿಕನಾಗಿರುತ್ತಾನೆ. †

ಹೀಗೆ ಪಂಚವಿಂಶತಿ ತತ್ವಗಳ, ತದಭಿಮಾನಿಗಳ ತಾರತಮ್ಯಗಳನ್ನು ವಿಸ್ತಾರದಿಂದ ಪೇಳ್ದ=ಹೇಳಿರುವ "ಭಾವಿವಿರಚಿ"=ಭವಿಷ್ಯತ್ತಿನ ಬ್ರಹ್ಮರಾದ ಶ್ರೀ ಮದಾನಂದತೀರ್ಥ ಮುನಿಗಳನ್ನು ನಿರಂತರದಲ್ಲಿ ಸ್ಮರಿಸುವೆ ಎಂದು ಭಾವಾರ್ಥ ||೯||

**ಅವತರಣಿಕಾ**— ಅಹಂ ಗ್ರಂಥಕರ್ತೇತ್ಯಭಿಮಾನ ನಿರಾಸಾರ್ಥಂ ಮನೋಭಿಮಾನಿತ್ವಾದಹಂಕಾರತತ್ವಾಭಿಮಾನಿತ್ವಾದ್ವೈಷ್ಣವಂ ಸೋಮಂ ಸದಾಶಿವಂ ಶ್ಲೋಕದ್ವಯೇನಾಭೀಷ್ಟೌತಿ ||

ಮೂಲ— **ವಾಮದೇವ ವಿರಿಂಚಿತನಯ ಉ- |**
**ಮಾಮನೋಹರ ಉಗ್ರ ಧೂರ್ಜಟಿ |**
**ಸಾಮಜಾಜಿನವಸನಭೂಷಣ ಸುಮನಸೋತ್ತಂಸ ||**
**ಕಾಮಹರ ಕೈಲಾಸಮಂದಿರ |**
**ಸೋಮಸೂರ್ಯಾನಲವಿಲೋಚನ |**
**ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಳವ || ೧೦ ||**

† ಇವೆಲ್ಲ ತಾರತಮ್ಯ ಪ್ರಕ್ರಿಯೆಗಳಿಗೆ ಮೂಲದಲ್ಲಿ ಹೇಳಲಾಗಿರುವ ಬೃಹತ್ತಾರತಮ್ಯ-ಛಾಂದೋಗ್ಯ-ಋಗ್ಭಾಷ್ಯಗಳ ವಾಕ್ಯಗಳು ಆಧಾರಗಳು; ಇವುಗಳಅರ್ಥವು ಸ್ಪಷ್ಟವಿರುವದರಿಂದ ಪ್ರತ್ಯೇಕವಾಗಿ ಹೇಳುವ ಕಾರಣವಿಲ್ಲ.

**ತಾಮ್ರಪರ್ಣೀವ್ಯಾಖ್ಯಾನ–ವಾಮದೇವೇತಿ |** ವಾಮಃ ಸುಂದರಶ್ಚಾಸೌದೇವಶ್ಚ ವಾಮದೇವಃ | ವಾಮೋ ಮನೋಹರಸುಂದರ ಇತ್ಯಭಿಧಾನಾತ್| ದೇವಃ ಕ್ರೀಡಾದಿಗುಣವಿಶಿಷ್ಟಃ ದ್ಯೋತಮಾನಶ್ಚ|ಉಮಾಮನೋಹರಃ |ಉಮಾ ಕಾತ್ಯಾಯನೀ ಗೌರೀಇತ್ಯಭಿಧಾನಾತ್ ಪಾರ್ವತೀಮನೋಹರಇತ್ಯರ್ಥಃ | ಉಗ್ರಃ | ಉಂ ಮೃತ್ಯುಂ ಸಂಸಾರಂ ಗ್ರಸತೀತಿ ಉಗ್ರಃ | ಉರ್ಮೃತ್ಯುರಿತಿಃ ಸಂಪ್ರೋಕ್ತಃ ಮೃತ್ಯುಃ ಸಂಸಾರ ಈರಿತಃ ಇತಿ ಏಕಾಕ್ಷರಕೋಶೇ |ಸಂಸಾರನಾಶಕೇತ್ಯರ್ಥಃ|ಧೂರ್ಜಟಿ=ಧೂರ್ಧೂಮಃ ಆಕಾಶಃ ತತ್ಸದೃಶಾಃಜಟಾ ಅಸ್ಯಸಂತೀತಿ ತಥೋಕ್ತಃ| ಧೂಮವರ್ಣಜಟಾವಿಶಿಷ್ಟೇತ್ಯರ್ಥಃ| ಧೂರ್ಧೂಮಇತಿಸಂಪ್ರೋಕ್ತಃ ಧೂಮೋವ್ಯೋಮ ಇತೀರಿತಃ ಇತಿಏಕಾಕ್ಷರಕೋಶೇ | ಸಾಮಜಾಜಿನ ವಸನ ಭೂಷಣ= ಸಾಮಜೋಗಜಃ | ಕರೀಸಾಮಜೋಗಜ ಇತ್ಯಭಿಧಾನಾತ್ | ತಸ್ಯ ಅಜಿನಂ ಚರ್ಮೈವ ವಸನಂ=ವಸ್ತ್ರಂ ತೇನಭೂಷಣಾಲಂಕೃತಃ ಸಂಬೋಧನಂ | ಸುಮನಸೋತ್ತಂಸ = ಸುಮನಸಾಂ ಸ್ವಾಪೇಕ್ಷಯಾ ಅಧಮದೇವತಾನಾಂ | ಉತ್ತಂಸ=ಶ್ರೇಷ್ಠ | ಕಾಮಹರ=ಮನ್ಮಥಧ್ವಂಸೀ | ಕೈಲಾಸಮಂದಿರ=ಕೈಲಾಸ ಏವ ಮಂದಿರಂ ಯಸ್ಯೇತಿಕೈಲಾಸನಿಲಯೇತ್ಯರ್ಥಃ | ಸೋಮಸೂರ್ಯಾನಳವಿಲೋಚನ = ಸೋಮಃ=ಚಂದ್ರಶ್ಚ,ಸೂರ್ಯಶ್ಚ ಅನಲಃ=ಅಗ್ನಿಶ್ಚ ತಥೋಕ್ತಾಃ| ತ ಏವಲೋಚನಾನಿ ಯಸ್ಯಸತಥೋಕ್ತಃ | ಕಾಮಿತಪ್ರದ=ಇಷ್ಟಾರ್ಥಪ್ರದ ರುದ್ರ|ಎಮಗೆ =ಅಸ್ಮಾಕಂ | ಮಂಗಳವಾ= ಮಂಗಳಂ | ಕರುಣಿಪುದು=ದೇಹೀತ್ಯರ್ಥಃ ||

ಮನೋಭಿಮಾನಿಗಳೂ ಅಹಂಕಾರತತ್ವಾಭಿಮಾನಿಗಳೂ ಆಗಿರುವದರಿಂದ ವೈಷ್ಣವಾಗ್ರಣಿಯಾದ ರುದ್ರದೇವರನ್ನು "ನಾನು ಗ್ರಂಥಕರ್ತನು" ಎಂಬ ಅಹಂಕಾರವನ್ನು ಕಳಿದುಕೊಳ್ಳುವದಕ್ಕೋಸ್ಕರ ಎರಡು ಪದ್ಯಗಳಿಂದ ಸ್ತೋತ್ರಗೈಯ್ಯುತ್ತಾರೆ.–

ವಾಮದೇವ– ಮನೋಹರನೂ ಕ್ರೀಡಾದಿಗುಣವಂತನೂ ಹೊಳೆಯುವವನೂ ಆದವನೇ !

ಉಮಾಮನೋಹರ– ಪಾರ್ವತೀ ಮನೋಹರ !

ಏಕಾಕ್ಷರಕೋಶದಲ್ಲಿ ಹೇಳಿದಂತೆ " ಉಂ=ಸಂಸಾರವನ್ನು ಗ್ರ=ನಾಶಗೆಯ್ಯುವವನೇ ! ಎಂದು ಅರ್ಥ



ಧೂರ್ಜಟಿ= ಧೂಮ (ಹೊಗೆ)ದಂತಿರುವ ಜಡೆಗಳನ್ನು ಧರಿಸಿದವನೇ ! (ಏಕಾಕ್ಷರಕೋಶದಲ್ಲಿ ಧೂ ಹೊಗೆಯೆಂದು ಹೇಳಿರುವದರಿಂದ ಈ ಅರ್ಥ )

ಸಾಮಜಾಜಿನ ವಸನ ಭೂಷಣ= ಆನೆಯ ಚರ್ಮವೆಂಬ ವಸ್ತ್ರಭೂಷಣದಿಂದ ಅಲಂಕೃತನೇ !

ಸುಮನಸೋತ್ತಂಸ= ಇಂದ್ರಾದಿದೇವತೆಗಳಿಗಿಂತ ಉತ್ತಮನೇ !

ಕಾಮಹರ=ಕಾಮನನ್ನು ಸಂಹಾರಗೈದವನೇ !

ಕೈಲಾಸಮಂದಿರ=ಕೈಲಾಸವೇ ಮನೆಯಾಗಿವುಳ್ಳವನೇ !

ಸೋಮಸೂರ್ಯಾನಲವಿಲೋಚನ=ಚಂದ್ರ ಸೂರ್ಯ, ಅಗ್ನಿಗಳೇ ಕಣ್ಣುಗಳಾಗಿ ಉಳ್ಳವನೇ!

ಕಾಮಿತಪ್ರದ= ಇಷ್ಟಾರ್ಥಪ್ರದನೇ ! ಶ್ರೀ ರುದ್ರನೇ !

ಎಮಗೆ=ನಮಗೆ, ಸದಾ=ಯಾವಾಗಲೂ, ಸುಮಂಗಲವ=ಉತ್ತಮ ಮಂಗಲವನ್ನು, ಕರುಣಿಪುದು=ಕರುಣೆಯಿಂದ ಕೊಡು! ಎಂದು ಅರ್ಥ.

## ತಾಮ್ರಪರ್ಣೀಯಾ

**ಅವತರಣಿಕಾ**–ನನ್ವೇವಂ ನಾನಿರ್ಧಾರಿತಂಸ್ವರೂಪಸ್ಯ ವಂದನಂ ಯುಕ್ತ ಮಿತ್ಯಾಶಂಕ್ಯ ತದ್ಗುಣಕಥನೇನ ತತ್‌ಸ್ವರೂಪಜ್ಞಾನಾತ್ ತಮೇವ ರುದ್ರಂ ಪುನರಪಿ ಸ್ತೌತಿ ||

ಮೂಲ– **ಕೃತ್ತಿವಾಸನೆ ಹಿಂದೆ ನೀನಾ–|**
**ಲ್ವತ್ತು ಕಲ್ಪ ಸಮೀರನಲಿ ಶಿ–|**
**ಷ್ಯತ್ವ ವಹಿಸ್ಯಖಿಳಾಗಮಾರ್ಥಗಳೋದಿ ಜಲಧಿಯೊಳು ||**
**ಹತ್ತುಕಲ್ಪದಿ ತಪವಗೈದಾ– |**
**ದಿತ್ಯರೊಳಗುತ್ತಮನೆನಿಸಿ ಪುರು–|**
**ಷೋತ್ತಮನ ಪರಿಯಂಕಪದ ವೈದಿದಿಯೊ ಮಹದೇವ||೧೧||**

**ತಾಮ್ರಪರ್ಣೀಯ ವ್ಯಾಖ್ಯಾನ**– ಕೃತ್ತಿವಾಸನೆಇತಿ=ವ್ಯಾಘ್ರಚರ್ಮಾಂಬರ ಇತ್ಯರ್ಥಃ | ತರಕ್ಷುವರ ಕೃತ್ತಿಮದಿತಿವಚನಾತ್ | ಹಿಂದೆ=ಪದಾತ್‌ಪ್ರಾಕ್ ಶೈವಪದಾತ್‌ಪ್ರಾಕ್|ನೀ=ತ್ವಂ |ಲಾತವ್ಯರುದ್ರಪದಸ್ಥಃಭವಾನ್|ಸಾರ್ಧಪರಾರ್ಧ ಮಿತ್ಯುಕ್ತೇಃ | ಬ್ರಹ್ಮಣಃ ಪಂಚಸಪ್ತತಿವರ್ಷೇಷು | ಉಗ್ರತಪನಾಮ್ನಾ-ಉಕ್ತವ

ರ್ಷೇಷು। ಸಮೀರನಲಿ ವಾಯೋಃ ಶಿಷ್ಯತ್ವಮಾಧಾಯ । ಅಖಿಳಾಗಮಗಳೋದಿ। ಅನಂತವೇದೋಕ್ತ ಭಗವದ್ಗುಣಗಣ ಶ್ರವಣಮನನೇ ಕೃತ್ವಾತದನಂತಂರಉಕ್ತ ವರ್ಷೇಷು । ಸಸಂತೋಷಮನಸಾ ಭಗವದುಪಾಸನಂ ಕರೋತಿ । ಅನಂತರಂ ಸ್ವಯೋಗ್ಯಾಪರೋಕ್ಷೋಭವತಿ । ತದುಕ್ತಂ । † ಶುಶ್ರಾವೋಗ್ರತಪಾನಾಮ ಯೋಗ್ಯೋ ರುದ್ರ ಪದಸ್ಯಯಃ।ಸಾರ್ಧಂಪರಾರ್ಧಂವಿಷ್ಣೋಸ್ತುಗುಣಾನ್ ಭಕ್ತ್ಯಾ ಸಮನ್ವಿತಃ । ತತ್ರಿಭಾಗಮುಪಾಸಾಂಚ ಚಕ್ರೇ ಸಂಭೃತಮಾನಸಃ ಇತಿ ಅನುವ್ಯಾಖ್ಯಾನೇ ॥ಅಪರೋಕ್ಷಾನಂತರಂ, ಜಲಧಿಯೊಳು=ಲವಣಸಮುದ್ರೇ, ।ಹತ್ತು ಕಲ್ಪದಿ=ದಶಕಲ್ಪೇಷು ! ತಪವಗೈದು=ತಪಃಕೃತ್ವಾ ॥ ತದುಕ್ತಂ । ದಶಕಲ್ಪಂ * ತಪಶ್ಚೀರ್ಣಂ ರುದ್ರೇಣ ಲವಣಾಂಭಸಿ ಇತ್ಯನುವ್ಯಾಖ್ಯಾನೇ । ಶೈವಪದಾತ್ ಏಕೋನಪಂಚಾಶತ್ ಕಲ್ಪೇಷು ಸಾಧನಾನಂತರಂ ರುದ್ರಪದಪ್ರಾಪ್ತಿಃ । ತದನಂತರಂ। "ಆದಿತ್ಯರೊಳಗುತ್ತಮನೆನಿಸಿ=ದೇವಾನಾಂಮಧ್ಯೇಸ್ವಾವರಾಪೇಕ್ಷಯಾ

---

† ಅನುವ್ಯಾಖ್ಯಾನದ ಅ. ೪.ಪಾ. ೧.ಅಧಿ. ೧ರಲ್ಲಿ ಬರುವ ಶ್ಲೋಕವಿದು. ಇದರ ಅರ್ಥವನ್ನು ಶ್ರೀ ಮನ್ನ್ಯಾಯಸುಧಾನುಸಾರವಾಗಿ ಕೊಡಲಾಗಿದೆ. ಇದರ ಹಿಂದಿನ ಚರಣವಿಂತಿದೆ "ಲಿಂಗಾಲ್ಲಾತವ್ಯತಃಪೂರ್ವಂ ಋಜೋಃ ಬ್ರಹ್ಮತ್ವತಃ ಶತಾತ್" ಎಂದು.

ಈ ಬ್ರಹ್ಮಕಲ್ಪವನ್ನು ಆರಂಭಿಸಿಗೊಂಡು ಒಂದು ನೂರು ಬ್ರಹ್ಮಕಲ್ಪಗಳು ಕಳೆದ ನಂತರದಲ್ಲಿ ಯಾರಿಗೆ ಬ್ರಹ್ಮ ಪದವಿಯುವು ಬರುತ್ತದೆಯೋ ಅವರು ಲಾತವ್ಯರು. ಶಿಷ್ಯರಿಂದ ಉಪಾಸಿತರಾಗುವಂಥ ಲಾತವ್ಯರೆಂಬ ಬ್ರಹ್ಮಪದವಿಗೆ ಯೋಗ್ಯರಾದ ಋಜುಗಳ ಬಳಿಯಲ್ಲಿ ಇದ್ದು, ರುದ್ರಪದವಿಗೆ ಯೋಗ್ಯನಾದ " ಉಗ್ರತಪ "ನೆಂಬುವವನು ಒಂದೂವರೆ ಪರಾರ್ಧ ಪರ್ಯಂತವಾಗಿ(ಸಾರ್ಧಪರಾರ್ಧ) ಭಗವಂತನ ಗುಣಗಳನ್ನುಶ್ರವಣಗಳಿಂದ ತಿಳಿದುಕೊಂಡು, ಶ್ರವಣಕಾಲದ ಮೂರನೆಯಭಾಗಕ್ಕೆ ಸರಿಯಾಗುವ ಕಾಲದಲ್ಲಿ (ಹತ್ತು ಮನ್ವಂತರವಲ್ಲಿ) ಮನನ ನಿದಿಧ್ಯಾಸನರೂಪವಾದ ಉಪಾಸನೆಯನ್ನು ಉಪಾಸ್ಯಮೂರುತಿಯಲ್ಲಿಯೇ ಏಕಾಗ್ರವಾದ ಮನಸ್ಸಿನಿಂದ ಮಾಡಿದನು. "

* ಇದು ಅ. ३.ಪಾ. ೪. "ಉಪಮರ್ದಂಚ" ಸೂತ್ರದಲ್ಲಿದ್ದ ಅನುವ್ಯಾಖ್ಯಾನದಲ್ಲಿರುವ ಶ್ಲೋಕ. ಕಲ್ಪವೆಂದರೆ ಬ್ರಹ್ಮದೇವರ ದಿವಸವೆಂದು ತಿಳಿಯಬೇಕು. ಅಂದರೆ ಹತ್ತು ಕಲ್ಪಗಳು ಮುಗಿಯುವವರೆಗೆ ತಪಸ್ಸನ್ನು ರುದ್ರದೇವರು ಲವಣ ಸಮುದ್ರದಲ್ಲಿ ಮುಳುಗಿ ಅನುಷ್ಠಿಸಿದರು.



ಶ್ರೇಷ್ಠಃಇತೀರಿತಃಸನ್ ರುದ್ರಶ್ಚೈವ ಸುರೋತ್ತಮಃ ‡ ವೈಷ್ಣವಾನಾಂ ಯಥಾ ರುದ್ರಃಇತಿವಚನಾತ್ ಬ್ರಹ್ಮಣಃಪರಾರ್ಧಪರ್ಯಂತಂ ಪ್ರಾಪ್ತರುದ್ರಪದರುದ್ರೇಣ। ಚತಾರಿಂಶದ್ಬ್ರಹ್ಮಾರಭ್ಯ ರುದ್ರಸ್ಯ ಹಪರೋಕ್ಷಂ । ತಥಾ ಪ್ರಾರಬ್ಧಸಂಕ್ಷಯೋ ಭವತಿ। ಏಕಚತ್ವಾರಿಂಶದ್ಬ್ರಹಕಲ್ಪೇ ಶೇಷತ್ವಂ ಯಾತೀತ್ಯರ್ಥಃ। ತದುಕ್ತಂ × ಚತ್ವಾರಿಂಶದ್ಬ್ರಹ್ಮಕಲ್ಪಂ ಸಮಾರಭ್ಯಖಗೇಶ್ವರ। ರುದ್ರಸ್ಯಹ್ಯಪರೋಕ್ಷಂಚ ತಥಾ ಪ್ರಾರಬ್ಧಸಂಕ್ಷಯಃ ! ಏಕಚತ್ವಾರಿಂಶತ್ ಕಲ್ಪೇ ಶೇಷತ್ವಂ ಯಾತಿ ಸುವ್ರತ ಇತಿ ಗಾರುಡೇ ॥

† ನನು ಪಂಚಾಶೀತಿಬ್ರಹ್ಮಕಲ್ಪಂ ಸಮಾರಭ್ಯ ಮಹಾಪ್ರಭೋ। ರುದ್ರಸ್ಯಪರೋಕ್ಷಂಸ್ಯಾತ್ತಥಾಪ್ರಾರಬ್ಧಸಂಕ್ಷಯಃ । ಇತಿಗರುಡಂಪ್ರತಿ ಬ್ರಹ್ಮೋಕ್ತತ್ವಾಚ್ಚ ಚತ್ವಾರಿಂಶದ್ಬ್ರಹ್ಮಕಲ್ಪ ಮಿತ್ಯಸ್ಯ ಪರಸ್ಪರ ವಿರೋಧೋ ಆಯಾಸ್ಯತೀತ್ಯೇವಂ ಪೃಷ್ಟೋ ಭಗವಾನ್ ಗರುಡಂ ಪ್ರತಿ ಪಂಚಾಶೀತಿಕಲ್ಪಮಿತ್ಯಸ್ಯ ಬ್ರಹ್ಮೋಕ್ತಸ್ಯ, ಚತ್ವಾರಿಂಶದ್ಬ್ರಹ್ಮ ಕಲ್ಪಮಿತಿ ಮಯೋಕ್ತಸ್ಯೈಕಾರ್ಥತ್ವಾದ್ವಿ

---

‡ ಇದು ಭಾಗವತದ ಶ್ಲೋಕ. ವಿಷ್ಣುಭಕ್ತರಾದ ಇಂದ್ರಾದಿದೇವತೆಗಳಲ್ಲಿ ಹೇಗೆ ರುದ್ರದೇವನು ಶ್ರೇಷ್ಠನೋ ಹಾಗೆ ಪುರಾಣಗಳಲ್ಲಿ ಭಾಗವತವು ಶ್ರೇಷ್ಠ ಎಂದು ತಾತ್ಪರ್ಯ. ಇದರಲ್ಲಿ "ರುದ್ರದೇವರು ಮಿಕ್ಕ ಇಂದ್ರಾದಿಗಳಲ್ಲಿ ಉತ್ತಮರು" ಎಂದು ದೃಷ್ಟಾಂತ ಮುಖವಾಗಿ ಹೇಳಲಾಗಿದೆ ಎಂದು ತಿಳಿಯಬೇಕು.

× "ನಾಲ್ವತ್ತು ಬ್ರಹ್ಮಕಲ್ಪವನ್ನು ಆರಂಭಿಸಿಕೊಂಡು ರುದ್ರದೇವರಿಗೆ ಅಪರೋಕ್ಷವೂ ಪ್ರಾರಬ್ಧಕರ್ಮನಾಶವೂ ಆಗಿ, ನಾಲ್ವತ್ತೊಂದನೆಯ ಕಲ್ಪದಲ್ಲಿ ಶೇಷಪದವಿಯು ಬರುವದು" ಎಂಬುದು ಗರುಡ ಪುರಾಣ ವಚನದ ಭಾವ.

† ಬ್ರಹ್ಮದೇವರು ಗರುಡನಿಗೆ ಹೇಳುತ್ತಾರೆ. "ಪಂಚಾಶೀತಿ" ಬ್ರಹ್ಮ ಕಲ್ಪದಿಂದ ಆರಂಭಿಸಿ ರುದ್ರನಿಗೆ ಅಪರೋಕ್ಷವೂ ಪ್ರಾರಬ್ಧನಾಶವೂ ಆಗುತ್ತದೆ" ಎಂದು. ಆದರೆ ಮುಂದೆ "ಚತ್ವಾರಿಂಶತ್" ಎಂದು ಹೇಳಿದರೆ ವಿರೋಧವು ಬರುತ್ತದೆ. ಇವೆರಡೂ ಶಬ್ದಗಳಿಗೆ ಸಮಾನವಾದ ಅರ್ಥವನ್ನು ಭಗವಂತನು ಸ್ವತಃ ಗರುಡನಿಗೆ ಹೇಳಿ ತಿಳಿಸುತ್ತಾನೆ— ಪಂಚ= ಐದು. ಅಶೀತಿಸಂಖ್ಯೆಯು ಎಂಟು ಎಂಬುದನ್ನು ಲೇಖದಲ್ಲಿ ತೋರಿಸುವದರಿಂದ "ಎಂಟು" ಎಂದು ತಿಳಿಯಬೇಕು. ಈರ ಗುಣಕವು ಲಕ್ಕೆ ಎಷ್ಟಾಗುವದೋ ಅಷ್ಟು ವರ್ಷಗಳೆಂದರೆ ನಾಲ್ವತ್ತು, ಆದುದರಿಂದ ಬ್ರಹ್ಮದೇವರು ಹೇಳಿದ ಸಂಗತಿಗೂ ಭಗವಂತನು (ತಾನು) ಹೇಳಿದ ಸಂಗತಿಗೂ ವಿರೋಧವಿಲ್ಲ" ಎಂದು ಈ ಶ್ಲೋಕಗಳ ಭಾವ.

ರೋಧೋನಾಸ್ತೀತ್ಯಾಹ । ತದ್ಯಥಾ । ಪಂಚಾಶೀತಿರಿತ್ಯತ್ರ ಪಂಚೋತ್ತರಂಅಷ್ಟ ಸಂಖ್ಯಾವರ್ತತೇ।ಅತ್ರವಿದ್ಯಮಾನಾಅಶೀತಿಸಂಖ್ಯಾ ಅಷ್ಟೇತ್ಯುಚ್ಯತೇ=ಅಷ್ಟಪಂಚ (೮×೫) (೪೦) ಚತ್ವಾರಿಂಶದ್ಭವತೀತ್ಯಭಿಪ್ರಾಯೇಣ ಚತ್ವಾರಿಂಶದ್ಬ್ರಹ್ಮ ಕಲ್ಪಮಿತ್ಯೇವೋಕ್ತಂ ಮಯಾ ನಚಾನ್ಯಥೇತ್ಯರ್ಥಃ। ತದುಕ್ತಂ।। ಬ್ರಹ್ಮೋಕ್ತಸ್ಯ ಮಯೋಕ್ತಸ್ಯ ವಿವಾದೋನಾಸ್ತಿಸರ್ವಥಾ। ಅಶೀತಿರ್ಹ್ಯಷ್ಟಕಃ ಪ್ರೋಕ್ತಃಅಷ್ಟ ಪಂಚಖಗೇಶ್ವರ । ಚತ್ವಾರಿಂಶದ್ ಬ್ರಹ್ಮಕಲ್ಪಮೇವ ಮಾಹ ಚತುರ್ಮುಖಃ । ಇತಿ ಗಾರುಡೇ।। ಶೈವಪದ ಪ್ರಾಪ್ತ್ಯ ನಂತರಂ ರುದ್ರಸ್ಯ । ಚತ್ವಾರಿಂಶತ್ ಕಲ್ಪ ಸಾಧನೇನ— ಶೇಷಪ್ರದಪ್ರಾಪ್ತಿರಿತ್ಯುಕ್ತಂ ಚೇತ್ ಪಂಚಾಶತ್ ಕಲ್ಪಸ್ಯ ದಶಕಲ್ಪನ್ಯೂನತ್ವಂ।ತಸ್ಮಾದಲ್ಪಾಂತರತ್ವಾತ್ ಅತ್ರಾಪಿದಶಾಧಿಕಂ ಪೂರಣೀಯಂ। ಸತ್ತತ್ವರತ್ನಮಾಲಾವಚನಂಪ್ರಾರಬ್ಧ ಭೋಗಪರಂ।ಷಾಡ್ಗುಣ್ಯವಚನಂರುದ್ರಪದ ಪ್ರಾಪಕ ವಿಶೇಷೋ ಪಾಸ್ತಿಪರಮಿತಿ । ದಶಕಲ್ಪಂಮೋಕ್ಷ ವಿಶೇಷತಪಃಪರಿಮಿತಿ ಪೃಥಕ್ಸ್ಥಿತಮಿತಿಜನಾರ್ದನೀಯೇ । ಏತದ್ವಚನಾತ್ ದಶಕಲ್ಪಂ ಪೂರಣೀಯಂ। ಏತಾದೃಶಃ ತ್ವಂ—ಪುರುಷೋತ್ತಮನಪರ್ಯಂಕ ಪದವೈದಿದಿ=ಕ್ಷರಾಕ್ಷರ ವಿಲಕ್ಷಣ ಪುರುಷಸ್ಯ ನಾರಾಯಣಸ್ಯ- ಶಯನಪದಮಿತ್ಯನೇನ ಶೇಷಪದಂ ಪ್ರಾಪ್ತವಾನ ಸೀತ್ಯರ್ಥಃ । ಹೇಮಹಾದೇವ ಸದಾಮಂಗಳಂ ದೇಹೀತ್ಯನ್ವಯಃ ॥೧೧॥

## ಕನ್ನಡಾರ್ಥ

ನಿಶ್ಚಿತ ಸ್ವರೂಪವಿಲ್ಲದವನನ್ನು ವಂದಿಸುವದು ಅಯುಕ್ತವಾಗಿರುವದರಿಂದ ಮಹಾರುದ್ರದೇವನ ಗುಣಗಳನ್ನು ಹೇಳುವದರಿಂದ ಅವರ ಸ್ವರೂಪಜ್ಞಾನ ವಾಗುವದರಿಂದ ಮತ್ತೂ ರುದ್ರದೇವರನ್ನು ಸ್ತುತಿಸುತ್ತಾರೆ. ಕೃತ್ತಿವಾಸನೆ != ಹುಲಿದೊಗಲನ್ನು ಉಟ್ಟುಕೊಂಡವನೇ ! "ತರಕ್ಷುವರ ಕೃತ್ತಿಮತ್" ಎಂದು ಶಿವಸ್ತುತಿಯಲ್ಲಿ ಹೇಳಲಾಗಿದೆ. ಹಿಂದೆ=ಶೈವ ಪದವಿಯು ಬರುವ ಮುನ್ನ (ಮುಂಚೆ) ನೀ= ನೀನು, ಲಾತವ್ಯ ರುದ್ರ ಪದವಿಯಲ್ಲಿರುವಾಗ " ಒಂದೂವರೆ ಪರಾರ್ಧ " ಎಂದು ಹೇಳಿದಂತೆ, ಚತುರ್ಮುಖ ಬ್ರಹ್ಮನ ಎಪ್ಪತ್ತೈದು ವರ್ಷ ಗಳಲ್ಲಿ " ಉಗ್ರ ತಪ " ಎಂಬ ಹೆಸರಿನಿಂದ, ಮೇಲೆ ಹೇಳಿದ ೪೦ ವರ್ಷ ಸಮೀರನಲಿ= ವಾಯುದೇವನಲ್ಲಿ, ಶಿಷ್ಯತ್ವ ವಹಿಸಿ= ಶಿಷ್ಯನಾಗಿ, ಅಖಿಲಾಗ ಮಾರ್ಥಗಳೋದಿ=ಅನಂತವಾದ ವೇದ ಹಾಗೂ ವೇದಾರ್ಥವಾದ ಭಗವಂತನ



ಗುಣಗಳನ್ನು ಶ್ರವಣ ಮನನಗಳಿಂದ ವ್ಯಾಸಂಗಮಾಡಿ, ಮೇಲೆ ಹೇಳಿದ ವರ್ಷ ಗಳಲ್ಲಿ ಭಗವಂತನ ಉಪಾಸನವನ್ನು ಮಾಡುತ್ತಾರೆ. "ಶುಶ್ರಾವೋಗ್ರತಪಾ" ಎಂದು ಅನುವ್ಯಾಖ್ಯಾನದ ವಾಕ್ಯವಿರುತ್ತದೆ. ಅಪರೋಕ್ಷಜ್ಞಾನವಾದ ನಂತರ ಲವಣ ಸಮುದ್ರದಲ್ಲಿ ಹತ್ತು ಕಲ್ಪಗಳಲ್ಲಿ ತಪಸ್ಸನ್ನು ಮಾಡಿ, (ಅಂದರೆ– ಶೈವ ಪದದಿಂದ ೪೯ ಕಲ್ಪಗಳಲ್ಲಿ ಸಾಧನವಾದ ನಂತರ ರುದ್ರಪದವಿಯು ಅವರಿಗೆ ದೊರೆಯುವದು ಎಂದು ಭಾವ ) ಅನಂತರ ಇಂದ್ರಾದಿ ದೇವತೆಗಳಲ್ಲಿ ಶ್ರೇಷ್ಠ ನೆನಿಸಿಕೊಂಡು– ಕ್ಷರಾಕ್ಷರ ಪುರುಷ ಶ್ರೇಷ್ಠನಾನ ಹರಿಯ ಪರ್ಯಂಕ (ಹಾಸಿಗೆ) ರೂಪನಾದ ಶೇಷ ಪದವಿಯನ್ನುಹೊಂದುವಿ. ಇಂಥ ಮಹಾದೇವನೇ " ಸದಾ ಸುಮಂಗಳವ ಕರುಣಿಸು " ಎಂದು ಪೂರ್ವ ಪದ್ಯದಿಂದ ಅನ್ವಯವನ್ನು ಪೂರೈಸಬೇಕು.

ಬ್ರಹ್ಮದೇವನ ಒಂದೂವರೆ ಪರಾರ್ಧದ ವರೆಗೆ – ರುದ್ರ ಪದವಿ ಯಲ್ಲಿದ್ದು ನಲ್ವತ್ತು ಬ್ರಹ್ಮಕಲ್ಪವನ್ನು ಆರಂಭಿಸಿ ರುದ್ರದೇವರು ಅಪರೋ ಕ್ಷವನ್ನೂ ಪ್ರಾರಬ್ಧನಾಶವನ್ನೂ ಹೊಂದುವರು. ನಲ್ವತ್ತೊಂದನೆಯ ಕಲ್ಪದಲ್ಲಿ ಶೇಷಪದವಿಯನ್ನು ಹೊಂದುವರು. "ಚತ್ವಾರಿಂಶತ್" ಎಂಬ ಗರುಡ ಪುರಾಣದ ವಚನವು ಈ ವಿಷಯದಲ್ಲಿ ಪ್ರಮಾಣವಾಗಿರುತ್ತದೆ.

ಇನ್ನು "ಪಂಚಾಶೀತಿ ಬ್ರಹ್ಮಕಲ್ಪಂ"ಎಂಬ ವಾಕ್ಯಕ್ಕೂ "ಚತ್ವಾರಿಂಶತ್" "ಬ್ರಹ್ಮಕಲ್ಪಂ" ಎಂಬ ವಾಕ್ಯಕ್ಕೂ ವಿರೋಧ ಬರುವದು"ಎಂದು ಆಕ್ಷೇಪಿಸಿದರೆ ಅದರ ಪರಿಹಾರವನ್ನು ಹೀಗೆ ಮಾಡಬೇಕು. " ಬ್ರಹ್ಮದೇವನಿಂದ ಹೇಳಲ್ಪಟ್ಟ ನಾಲ್ವತ್ತು ಕಲ್ಪಎಂಬುವದಕ್ಕೂ, ನಾನು ಗರುಡನಿಗೆ ಹೇಳಿರುವ (ನಾರಾಯಣ ಹೇಳಿರುವ) "ಪಂಚಾಶೀತಿ" ಎಂಬುವದಕ್ಕೂ ವಿರುದ್ಧವಾದ ಅರ್ಥವಿರುವದಿಲ್ಲ. ಹೇಗಂದರೆ ಪಂಚಾಶೀತಿ ಎಂಬಲ್ಲಿ ೮,೫ ಬರವಣಿಗೆ ಆಗುತ್ತದೆ. ಆದರಲ್ಲಿ ಅಶೀತಿ ಎನ್ನುವದು ಎಂಟನ್ನು ಸೂಚಿಸುವದರಿಂದ ೮,೫ ಗಳ ಗುಣಾಕಾರವು ೪೦ ಆಗು ವವು. ಆದುದರಿಂದ ಎರಡೂ ವಚನಗಳಿಗೆ ಒಂದೇ ಅಭಿಪ್ರಾಯವಾಗುವದರಿಂದ ವಿರೋಧವಿಲ್ಲ. ಇದನ್ನೇ "ಬ್ರಹ್ಮೋಕ್ತಸ್ಯ" ಎಂದು ಮುಂತಾದ ಗಾರುಡ ವಚನಗಳಲ್ಲಿ ಹೇಳಲಾಗಿರುತ್ತದೆ.

ಇನ್ನು "ಶೈವಪದವು ದೊರೆತನಂತರ, ರುದ್ರನಿಗೆ ನಲವತ್ತು ಕಲ್ಪಗಳ ಸಾಧನವನ್ನು ಮಾಡಿದನಂತರ ಶೇಷಪದವಿಯು ಸಿಗುವದು" ಎಂದು ಹೇಳುವ

ದಾದರೆ ಐವತ್ತು (೫೦) ಕಲ್ಪಗಳಿಗೆ ಹತ್ತು ಕಲ್ಪಗಳು ಕಡಮೆಯಾಗುವವು. ಆದುದರಿಂದ ತುಸು ಅಂತರವಾಗುವದು." ಆದುದರಿಂದ ಹತ್ತು ಕಲ್ಪಗಳನ್ನು ಹೆಚ್ಚಿಗೆ ಹಿಡಿಯಬೇಕು. (ಗಣನೆ ಮಾಡಿಕೊಂಡು ೫೦ ಸಂಖ್ಯೆಯನ್ನು ಪೂರೈಸ ಬೇಕು) ಸತ್ತತ್ವದ ವನಚನವು ಪ್ರಾರಬ್ಧ ಭೋಗಪರವಾಗಿರುವದು. ಷಾಡ್ಗುಣ್ಯದ ವಚನವು ರುದ್ರಪದವಿಯನ್ನು ತಂದುಕೊಡುವ ವಿಶೇಷೋಪಾಸನೆಯನ್ನು ಹೇಳು ವದು" ಎಂದು ಹೇಳಬೇಕು. ಇದರಂತೆಯೇ "ಹತ್ತು ಕಲ್ಪಗಳನ್ನು ಮೋಕ್ಷ ಕ್ಕಾಗಿ ವಿಶೇಷ ತಪಸ್ಸೆಂಬ ಸಾಧನ ಮಾಡಲಿಕ್ಕೆ ಪ್ರತ್ಯೇಕವಾಗಿ ಕಳೆಯುವರು ( ಕಳೆಯಬೇಕು. )" ಎಂದು ಜನಾರ್ದನೀಯ ವಾಖ್ಯಾನದಲ್ಲಿ ಹೇಳಿರುತ್ತಾರೆ.

ಇಂಥ ಸಾಧನ ಸಮೃದ್ಧನಾದ ನೀನು ಕ್ಷರಾಕ್ಷರ ಪುರುಷಶ್ರೇಷ್ಠನಾದ ನಾರಾಯಣನ ಹಾಸಿಗೆಯೆನಿಸಿದ ಶೇಷಪದವಿಯನ್ನು ಪಡೆದಿರುವಿ. ಮಹಾ ದೇವನೇ! "ನಮಗೆ ಸದಾಸುಮಂಗಲವ ಕರುಣಿಸು"ಎಂದು ಅನ್ವಯಾರ್ಥವನ್ನು ಪೂರೈಸತಕ್ಕದ್ದು. ॥೧೧॥



**ಪ್ರಮಾಣಗಳ ಸಂಗ್ರಹ**—ಶ್ರೀ ಅಥರಾಪುರ ಪುರುಷೋತ್ತಮಾಚಾರ್ಯರ ತಾರತಮ್ಯ ಗ್ರಂಥದಲ್ಲಿ:

೧ ತಥೈವ ಚತ್ವಾರಿಂಶದ್ಭಿಃ ಪದಂ ಶೈವಂಚ ಜನ್ಮಭಿಃ । ಇತಿ ಚತುರ್ಥ ತಾತ್ಪರ್ಯೇ ಚತುರ್ವಿಂಶಾಧ್ಯಾಯೇ ॥

೨ ತದ್ವೈವ ಚತ್ವಾರಿಂಶದ್ಭಿರಿತ್ಯತ್ರ ದಶಭಿರಿತಿವಿವಕ್ಷಮಾಣಮತ್ರಾಪಿ ಸಂಬಧ್ಯತೇ । ತೇನ ಚತ್ವಾರಿಂಶದ್ಭಿರ್ದಶಭಿಶ್ಚ ಜನ್ಮಭಿಃ ಪಂಚಾಶದ್‌ಬ್ರಹ್ಮಕಲ್ಪೇ ಶ್ತೈವಂ ಪದಂ ಪ್ರಾಪ್ಯತ ಇತ್ಯುಕ್ತಂ ಭವತಿ । ತಥೋಕ್ತಮನು ವ್ಯಾಖ್ಯಾನೇ । ಬ್ರಹ್ಮಣಾಂ ಶತಕಾಲಾತ್ತು ಪೂರ್ವಮಾರಬ್ಧ ಸಂಕ್ಷಯಃ । ಬ್ರಹ್ಮಣಸ್ತ್ವೇವತಾವತ್ಯಂ ಪಂಚಾಶದ್ಬ್ರಹ್ಮಣಸ್ತಥಾ । ರುದ್ರಸ್ಯ ವಿಂಶದೇವಸ್ಯಾಚ್ಛಕ್ರಸ್ಯಾರ್ಕಾದಿಕೇ ದಶೇತಿ ತಾತ್ಪರ್ಯಾದೀಪಿಕಾಯಾಂ ।

೩ ಪಂಚಾಶತಾಂ ಬ್ರಹ್ಮಣಾಂ ಕಾಲಾತ್ಪೂರ್ವಂ ರುದ್ರಸ್ಯಾರಬ್ಧ ಸಂಕ್ಷಯಃ ಇತಿ ಸುಧಾಯಾಂ ॥



೪ ಚತ್ವಾರಿಂಶದ್ಬ್ರಹ್ಮಕಲ್ಪೇಷ್ವಪರೋಕ್ಷಯುತಾಹರೇಃ ತೇಷು ಜಾತಾ ಶೇಷಪದಯೋಗ್ಯಾಃಜೀವಗಣಾಸ್ತಥಾ ॥ ಇತಿ ತತ್ವಸಾರೇ ಅಷ್ಟಮಾಧ್ಯಾಯೇ ॥

೫ ಅಶೀತಿರಷ್ಟಕಃ ಪ್ರೋಕ್ತ ಅಷ್ಟಪಂಚಖಗೇಶ್ವರ। ಚತ್ವಾರಿಂಶದ್ಬ್ರಹ್ಮಕಲ್ಪಮೇವ ಮಾಹ ಚತುರ್ಮುಖಃ ಇತ್ಯಾದಿ ಗರುಡ ಪುರಾಣೇ ॥

೬ ದಶಕಲ್ಪಂ ತಪಶ್ಚೀರ್ಣಂ ರುದ್ರೇಣ ಲವಣಾರ್ಣವೇ । ಇತ್ಯನು ವ್ಯಾಖ್ಯಾನೇ॥

೭ ಕಲ್ಪೋ ಬ್ರಹ್ಮಣೋ ದಿವಸ ಇತಿ ಸುಧಾಯಾಂ ॥

೯ ದ್ವಿಪಂಚಾಶತ್ ಕಲ್ಪಮಿತಾಃ ಶೇಷಾದ್ಯಾಸ್ತು ಸಭಾರ್ಯಕಾಃ। ಇತಿ ಪ್ರಕಾಶ ಸಂಹಿತಾಯಾಂ ॥

೧೦ ರುದ್ರಗರುಡಪದಯೋಗ್ಯಯೋಸ್ತು ಚತ್ವಾರಿಂಶದ್ ಬ್ರಹ್ಮ ಕಲ್ಪೇಷು ಮೋಕ್ಷಪ್ರಯತ್ನಃ ॥ ರುದ್ರಪದಯೋಗ್ಯಸ್ಯ ಸಾರ್ಧ ಪರಾರ್ಧಸ್ಯ ತ್ರಿಭಾಗಕಾಲ ಉಪಾಸನಾಕಾಲಃ ಇತಿ ಪದಾರ್ಥಸಂಗ್ರಹೇ ॥

೧೧ ತಥೈವ ಚತ್ವಾರಿಂಶದ್ಭಿಃ ಪದಂ ಶೈವಂಚ ಜನ್ಮಭಿಃ। ಇತಿಪ್ರಾಗುಕ್ತಮೇವ । ಲಿಂಗಾಲ್ಲಾತವ್ಯತಃ ಪೂರ್ವಮೃಜೋರ್ಬ್ರಹ್ಮತ್ವತಃಶತಾತ್॥ ಶುಶ್ರಾವೋಗ್ರತಪಾನಾಮಯೋಗ್ಯೋ ರುದ್ರಪದಸ್ಯಯಃ।ಸಾರ್ಧಂಪರಾರ್ಧಂ ವಿಷ್ಣೋಸ್ತು ಗುಣಾನ್ ಭಕ್ತ್ಯಾ ಸದೋದ್ಯತಃ ॥ ತತ್ರಿಭಾಗಮುಪಾಸಾಂಚ ಚಕ್ರೇಸಂಭೃತಮಾನಸಃಇತಿ ॥ ಕರ್ಮಕ್ಷಯಪಾದೀಯಾನುವ್ಯಾಖ್ಯಾನ ವಚನಂಚ । ಮಧ್ವಸಿದ್ಧಾಂತಸಾರೇ । ಲಾತವ್ಯ ಇತಿ ಆದಾತವ್ಯ ಇತ್ಯರ್ಥಃ । ಜಾತಾಪರೋಕ್ಷಾಣಾಂ ಶತಸಂಖ್ಯಾಕ ಋಜೂನಾಂ ಮಧ್ಯೇ । ಏಕಸ್ಯ ಚತುರ್ಮುಖಸ್ಯ ಮುಕ್ತತ್ವಾ-ಮೇಕಸ್ಯ ಚಾಪರೋಕ್ಷಜಾನೇ ಜಾತೇ । ತಸ್ಯ।ಶತ ಸಂಖ್ಯಾಪೂರಣಾರ್ಥಮಾದಾತವ್ಯತ್ವಾತ್ । ತದುಕ್ತಂ ಸನ್ಯಾಯರತ್ನಾವಲ್ಯಾಂ । ಲಾತವ್ಯೋನಾಮ ಋಜುರೇಕೋನಶತಬ್ರಹ್ಮಸ್ವತೀತೇಷು ಬ್ರಹ್ಮಾಭವಿಷ್ಯತಿ। ತಸ್ಮಾದುಗ್ರತಪಾನಾಮ ರುದ್ರಪದಯೋಗ್ಯಃ ಏಕೋನಶತಬ್ರಹ್ಮ ಮಹಾ ಕಲ್ಪೇಭ್ಯಃ ಪೂರ್ವಂ ಮಹಾಕಲ್ಪಸ್ಯಾದಿತಃ ಆರಭ್ಯ ಬ್ರಹ್ಮಮಾನಪರಿಗಣಿತಪಂಚಸಪ್ತತಿಸಂವತ್ಸರ ಕಾಲಂ ವಿಷ್ಣುಗುಣಾನ್‌ಶುಶ್ರಾವ ಇತ್ಯಾದಿ॥ ಸುಧಾಯಾಂತು ಲಾತವ್ಯಃ ಶಿಷ್ಯೈರುಪಾಸಿತವ್ಯ ಇತ್ಯುಕ್ತಂ ॥ ತಸ್ಯಾಪ್ಯೇವಮೇವ ತಾತ್ಪರ್ಯಂ ಬೋಧ್ಯಂ ಇತಿ ಚ ಮಧ್ವಸಿದ್ಧಾಂತಸಾರೇ ।

೧೨ ಲಾತವ್ಯ ಆದಾತವ್ಯ ಶಿಷ್ಯೈರುಪಾಸಿತವ್ಯಃ ತಸ್ಮಾತ್ ಬ್ರಹ್ಮತ್ವತಃ ಇತಿ ಷಷ್ಠೀ ಬಹುವಚನಾಂತಾತ್ತಸಿಃ । ಬ್ರಹ್ಮತ್ವಾನಾಂಶತಾತ್ಪೂರ್ವಮಿತಿ ಋಜೋರ್ವಿಶೇಷಣಂ॥ತಸ್ಯೈತಸ್ಮಾದ್ಬ್ರಹ್ಮಕಲ್ಪಾದಾರಭ್ಯಬ್ರಹ್ಮಕಲ್ಪಾನಾಂಶತೇ ಗತೇ। ಬ್ರಹ್ಮತ್ವಂ ಭವಿಷ್ಯತಿ ತಸ್ಮಾದಿತಿಯಾವತ್ ಸಾರ್ಧಂಪರಾರ್ಧಮತ್ಯಂತ ಸಂಯೋಗೇದ್ವಿತೀಯಾ। ತತ್ತ್ರಿಭಾಗಂ ತಸ್ಯಶ್ರವಣ ಕಾಲಸ್ಯ ತೃತೀಯ ಭಾಗಂ ಕಾಲಂ ಉಪಾಸನಾಂ ಮನನನಿದಿಧ್ಯಾಸನರೂಪಾಂ । ಸಂಭೃತಮಾನಸ ಇತಿ ಉಪಾಸಿತವ್ಯ ಏವಾರ್ಥೇ ಧೃತಚಿತ್ತಃ । ದಶ-ಮನ್ವಂತರಾಣಿ ಯಸ್ಮಿನ್‌ಕಾಲೇ ಸತಥೋಕ್ತಃ । ಗರುತ್ಮತಃ ಪದಯೋಗ್ಯಾದಿತಿ ಗರುತ್ಮತೋಯತ್ಪದಂ ತತ್ರ ಯೋಗ್ಯಾದಿತ್ಯರ್ಥಃ । ಸುತೇಜಸಾವೇವ ಸುಪ್ರಜ್ಞಾವೇವ ನತುಮಂದೌ । ಅಶ್ರ್ಪಣ್ವತಾಂ । ಅಶೃಣುತಾಂ । ವ್ಯತ್ಯಯೋ ಬಹುಳಮಿತಿ ॥

**ವಿಶೇಷ ತಾತ್ಪರ್ಯಾರ್ಥಃ**– ಕೃತ್ತಿವಾಸನೆ=ಪುಲಿದೊಗಲನ್ನು ಉಟ್ಟವನೆ, ಹಿಂದೆ "ಸಾಮಜಾಜಿನವಸ ಭೂಷಣ"=ಸಾಮಜ ಗಜಚರ್ಮವೇ ವಸನ ಭೂಷಣವಾಗಿವುಳ್ಳ, ಯಂತಹೇಳಿ ಇಲ್ಲಿ ಕೃತ್ತಿವಾಸ=ವ್ಯಾಘ್ರ ಚರ್ಮವೆಂತ ತಾಮ್ರಪರ್ಣೀ ಆಚಾರ್ಯರು ಟೀಕಾ ಬರೆದುದ್ದು ಹೇಗಂದರೆ–

ಉಟ್ಟದ್ದು ಹುಲಿದೊಗಲು, ಹೊದ್ದದ್ಧು ಕರಿಯತೊಗಲು ಅಂತ ಅನೇಕ ದಾಸರ ವಚನಗಳುಂಟು. ಮೇಲೆ ಕರಿಯ=ಆನೆಯ ತೊಗಲು ಹೊದ್ದುದರಿಂದ ಅದೇ ಮಹಾಭೂಷಣವೆಂದು ಫಲಿತಾಭಿಪ್ರಾಯ. ಶ್ರೀ ಗರುಡ, ಶೇಷ-ಶ್ರೀ ಮಹರುದ್ರಾದಿಗಳಿಗೆ ಹಿಂದಿನ ಎಲ್ಲ ಪ್ರಮಾಣಾನುಸಾರವಾಗಿ ೧೦೦ ಬ್ರಹ್ಮ ಕಲ್ಪಸಾಧನ. ಇದರಲ್ಲಿ ೫೦ ಬ್ರಹ್ಮಕಲ್ಪ ಪ್ರಾರಬ್ಧ ಸಂಕ್ಷಯ ವಿಶೇಷ ಅಪರೋಕ್ಷಜ್ಞಾನವಾಗಿ ರುದ್ರಪದವಿಗೆ ಯೋಗ್ಯರಾಗಿ ಸಾಧನಮಾಡುವ ಕಾಲ. ಹಿಂದೆ ಪ್ರಕಟವಾದ ಹಲವು ವ್ಯಾಖ್ಯಾನಕರ್ತರು ಎಲ್ಲ ಪ್ರಮಾಣಗಳನ್ನು ಅವಲೋಕಿಸದೆ ೪೦ ಕಲ್ಪಸಾಧನವೆಂದು ಬರೆದಿರುವರು. ಇದು ಸಯಲ್ಲ. ಶ್ರೀವಿಜಯದಾಸಾರ್ಯರು ಸಾಧನಕಲ್ಪ ಸುಳಾದಿಯಲ್ಲಿ ರುದ್ರಾದಿಗಳಿಗೆ ೧೦೦ ಕಲ್ಪ ಸಾಧನವೆಂದು ಹೇಳಿದ್ದಾರೆ. ಶ್ರೀ ಜಗನ್ನಾಥದಾಸಾರ್ಯರು ರುದ್ರದೇವರಿಗೆ ಪ್ರಾರಬ್ಧ ಸಂಕ್ಷಯವಾದ ಮೇಲೆ ೫೦ ಕಲ್ಪ (ಐದೆಲೆಗೆ ಐವತ್ತು ಕಲ್ಪ)ವೆಂದು ಪೇಳಿದ್ದಾರೆ. ಪ್ರಕಾಶ ಸಂಹಿತಾದಿ ಪ್ರಮಾಣಗಳನ್ನು ಉದಹರಿಸಿದೆ. ಈ ಸಾಧನ ಕಲ್ಪಗಳಲ್ಲಿ ಶ್ರೀ ಮಹರುದ್ರದೇವರ ಶ್ರವಣ ಮನನ ಧ್ಯಾನ ಉಪಾಸನಾ ಕಾಲವನ್ನು ಬಹು



ಪ್ರಮಾಣಗಳಿಂದಉದಾಹರಿಸಿದ್ದಾರೆ. ಹಿಂದೆ=ರುದ್ರಪದವಿಗೆಬರುವದಕ್ಕಿಂತಲೂ, ಪೂರ್ವದಲ್ಲೇ ಪೂರ್ವದ ೯೮ ನೇ ಬ್ರಹ್ಮಕಲ್ಪದಲ್ಲಿ ಇದೇ ರುದ್ರದೇವರು ಉಗ್ರತಪೋ ಎಂಬ ನಾಮದಿಂದ ಋಜುಗಣಸ್ಥರ ಪಂಕ್ತಿಯಲ್ಲಿ ಸೇರಿದ ೯೮ ನೇ ಕಲ್ಪದ ಲಾತವ್ಯರಲ್ಲಿ ಅನಂತ ವೇದಾರ್ಥಗಳನ್ನು ಓದಿ ಮನನ ಮಾಡಿ ೭೫ (ವರ್ಷ) ಬ್ರಹ್ಮದೇವರ ವರ್ಷ ಶ್ರವಣ ಮನನ ಮಾಡಿದ್ದಾರೆ. ಇದಕ್ಕೆ ಸಾಕಷ್ಟು ಪ್ರಮಾಣ ಹಿಂದೆ ಕೊಟ್ಟಿದೆ. ನಂತರ ೪೦ ಬ್ರಹ್ಮದೇವರ ದಿನಕಲ್ಪದಲ್ಲಿ ವಾಯು ದೇವರಲ್ಲಿ ಶಿಷ್ಯತ್ವವೊಹಿಸಿ ಸಮಸ್ತ ವೇದಾರ್ಥಗಳನ್ನು ನಿಯತ ಗುರುಗಳಾದ ವಾಯು ದೇವರಲ್ಲಿ ಓದಿ ಮನನ ಮಾಡಿ, ನಂತರ ಹತ್ತು ಮನು ಕಲ್ಪಗಳಲ್ಲಿ ಲವಣ ಸಮುದ್ರದಲ್ಲಿ ಮುಳುಗಿ, ಧ್ಯಾನೋಪಾಸನೆ ಮಾಡುತ್ತ ತಪವಗೈದರು. ಸಾಧನಕಾಲದಕಿಂತಲೂ, ಶ್ರವಣ-ಮನನ ಧ್ಯಾನೋಪಾಸನ ಕಾಲವು ಬಹು ಕಡಿಮೆ ಇರುವದು. ಹೇಗಂದರೆ ಶ್ರೀ ವಿಜಯದಾಸರು ಉಪಾಸನಾ ಭಾಗ ಸುಳಾದಿಯಲ್ಲಿ ಮನುಜರಿಗೆ ಮನುಷ್ಯಮಾನದಿಂದ ೪೦೦ ವರ್ಷವೆಂತ ಹೇಳಿದ್ದಾರೆ. ಈ ನ್ಯಾಯದಿಂದ ಮೇಲೆ ವಿವರಿಸಿದ ಪ್ರಮಾಣಾನುಸರಿಸಿ ೧೦ ದಿನ ಕಲ್ಪವೆಂದೇ ತಿಳಿಯಬೇಕು. ಹೀಗೆ ತಪಸ್ಸು ಮಾಡಿ ಆದಿತ್ಯರೊಳಗೆ=ಅವರ ದೇವತೆಗಳೊಳಗೆ ಉತ್ತಮನೆನಿಸಿ, ರುದ್ರ-ಪದವನ್ನು ಹೊಂದಿ, ಪುರುಷೋತ್ತಮನ ಪರಿಯಂಕ=ಶೇಷಪದವನ್ನು ೧೦೦ನೇ ಕಲ್ಪದಲ್ಲಿ ಐದುತ್ತಾರೆಂದು ರುದ್ರದೇವರ ಸಾಧನವಿವರ ತಿಳಿಸಿದ್ದಾರೆ. ಗರುಡ ಪುರಾಣ ಬ್ರಹ್ಮಕಾಂಡ, ಭಾಗವತ ಚತುರ್ಥಸ್ಕಂಧದಲ್ಲಿ ೫೦ ಕಲ್ಪವೆಂತ ಅಪಾರ್ಥ ಮಾಡಬಾರದು. ೫೦ ಕಲ್ಪವೆಂತಲೇ ಪ್ರಮಾಣಾನುಸಾರ ತಿಳಿಯಬೇಕೆಂದು ದಾಸರಾಯರ ಇಂಗಿತ.

(ಗೋ. ಹ.)

**ಅವತರಣಿಕಾ**– ಇಂದ್ರಾದಿದೇವಾನಾಂ ಋಷೀಣಾಂ ಪಿತೃಣಾಂ ಗಂಧರ್ವಕ್ಷಿತಿಪಾನಾಂ ಪದ್ಮನಾಭತೀರ್ಥಾದಿ ಪರಮ ಹಂಸಾನಾಂ ಭಗವದ್ಭಕ್ತಾನಾಂ ' ಮಂಡಲಂ ಚ ಪ್ರಣಮತಿ ಗ್ರಂಥಕಾರಃ ಇತ್ಯಾಹ "ಪಾಕೇತಿ" ॥

ಮೂಲ– **ಪಾಕಶಾಸನ ಮುಖ್ಯ ಸಕಲ ದಿ ।**
**ವೌಕಸರಿಗಭಿನಮಿಪೆ ಋಷಿಗಳಿ ।**
**ಗೇಕ ಚಿತ್ತದಿ ಪಿತೃಗಳಿಗೆ ಗಂಧರ್ವ ಕ್ಷಿತಿಪರಿಗೆ ॥**

**ಆ ಕಮಲನಾಭಾದಿ ಯತಿಗಳ ।**
**ನೀಕಕಾನಮಿಸುವೆನು ಬಿಡದೆ ರ ।**
**ಮಾಕಳತ್ರನ ದಾಸವರ್ಗಕೆ ನಮಿಪೆನನವರತ ॥ ೧೨ ॥**

## ತಾಮ್ರಪರ್ಣೀಯಾ

"ಪಾಕಶಾಸನೇತಿ" ಪಾಕಶಾಸನ ಮುಖ್ಯ ಸಕಲದಿವೌಕಸರಿಗೆ- ಪಾಕೋಸುರಃ, ತಂ ಶಾಸಯತೀತಿ ಪಾಕಶಾಸನಃ ಇಂದ್ರಃ । ಜಯಂತಃ ಪಾಕಶಾಸನಃ ಇತ್ಯಭಿಧಾನಾತ್ ॥ ಸಏವಮುಖ್ಯೋ ಆದಿರ್ಯೆಷಾಂ ತೇ ತಥೋಕ್ತಾಃ । ಸಕಲಾಃ ಸಮಸ್ತಾಶ್ಚ ದಿವ ಏವ ಸ್ವರ್ಗಏವ । ಔಕಃ ನಿಲಯೋ ಏಷಾಂತೇ ತಥೋಕ್ತಾಃ । ಪಾಕಶಾಸನಮುಖ್ಯಾಶ್ಚತೇ ಸಕಲಾಶ್ಚತೇದಿವೌಕಸಶ್ಚತೇಷಾಂ। ಅಭಿನಮಿಪೆ । ಅಭಿತಃ ನಮಸ್ಕರೋಮಿ । ಋಷೀಣಾಂ ಏಕ ಚಿತ್ತೇನ ಗಂಧರ್ವಾಣಾಂ, ಪಿತೃಣಾಂ। ಕ್ಷಿತಿಂ ಭೂಮಿಂ ಪಾಂತಿರಕ್ಷಂತಿ। ತೇಷಾಂ। ಆ ಕಮಲನಾಭಾದಿ= ಪದ್ಮನಾಭ ತೀರ್ಥಾನಾರಭ್ಯ । ರಾಘವೇಂದ್ರ ತೀರ್ಥಪರ್ಯಂತಮನೇಕಯತೀನಾಂ ಸಮೂಹಂ । ಬಿಡದೆ=ಅವಿಹಾಯೈವ, ರಮಾಕಳತ್ರನ= ರಮೈವ ಕಳತ್ರಂಭಾರ್ಯಾಯಸ್ಯಸಃ ತಥೋಕ್ತಃ ತಸ್ಯ ಭಗವತಃ ದಾಸವರ್ಗಂ ದಾಸಜನಸಮೂಹಂ । ಅನವರತ । ನಿರಂತರಂ = ನಮಿಪೆ । ನಮಸ್ಕರೋಮಿ ತ್ಯೈಕಾನ್ವಯಃ ॥ ೧೨ ॥

## ಕನ್ನಡಾರ್ಥ

ಇಂದ್ರಮುಂತಾದ ದೇವತೆಗಳು ಋಷಿಗಳು ಪಿತೃಗಳು, ಗಂಧರ್ವರು-ಕ್ಷಿತಿಪರು, ಪದ್ಮನಾಭತೀರ್ಥ ಮುಂತಾದ ಪರಮಹಂಸರು, ಭಗದ್ಭಕ್ತರು, ಇವರೆಲ್ಲರಿಗೂ ಪ್ರಣಾಮಗಳನ್ನು ಮಾಡುವುದಾಗಿ ಗ್ರಂಥಕಾರರು ಹೇಳುತ್ತಾರೆ.

ಪಾಕಶಾಸನ— "ಜಯಂತಃಪಾಕಶಾಸನಃ" ಎಂಬ ಅಮರಕೋಶದಂತೆ ಪಾಕಾಸುರನನ್ನು ಶಾಸನಮಾಡುವವನು ದೇವೇಂದ್ರನು. ಇವನೇ ಮುಖ್ಯವಾಗಿವುಳ್ಳ ಸಕಲದೇವತೆಗಳಿಗೆ ಸಮೀಚೀನವಾಗಿ ವಂದನೆಗೈಯ್ಯುವೆ. ಒಳ್ಳೇ ಏಕಾಗ್ರಮನಸ್ಸಿನಿಂದ ಋಷಿಗಳಿಗೆ ಪಿತೃಗಳಿಗೆ ಹಾಗೂ ಗಂಧರ್ವರಿಗೆ ಕ್ಷಿತಿಪರಿಗೆ ಮನುಷ್ಯೋತ್ತಮರಿಗೆ ನಮಸ್ಕರಿಸುವೆ. ಹಾಗೂ ಶ್ರೀ ಪದ್ಮನಾಭತೀರ್ಥರನ್ನು ಆರಂಭಿಸಿ, ಶ್ರೀರಾಘವೇಂದ್ರತೀರ್ಥಪರ್ಯಂತಪಾದಯತಿಸಮೂಹವನ್ನುಹಾಗೂ



ರಮಾಪತಿಯ ದಾಸಜನರ ಗುಂಪಿಗೂ ನಮಸ್ಕರಿಸುವೆ. (ಯಾವಾಗಲೂ) ಎಂದು ಅನ್ವಯಾರ್ಥ.

**ಅವತರಣಿಕಾ**— ಇದಾನೀಂ ಶ್ರೀಮನ್ನಾರಾಯಣಸ್ಯ ಬ್ರಹ್ಮಾದಿ ಸಕಲ ಜೀವಾನಾಮಂತರ್ವ್ಯಾಪ್ತಿರ್ವ್ಯಕ್ತ್ಯಾವ್ಯಕ್ತತಯಾ ಅಸ್ತೀತಿ ನಿರೂಪಯಿತುಂ ಪುಷ್ಪಸ್ಥಿತ ಪರಿಮಳಾರಣಿ – ಸ್ಥಿತಾಗ್ನಿ ದೃಷ್ಟಾಂತೇನೋಪಪಾದಯತೀತ್ಯಾಹ ಪರಿಮಳವಿತಿ ।

**ಮೂಲ**— **ಪರಿಮಳವು ಸುಮನದೊಳಗನಳನು**
**ಅರಣಿಯೊಳಗಿಪ್ಪಂತೆ ದಾನೋ ।**
**ದರನು ಬ್ರಹ್ಮಾದಿಗಳ ಮನದಲಿ ತೋರಿ ತೋರದಲೆ ॥**
**ಇರುತಿಹ ಜಗನ್ನಾಥ ವಿಠಲನ ।**
**ಕರುಣ ಪಡೆವ ಮುಮುಕ್ಷುಜೀವರು ।**
**ಪರಮ ಭಾಗವತರನು (ನ) ಕೊಂಡಾಡುವದು ಪ್ರತಿದಿನವು ॥ ೧೩ ॥**

ಇಂತು ಶ್ರೀ ಮಜ್ಜಗನ್ನಾಥದಾಸರಾಜ ವಿರಚಿತ
ಶ್ರೀಹರಿಕಥಾಮೃತಸಾರಮಂಗಳಾಚರಣಸಂಧಿ (೧)
ಸಮಾಪ್ತಂ ಮಂಗಳಂ
॥ ಶ್ರೀಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

**ತಾಮ್ರಪರ್ಣೀವ್ಯಾಖ್ಯಾನ**— ಪರಿಮಳಃ ಆಮೋದಃ ಯಥಾ ಪುಷ್ಪೇಷು ನೈಜತಯಾ ವರ್ತತೇ ॥ ತಥಾ ಬ್ರಹ್ಮಣಿ ಚತುರ್ಮುಖೇ ನಿಜ ವಿಭೂತಿವಿಶೇಷೇಣ ವ್ಯಕ್ತತಯಾ ವರ್ತತೆ ಇತ್ಯರ್ಥಃ । ತದುಕ್ತಂ ॥ ಚತುರ್ಮುಖಸ್ಥಿತೋ ವಿಷ್ಣುಃ ಸ್ವಯಮೇವ ಪ್ರಕಾಶತೇ । ಯಥಾಪುಷ್ಪಸ್ಥಿತಾ ಮೋದಃ ಸ್ವಭಾವತ । ಇತಿ ತತ್ವ ನಿರ್ಣಯೇ ಅಂತರ್ಯಾಮಿ ಪ್ರಕರಣೇ । ಆದಿ ಪದೇನ ಸಕಲ ಜೀವಸ್ಥೋ ಭಗವಾನ್ । ಯಥಾ ಅರಣಿಪಾತ್ರಸ್ಥಿತಾಗ್ನಿರ್ಮಥನಾದಿನಾ ವ್ಯಕ್ತೋಭವತಿ ತಥಾಜೀವಕೃತಾಂತರುಪಾಸನಾದಿನಾವ್ಯಕ್ತೋಭವ ತೀತ್ಯನೇನ ಸರ್ವೈರ್ಭಗವದುಪಾಸನಮವಶ್ಯಂ ಕಾರ್ಯಮಿತ್ಯಭಿಪ್ರಾಯೇಣಾ

ರಣಿಸ್ಥಿತಾಗ್ನಿದೃಷ್ಟಾಂತೇನೋಪಪಾದಿತಂ ॥ ತದುಕ್ತಂ ॥ ‡ ದಧಿಸ್ಥಘೃತವತ್ ಕಾಷ್ಠೇ ವಹ್ನಿವಚ್ಚ ಜನಾರ್ದನಃ । ದೇಹೇಂದ್ರಿಯಾಸುಜೀವೇಭ್ಯೋ ವಿವಿಚ್ಯ ಜ್ಞಾಯತೇನತ್ವಿತಿ ಸಪ್ತಮತಾತ್ಪರ್ಯೇ। ಅನೇನ ಅಸ್ಮದಾದಿ ಸರ್ವಚೇತನೇಷು ಭಗವಾನವ್ಯಕ್ತತಯಾಸ್ತೀತ್ಯರ್ಥಃ।ಜಗನ್ನಾಥ=ಜಗತಾಂನಾಥಃಸ್ವಾಮೀಸಚಾಸೌ ವಿ=ವಿಶೇಷೇಣ, ಠಾನ್=ಮೂರ್ಖಾನ್ ಪ್ರತಿ, ಜ್ಞಾನಾದಿಕಂ ಲಾತಿ=ದದಾತೀತಿ ವಿಠ್ಠಲಶ್ಚ ತಥೋಕ್ತಃ। ತಸ್ಯ ಕೃಪಾ ಸಂಪಾದಕೋ ಯಃ ಸಏವ ಮುಮುಕ್ಷುಃ ಮೋಕ್ಷೇಚ್ಛುಃ। ಏತಾದೃಶಾಃಯೇ ಭಗವದ್ಭಕ್ತಾಃ ತಾನ್ ಪ್ರತಿದಿನಂ ಸ್ತವೀತು ಇತ್ಯನ್ವಯಃ ॥ ೧೩ ॥

ಇತಿ ಶ್ರೀಮದ್ಧರಿಕಥಾಮೃತಸಾರವ್ಯಾಖ್ಯಾನೇ ಪದಪ್ರಕಾಶಕೇನಾಂದೀ ಪದ್ಯ ಮಂಗಲಾಚರಣ ಸಂಧಿಃ ಸಮಾಪ್ತಮಗಮತ್ । ಶ್ರೀಮದ್ರಾಘವೇಂದ್ರ ಗುರುವರಕೃಪಾಬಲೇನ।ಶ್ರೀಗುರುಮಧ್ವೇಶಾರ್ಪಣಮಸ್ತು॥ ಶ್ರೀಗುರುರಾಜಾಯ ಮಂಗಳಂ ॥

## ಕನ್ನಡ ಅನುವಾದ

ಶ್ರೀಮನ್ನಾರಾಯಣನು "ಬ್ರಹ್ಮಾದಿ ಸಕಲ ಜೀವರಲ್ಲಿ ವ್ಯಕ್ತಾವ್ಯಕ್ತವಾಗಿ ವ್ಯಾಪಿಸಿರುವನು." ಎಂಬುದನ್ನು ಹೂವಿನೊಳಗಿರುವ ಪರಿಮಳ, ಅರಣಿ (ಕಟ್ಟಿಗೆ) ಯೊಳಗಿರುವ ಅಗ್ನಿ (ಬೆಂಕಿ)ಗಳ ದೃಷ್ಟಾಂತದಿಂದ ತಿಳಿಸಿ ಹೇಳುತ್ತಾರೆ.

ಪರಿಮಳ= ಆಮೋದ, ಸುಗಂಧವು ಪುಷ್ಪಗಳಲ್ಲಿ ಸ್ವಾಭಾವಿಕವಾಗಿ ಹೇಗೆ ಇರುತ್ತದೆಯೋ ( ಹಾಗೆ ) ಅದರಂತೆ ಚತುರ್ಮುಖನಲ್ಲಿ ನಿಜವಿಭೂತಿ ಯಿಂದ ವ್ಯಕ್ತವಾಗಿಯೇ ಇರುತ್ತಾನೆ. "ಚತುರ್ಮುಖ" ಎಂಬ ತತ್ವನಿರ್ಣಯ ದಲ್ಲಿ ಅಂತರ್ಯಾಮಿ ಪ್ರಕರಣದಲ್ಲಿ ಇದನ್ನೇ ಹೇಳಿರುತ್ತಾರೆ. ಬ್ರಹ್ಮಾದಿ ಎಂಬಲ್ಲಿ ಆದಿ ಶಬ್ದದಿಂದ ಸರ್ವರನ್ನೂ ತೆಗೆದುಕೊಳ್ಳಬೇಕು. ಅರಣಿ ಎಂಬ (ಯಜ್ಞಾಗ್ನಿ ಯನ್ನು ಕಡೆದು ತಗೆಯುವ) ಪಾತ್ರದಲ್ಲಿ ಇರುವ ಅಗ್ನಿಯು ಮಂಥನ ಮುಂತಾ ದವುಗಳಿಂದ ಹೇಗೆ ವ್ಯಕ್ತನಾಗುತ್ತಾನೋ ಹಾಗೆ ಜೀವರು ಮಾಡುವ ಉಪಾಸನೆ ಮುಂತಾದವುಗಳಿಂದ ವ್ಯಕ್ತನಾಗಿ ಕಾಣಿಸಿಕೊಳ್ಳುವದರಿಂದ ಎಲ್ಲರೂ ಉಪಾ

‡ ಮೊಸರಿನಲ್ಲಿ ಅಡಗಿರುವ ತುಪ್ಪ, ಕಟ್ಟಿಗೆಯಲ್ಲಿ ಅಡಗಿರುವ ಅಗ್ನಿ, ಇವುಗಳಂತೆ ದೇಹ–ಇಂದ್ರಿಯ-ಪ್ರಾಣ–ಜೀವರಲ್ಲಿ ಇದ್ದರೂ ಪರಮಾತ್ಮನು ಅವುಗಳಿಂದ ಬೇರೆಬೇರೆ ಯಾಗಿ ಇರುವದು ತಿಳಿಯುವದಿಲ್ಲ" ಎಂದು ತಾತ್ಪರ್ಯ ಶ್ಲೋಕದ ಭಾವ.



ಸನೆಯನ್ನು ಅವಶ್ಯವಾಗಿ ಮಾಡಬೇಕು. ಇದನ್ನು ತಿಳಿಪಡಿಸಲು "ಅನಲನು ಅರಣಿಯೊಳಗಿಪ್ಪಂತೆ" ಎಂಬ ದೃಷಾಂತವನ್ನು ತೋರಿಸಿದ್ದಾರೆ. "ದಧಿಸ್ಥಘೃತವಚ್ಚೈವ" ಎಂದು ಆಚಾರ್ಯರು ಸಪ್ತಮ ತಾತ್ಪರ್ಯದಲ್ಲಿ ಹೇಳಿರುವದೂ ಇದಕ್ಕೆ ಸಾಧಕವಾಗಿರುತ್ತದೆ. ಇದರಿಂದ- "ನಮ್ಮಂಥ ಅಲ್ಪ ಚೇತನಗಳಲ್ಲಿ ಪರಮಾತ್ಮನು ಅವ್ಯಕ್ತನಾಗಿರುತ್ತಾನೆ" ಎಂಬ ಅಭಿಪ್ರಾಯವು ವ್ಯಕ್ತವಾಗುತ್ತದೆ. "ಜಗನ್ನಾಥವಿಠ್ಠಲನ" ವಿಶೇಷವಾಗಿ ಮಂದರಿಗೆ ಜ್ಞಾನವನ್ನುಕೊಡುವ, ಜಗತ್ತಿನ ಸ್ವಾಮಿಯಾದ ಪರಮಾತ್ಮನ ಕೃಪೆಯನ್ನು ಪಡೆಯುವ, ಮುಮುಕ್ಷು=ಮೋಕ್ಷ ವನ್ನು ಪಡೆಯಬಯಸುವವರು ಭಗವದ್ಭಕ್ತರನ್ನು ಪ್ರತಿದಿವಸದಲ್ಲಿ ಸ್ತೋತ್ರ ಮಾಡಬೇಕು ಎಂದು ಅನ್ವಯಾರ್ಥ.

ಶ್ರೀ ಹರಿಕಥಾಮೃತಸಾರ ತಾಮ್ರಪರ್ಣೀಯ ಟೀಕಾ ಕರ್ಣಾಟಕ ಭಾಷಾನುವಾದೇ ಪ್ರಥಮಸಂಧಿಃ ಸಮಾಪ್ತಃ ಶ್ರೀ ಕೃಷ್ಣಾರ್ಪಣಮಸ್ತು.



## ಅಪರೋಕ್ಷ ಜ್ಞಾನಿಗಳಾದ

# ಶ್ರೀ ಗುರು ವಿಜಯವಿಠಲರ ಟೀಕಾ

(ಮೊದಲಕಲ್ ಶೇಷದಾಸ ವಿರಚಿತ)

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತುಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವದು ॥ ಪಲ್ಲ ॥

ಟೀಕಾ॥ ಈ ಪ್ರಕಾರ ಶ್ರೀಜಗನ್ನಾಥರಾಯರು ಲೋಕಾನುಗ್ರಹ ನಿಮಿತ್ಯವಾಗಿ ಹರಿಕಥಾಮೃತಸಾರವೆಂಬುವಂಥ ಗ್ರಂಥವನ್ನು ಮಾಡುವದಾಗಿ' ಹೇ ಭಗವದ್ಭಕ್ತರುಗಳಿರ್ಯಾ ! ಪರಮ ಆದರದಿಂದ ಕೇಳಿರೆಂತ ಹೇಳುತ್ತಾರೆ. ಅದು ದಾವುದು? ಎಂದರೆ 'ಹರಿಕಥಾಮೃತ' ಎಂತ ಅಂದರು. ಶ್ರೀ ಜಗನ್ನಾಥರಾಯರು ಪರಮಾತ್ಮನ ನಾಮುಗಳು ಅನಂತಾನಂತ ಇರಲಿಕ್ಕೆ ಹರಿಕಥಾಮೃತಸಾರವೆಂತ ಯಾಕೆ ಎಂದರು? ಎಂದರೆ, ಅದಕ್ಕೆ ಕೃತ್ಯ ಉಂಟೆಂದು ಹೇಳುತ್ತಾರೆ· ಹರಿ ಶಬ್ದಕ್ಕೆ ಏನುಅರ್ಥವೆಂದರೆ- ಪಾಪಪರಿಹಾರಕತ್ವ. ಈಧರ್ಮ ಪರಮಾತ್ಮಗೆ ಲಕ್ಷಣವಾದ ಪ್ರಯುಕ್ತ ಈ ಅರ್ಥದಿಂದ ಹರಿಕಥಾಮೃತವೆಂತ ಅಂದರು· ಅಥವಾ ಹರಿನಾಮಕನೇ ಸಮಸ್ತರ ಬಿಂಬನಾದ ಕಾರಣ ಬಿಂಬೋಪಾಸನೆಯು ಮುಖ್ಯವಾದದ್ದು. ಬಿಂಬೋಪಾಸನೆಯಿಂದ ಅಪರೋಕ್ಷ ಜ್ಞಾನ-ಮೋಕ್ಷ. ಕಾರಣ ಹರಿಕಥಾಮೃತಸಾರವೆಂತ ಅಂದರು. ಪಾಪಪರಿಹಾರ ಅಂತಾಹೇಳಿದರು· ಹಾಗಾದರೆ ಜೀವ- ಚಿದಾನಂದಾತ್ಮಕನಾದವಗೆ ಪಾಪ ಎಲ್ಲಿಂದ ಬಂತು? ಎಂತ ಶಂಕಾ ಬಂದರೆ ಜೀವನಿಗೆ ದೋಷ ಹೇಗೆ ಎಲ್ಲಿಂದ ಬಂತು ಎಂದರೆ ಹೇಳುತ್ತಾರೆ ಚಿದಾನಂದಾತ್ಮಕನಾದ ಕಾಲಕ್ಕೂ ಅನಾದಿಕರ್ಮ ರೂಪವಾದ ತ್ರಿಗುಣಾತ್ಮಕ ಲಿಂಗದೇಹದ ದೆಶೆಯಿಂದ ಬದ್ಧನಾದಂಥವನಾಗಿ, ಪ್ರಕರ್ಷೇಣ ಆರಬ್ಧಕರ್ಮ ಸೃಷ್ಟ್ಯನಂತರದಲ್ಲಿ ಸಂಚಿತಾಗಾಮಿಗಳೆಂಬೋ ಶಾಖೋಪಶಾಖೆಗಳಿಂದ, ವೃಕ್ಷ ಹ್ಯಾಗೆ ಅಭಿವೃದ್ಧಿಯಾಗುತದೋ ಹಾಗೆ, ಪ್ರಾರಬ್ಧ ಸಂಚಿತಾಗಾಮಿಗಳಿಂದ ಅಭಿವೃದ್ಧಿಯಾಗಿ, "ಪ್ರಾರಬ್ಧ ಮೊದಲು ಕರ್ಮ ಇದರಿಂದ ಹುಟ್ಟಿದಂಥಾ ಸಂಚಿತ ಎಂದರೆ ॥ ಪ್ರಮಾಣ ॥ ಮುನಿಸ್ತು ಕರ್ಮಶೀಲೋಪಿ ಕುರ್ವನ್ನೇವದಿನೇದಿನೇ । ದಶಾವರಾಣಾಂ ದೇಹಾನಾಂ ಕಾರಣಾನಿಕರೋತ್ಯಯಂ॥ ಎಂಬೋ ಪ್ರಮಾಣ



ದಂತೆ ಮುನಿ ಮನನ ಶೀಲನಾಗಿ ಮೌನವಾಗಿ ಸುಕರ್ಮಶೀಲನಾದ ಅಧಿಕಾರಿಯಾದ ಕಾಲಕ್ಕೂ, ನಿಮಿಷ ಮಾತ್ರದಲ್ಲಿ ಹತ್ತು ನೀಚ ಯೋನಿಗಳು ಯೈದುವಂಥಾ ಪಾಪ ಸಂಪಾದನ ಹರಿ ಇಚ್ಛಾದಿಂದ ಮಾಡುತ್ತಾನೆ. ಇದು ಈ ಜನ್ಮಕ್ಕೆ ಹಿಂದಿನ ಜನುಮದ್ದು ಸಂಚಿತಾಯೆಂತ ಕರಿಸಿಕೊಳ್ಳುತ್ತದೆ. ಈ ಜನ್ಮದಿಂದ ಮುಂದಿನ ಹತ್ತು ಜನ್ಮಗಳು ಅನುಭವ ಮಾಡುವಂಥ ಕರ್ಮ ಆಗಾಮಿಯೆಂತ ಕರೆಸಿಕೊಳ್ಳುತ್ತದೆ. ಇಂತಹ" ಸಂಚಿತಾಗಾಮಿಗಳಿಂದ ಪ್ರವಾಹರೂಪತಃ ಜನ್ಮಗಳುಳ್ಳವನಾಗಿ, ಸಂಸಾರಚಕ್ರದಲ್ಲಿ ಬಿದ್ದು, ಪ್ರಾಂತಗಾಣದೇ ದುಃಖಬಡುವಂಥವನಾಗುತ್ತಾನೆ. ಇದೇವೇ ಪಾಪರೂಪವಾದಂಥಾದ್ದು.

ಇದು ಪರಿಹಾರವಾಗದಲೇ ಜೀವನು ಸ್ವರೂಪಾಭಿವ್ಯಕ್ತಿ ಎಂದಿಗೂ ಐದದವನಾದ ಪ್ರಯುಕ್ತ, ಇಂಥ ಪಾಪರೂಪವಾದ ತ್ರಿಗುಣಾತ್ಮಕ ಲಿಂಗದೇಹ ಪರಿಹಾರ ಮಾಡೋದಕ್ಕೆ ಪರಮಾತ್ಮನ ಹೊರ್ತಾಗಿ ಇನ್ನೊಬ್ಬರುಸಮರ್ಥರಲ್ಲ. ಆದ ಪ್ರಯುಕ್ತ, ಇಂಥ ಕಥಾಮೃತಸಾರವನ್ನು ಅಧಿಕಾರಿಗಳಿಗೋಸ್ಕರ ಹೇಳುತ್ತೀವೆಂತ ಸೂಚನೆ ಮಾಡೊ ನಿಮಿತ್ಯ " ಹರಿಕಥಾಮೃತಸಾರ " ಯೆಂತ ಅಂದರು.

ಇಂಥ ಪಾಪ ಪರಿಹಾರಕನಾದಂಥ ಪರಮಾತ್ಮನ ಕಥಾಲಕ್ಷಣ ಅಮೃತ ಸಾರವನ್ನು ನಾವು ಹೇಳುತ್ತೇವೆ. ಅದು ಎಂಥದುಯೆಂದರೆ, ಪ್ರತ್ಯಕ್ಷ ಅಮೃತಕ್ಕೆ ಸಾರಭೂತವಾದಂಥಾದ್ದು. ಅಮೃತಕ್ಕೆ ಸಾರ ಹೇಗೆ ಎಂದರೆ, ಅಮೃತ ಧರ್ಮ ಎಂಥದು ಎಂದರೆ ಪ್ರಕೃತಿ ( ಪ್ರಾಕೃತ ) ಸಂಬಂಧವಾದಂಥ ಸುಖಪ್ರದಾನ, ಎರಡನೇದು ಮೃತಿರಾಹಿತ್ಯವನ್ನು ಕೊಡುವಂಥಾದ್ದು. ಆದ ಪ್ರಯುಕ್ತ ದೇವತಿಗಳಿಗೆ ಅನ್ನವೆಂತ ಕರಿಸಿಕೊಳ್ಳತದೆ. ಈ ಧರ್ಮ ಉಳ್ಳಂಥಾದ್ದು, ಇದಕ್ಕೆ ಸಾರಭೂತವಾದಂಥಾದ್ದು ಹರಿಕಥಾಮೃತ. ಅದು ಹೇಗಂದರೆ ಹರಿಕಥಾಮೃತ ಪಾನ ಮಾಡುವಂಥ ಪರಮ ಭಗವದ್ಭಕ್ತರಿಗೆ ಏನು ಫಲವಾಗುತ್ತದೆ? ಎಂದರೆ– ಅಬಾಧಿತವಾದ ಸ್ವರೂಪ ಸುಖ ಉಣಿಸುತಾ ಅಮೃತತ್ವವನ್ನು, ನಿತ್ಯತ್ವೇನ ತಂದುಕೊಡುತದೆ; ಆದರೆ ಬಾಧಾ ದಾವುದು? ಎಂದರೆ– ಸ್ವರೂಪ ಆಚ್ಛಾದನ ಮಾಡಿದಂಥ ತ್ರಿಗುಣಾತ್ಮಕವಾದ ಲಿಂಗದೇಹವೇ ಬಾಧಾ ಎಂತ ಕರಿಸಿಕೊಳತದೆ. ಇಂಥ ಬಾಧಾರಹಿತವಾದ ಸ್ವಸ್ವರೂಪಾನಂದಾವಿರ್ಭಾವವನ್ನು ಐದಿಸುತದೆ. ತನ್ನಿಮಿತ್ಯವಾಗಿ ಪ್ರತ್ಯಕ್ಷ ಅಮೃತಕ್ಕೆ ಸಾರ

ಭೂತವಾದಂಥಾದ್ದು ಯೆಂತ ಕರಿಸಿಗೊಳತದೆ. ತನ್ನಿಮಿತ್ತ ಅಮೃತಸಾರ ಯೆಂತ ನಡಿದರು.

## ಇನ್ನು ಅರ್ಥಾಂತರವನ್ನು ಹೇಳುತ್ತಾರೆ

ಅದು ದಾವುದು ಎಂದರೆ, ಪರಮಾತ್ಮನ ಕಥಾಲಕ್ಷಣರೂಪವಾದ ಶಾಸ್ತ್ರಗಳು ಬಹಳವಾಗಿವೆ. ಆವುಗಳ ಮಧ್ಯದಲ್ಲಿ ನಾವು ಹೇಳುವಂಥ ಗ್ರಂಥವದಲ್ಲ ! ಇದು ಸಾರಭೂತವಾದಂಥಾದ್ದು. ಸಾರಭೂತವಾದುದಲ್ಲ ಯೆಂತ ಶಂಕಾಬಂದರೆ, ಇದು ಅನುಮಾನವಲ್ಲವೆಂತ ಹೇಳುತ್ತಾರೆ. ಅದು ಹೇಗಂದರೆ– ಶ್ರುತಿ ಸ್ಮೃತಿಗಳ ಮೀರಿ ಪರಮಾತ್ಮನನ್ನು ತಿಳಿಯುವಂಥ ಹೆಚ್ಚಿನ ಜ್ಞಾನ ಸಾಕ್ಷಾದ್ರಮಾದೇವಿಗೆ ಹೊರ್ತಾಗಿ— ಬ್ರಹ್ಮಾದಿಗಳು ಶ್ರುತಿ ಸ್ಮೃತಿಗಳಲ್ಲಿ ಉಕ್ತವಾದಂಥ ಅರ್ಥದಿಂದೇ ಪರಮಾತ್ಮನನ್ನ ತಿಳಿಯುತ್ತಾರೆ; ಹೊರ್ತು ಇವು ಮೀರಿ ತಿಳಿಯೋ ಶಕ್ತಿ ಬ್ರಹ್ಮಾದಿಗಳಿಗೆ ಕೂಡೋದಿಲ್ಲವೆಂತ ಹೇಳೋಣದರಿಂದ ಶ್ರೀ ಜಗನ್ನಾಥರಾಯರು ಮಾಡಿದಂಥ ಗ್ರಂಥದಿಂದ ಶ್ರುತಿ ಸ್ಮೃತಿಗಳಿಗೆ ಅವಮಾನ ಹೇಗೆ ಕೂಡೀತು. ಶ್ರುತಿ ಸ್ಮೃತಿಗಳಲ್ಲಿ ಇದ್ದಂಥಾ ಅರ್ಥಗಳನನುಸರಿಸಿ, ಅದರಲ್ಲಿ ವ್ಯವಧಾನ ಅವ್ಯವಧಾನದಿಂದ ಪರಮಾತ್ಮನ ಸಂಪಾದನ ಮಾಡುವಂಥ ವಾಕ್ಯಗಳು ಅವೆ. ಅವು ದಾವವು ಎಂದರೆ, ಕರ್ಮಣಾ ಜ್ಞಾನ ಮಾತನೋತಿ, ಜ್ಞಾನೇನ ಅಮೃತೀಭವತಿ" ಹೀಗೆ ಶ್ರುತಿ ಹೇಳುತ್ತದೆ. ಪರಮಾತ್ಮನ ಸಂಪಾದನ ಮಾಡಬೇಕಾದ ಅಧಿಕಾರೀ ಪ್ರಥಮದಲ್ಲಿ ವೇದೋಕ್ತವಾದ ಕರ್ಮಮಾಡಬೇಕು ಕರ್ಮ ಎಂಥಾದ್ದು ಎಂದರೆ, ಶ್ರುತಿ ಸ್ಮೃತಿಗಳಲ್ಲಿ ಪರಮಾತ್ಮನ ಸರ್ವೋತ್ತಮತ್ವಕ್ಕೆ ಬಾಧಾ ರೂಪವಾದ ಬ್ರಹ್ಮ ಸರ್ವೋತ್ತಮ, ರುದ್ರ ಸರ್ವೋತ್ತಮ ಇಂದ್ರ, ಸರ್ವೋತ್ತಮ, ಗಣೇಶ ಸರ್ವೋತ್ತಮ, ಇತ್ಯಾದಿ ವಾಕ್ಯಗಳಿವೆ. ಈ ವಾಕ್ಯಗಳಷ್ಟೂ ಸರ್ವ ಶಬ್ದವಾಚ್ಯನಾದ ಪರಮಾತ್ಮನ್ನೇ ಹೊರ್ತು ಈ ಪ್ರತ್ಯಕ್ಷಸಿದ್ಧರಾದ ಅನಿತ್ಯ ದೇಹವುಳ್ಳ ಅಸ್ವತಂತ್ರರಾದ ಬ್ರಹ್ಮಾದಿಗಳನ್ನು ಮುಖ್ಯತಯಾ ಸರ್ವೋತ್ತಮನೆಂದು ನಿತ್ಯವಾದ ಶ್ರುತಿಗಳು ಹ್ಯಾಕೆ ಪ್ರತಿಪಾದನ ಮಾಡ್ಯಾವು? ಎಂದು ಆಗಮದಿಂದ ಅನುಮಾನದಿಂದ ತಿಳಿದು, ನಾರಾಯಣನೇ ಸರ್ವೋತ್ತಮಯಂತ ಸ್ಥಾಪನಪೂರ್ವಕವಾದ ನಾನಾವಿಧ ಕರ್ಮಗಳನ್ನು ಮನಸ್ಸಿನಿಂದ ಶ್ರುತಿ ಸ್ಮೃತಿಪೂರ್ವಕ ಸಹಸ್ರ ಜನ್ಮಗಳಲ್ಲಿ ಮಾಡಿದ ತರುವಾಯ, ಈ ಪುಣ್ಯದಿಂದ ತದರ್ಥ



ಗಳು ಅನುಮಾನದಿಂದ ಹತ್ತು ಜನ್ಮಗಳು ಪರಮಾತ್ಮನನ್ನ ತಿಳಿದು ಜ್ಞಾನ ಸಂಪಾದಿಸಬೇಕು. ಹೀಗೆ ಸಹಸ್ರದಾ ಹತ್ತು ಜನ್ಮಗಳು ಅತೀತವಾಗತಿರಲಿಕ್ಕೆ ಈಕಾಲ ಸಾಧನ ಪುಣ್ಯದಿಂದ ಅನುಮಾನದಿಂದ ತಿಳಿಯುವಂಥ ಪರಮಾತ್ಮನಲ್ಲಿ ಭಕ್ತಿಕ್ರಮದಿಂದ ಅತಿಶಯವಾಗಿ ಮೂರು ಜನ್ಮ ಪೂರ್ವೋಕ್ತವಾದ ಸಕಲ ಸಾಧನ ಪುಣ್ಯಪ್ರಭಾವದಿಂದ, ಪರಮಾತ್ಮನನ್ನು ತಮ್ಮ ಹೃದಯದಲ್ಲಿ ಅವರವರ ಸ್ವಯೋಗ್ಯತಾನುಸರಿಸಿ ಪ್ರತ್ಯಕ್ಷ ನೋಡುವಂಥಾ ಯೋಗ್ಯತೆ ಪ್ರಾಪ್ತವಾಗುತ್ತದೆ.

ಆದ ಪ್ರಯುಕ್ತ ಶ್ರುತಿ ಸ್ಮೃತಿ ವಾಕ್ಯಗಳಿಂದ ಪರಮಾತ್ಮ ವ್ಯವಧಾನ–ಅವ್ಯವಧಾನದಿಂದ ಸಂಪಾದಿತನಾಗುತ್ತಾನೆಂದುದೃಷ್ಟಾಂತದಿಂದ ತೋರಿಸುತ್ತಾರೆ ಹುಟ್ಟಿದಂಥ ಶಿಶುವಿಗೆ ವಯಾನುಸರಿಸಿದಂಥ ಪಾನಾದಿ ಉಪಚಾರಗಳು ಹ್ಯಾಗೆ ಮಾಡಬೇಕೋ ಹಾಗೇ ಪರಮಾತ್ಮನ ಸಂಪಾದನ ಮಾಡಬೇಕಾದ ಅಧಿಕಾರಿಗೆ ಪ್ರಥಮದಲ್ಲಿ ಪರಮಾತ್ಮನು ಅಲಭ್ಯ, ಅದು ಏನು ಕಾರಣವೆಂದರೆ ಪರಮಾತ್ಮ ಎಂಥವ ಎಂದರೆ "ಅಣೋರಣೀಯಾನ್ ಮಹತೋ ಮಹೀಯಾನ್"ಎಂಬೋ ಪ್ರಮಾಣದಿಂದ ಬ್ರಹ್ಮಾದಿಗಳಿಂದ ಆದ ಕಾಲಕ್ಕೂ ಯಜನ ಮಾಡಲಿಕ್ಕೆ ಅಸಾಧ್ಯನಾದ ಅಣುನಾದಂಥವ. ಹಾಗೇವೆ ಮಹತ್ ವಸ್ತುಗಳಿಗೆ ಮಹತ್ತರನಾದವನಾದ ಪ್ರಯುಕ್ತ "ಸೂಕ್ಷ್ಮತ್ವಾತ್ತದವಿಜ್ಞೇಯಂ" ಮಹಾಜ್ಞಾನದಿಂದಾದರೂ ಸಾಕಲ್ಯೇನ ತಿಳಿಸಿಕೊಂಬೋದರಗೋಸ್ಕರ ಯೋಗ್ಯನಾಗದೆ ಇದ್ದ ಮಹಾ ಮಹಿಮೆಯುಳ್ಳವನಾದ ಪ್ರಯುಕ್ತ, ಬ್ರಹ್ಮಾದಿಗಳಿಂದಾದ ಕಾಲಕ್ಕೂ ಸಾಧನವಿಲ್ಲದಲೇ ಸಾಧ್ಯನಾಗದೆ ಇದ್ದಂಥವ. ಅದು ಹ್ಯಾಗಂದರೆ ದಾರುಗತವಾದಂಥಾ ಅಗ್ನಿ ಮಥನದ ವ್ಯತಿರಿಕ್ತ ಪ್ರತ್ಯಕ್ಷಕ್ಕೆ ಹ್ಯಾಗ ಯೋಗ್ಯವಾಗದೋ, ಹಾಗೆಯೇ ಪರಮಾತ್ಮ ಸಾಧನ ವ್ಯತಿರಿಕ್ತ ಪ್ರತ್ಯಕ್ಷನಾಗಲು ಅಸಾಧ್ಯವಾದ ಪ್ರಯುಕ್ತ, ಅತ ಏವ ಶ್ರುತಿಯಲ್ಲಿ "ಕರ್ಮಣಾ ಜ್ಞಾನಮಾತನೋತಿ ಜ್ಞಾನೇನಾಮೃತೀ ಭವತಿ" ಎಂತ ಉಕ್ತವಾಯಿತು.

ಸಹಸ್ರ ಜನ್ಮಗಳಲ್ಲಿ ವೇದೋಕ್ತವಾದ ಕರ್ಮಜನ್ಯ ಪುಣ್ಯದಿಂದ ಹತ್ತು ಜನ್ಮ ಬಾಹ್ಯ ಕರ್ಮ ಮಾಡೋಣದರಿಂದ ಜ್ಞಾನ ಹುಟ್ಟುತ್ತದೆ. ಜ್ಞಾನ ಎಂಬೋಣದರಿಂದ ಜ್ಞಾನ ಎರಡು ಪ್ರಕಾರ. ಅದು ದಾವುದು ಎಂದರೆ ಶ್ರುತ್ಯ

ಕ್ತವಾದ ಕರ್ಮಕ್ರಮೇಣ ಅಭಿವೃದ್ಧಿಯಾಗುವದು ಬಾಹ್ಯಜ್ಞಾನ, ಇನ್ನು ಶ್ರುತ್ಯುಕ್ತವಾದ ಅರ್ಥಾನುಸರಿಸಿ, ಸ್ವಕೀಯವಾದ ದೇಹದಲ್ಲಿ ಹ್ಯಾಗೋ ಹಾಗೆ, ಸಕಲ ವಸ್ತುಗಳಲ್ಲಿ ಪರಮಾತ್ಮ ಬಹುರೂಪಗಳಿಂದ ವ್ಯಾಪ್ತನಾಗಿ ತತ್ವಾಭಿಮಾನಿ ದೇವತೆಗಳ ದ್ವಾರಾ ತಾನು ಕರಚರಣಾದ್ಯವಯವಗಳಲ್ಲಿ ನಿಂತು ತಾನೇ ವ್ಯಾಪಾರ ಮಾಡಿಸುತ್ತಾನೆ. ಈ ಪರಮಾತ್ಮನ ಸ್ವಾತಂತ್ರ್ಯವನ್ನು ಸಮರ್ಥನೆ ಮಾಡುತ್ತಾ, ಹತ್ತು ಜನ್ಮಗಳು ಸಾಧನೆ ಮಾಡಿದನಂತರ ಎರಡು ಜನ್ಮಗಳು, ಪೂರ್ವೋಕ್ತವಾದ ಪುಣ್ಯದ ದೆಶೆಯಿಂದ ಕ್ರಮೇಣ ಭಕ್ತಿಯನ್ನು ಐದಿ, ಮೂರನೇ ಜನ್ಮದಲ್ಲಿ ಹೃದಯಸ್ಥನಾದ ಪರಮಾತ್ಮನ್ನ ಚಕ್ಷುಸ್ಸಿನಿಂದ ಕಾಣುತ್ತಾನೆ, ಇದೇವೆ ಅಪರೋಕ್ಷ ಜ್ಞಾನ. ಇದೇವೆ ವಿಜ್ಞಾನ. ಇಂಥ ಜ್ಞಾನದಿಂದ "ಅಮೃತೀ ಭವತಿ" ಮೋಕ್ಷವಾಗತದೆ.

ಹೀಗಿದ್ದ ಪ್ರಯುಕ್ತವೇದಾರ್ಥಕ್ಕೆ ಸಾರಭೂತವಾದಂಥ ವಿಜ್ಞಾನಗೋಚರವಾದಪರಮಾತ್ಮನ ಸಂದರುಶನರೂಪವಾದ ಸಿದ್ಧಸಾಧನ ಉತ್ಕೃಷ್ಟ ಜ್ಞಾನದಿಂದ ಉತ್ತಮಾಧಿಕಾರಿಗಳಿಗೆ ವೇದಾರ್ಥಗೋಚರವಾದೀತೇ ಹೊರ್ತು, ರಜೋಜೀವರುಗಳಿಂದ, ಹಾಗು ಬಹುಕಾಲ ಸಂಸಾರದಿಂದ ಜನ್ಮಾದಿಗಳು ಐದಿ, ದುಃಖಬಡುವಂಥ ಮುಕ್ತಿಯೋಗ್ಯರಿಂದಾದ ಕಾಲಕ್ಕೂ ವೇದ ಶಾಸ್ತ್ರಗಳಿಗೆ ಸಾರಭೂತ ಪರಮಾತ್ಮನ ತಿಳಿಯುವಂಥ ಜ್ಞಾನವಾಗದು. ಹೀಗಿದ್ದ ಪ್ರಯುಕ್ತವಾಗಿಯೇ "ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯಚ ಪುನಃ ಪುನಃ। ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ॥ಉತ್ತಮಾಧಿಕಾರಿಗಳಿಂದ ಸರ್ವಶಾಸ್ತ್ರಗಳಿಂದ ಮತ್ತೂ ಮತ್ತೂ ವಿಚಾರಮಾಡಿ ಅದರ ಸಾರವನ್ನು ತೆಗೆಯೋಣದರಿಂದ ನಿರ್ಧಾರಿತವಾದೀತು. ಅದು ದಾವುದೆಂದರೆ ಜೀವಕ್ಕೆ ಅನಾದಿಕಾಲದಿಂದ ಪ್ರತಿಬಂಧಕ ರೂಪವಾದ ಅನಿಷ್ಟ ನಿವೃತ್ತಿಯಾಗಿ, ಇಷ್ಟ ಪ್ರಾಪ್ತಿ ರೂಪವಾದ ಸ್ವರೂಪ ಸುಖಾಭಿವ್ಯಕ್ತಿರೂಪ ಮೋಕ್ಷವಾಗಬೇಕಾದರೆ "ಧ್ಯೇಯೋನಾರಾಯಣಃ ಸದಾ" ಎಂತ ಉಕ್ತವಾಯಿತು. " ಅಥಾತೋ ಬ್ರಹ್ಮಜಿಜ್ಞಾಸಾ " ಯೆಂತ ಪ್ರಸಕ್ತವಾಯಿತು. ಹೀಗಿದ್ದ ಪ್ರಯುಕ್ತವಾಗಿ ಸಧ್ಯದಲ್ಲಿ, ಇದೇ ಪರಮಾತ್ಮನ್ನತಿಳಿಸಿ ಕೊಡುವಂಥಾ ಶಾಸ್ತ್ರಸಾರಯೆಂತ ಕರಿಸಿಗೂಳತದೆ. ಆದ ಪ್ರಯುಕ್ತ ಶ್ರೀಜಗನ್ನಾಥದಾಸರಾಯರು ಮಾಡಿದಂಥ ಶಾಸ್ತ್ರಸಾರಭೂತವಾದ ಪದ್ಯರೂಪವಾದ ಗ್ರಂಥವು "ಹರಿಕಥಾಮೃತಸಾರ" ಯೆಂತ ಕರಿಸಿಕೊಳತದೆ. ಇಂಥ ಹರಿಕಥಾ



ಮೃತಸಾರವನ್ನು ವಿಸ್ತಾರ ಮಾಡಬೇಕಾದರೆ ತಮತಮಗೆ ಅಪರೋಕ್ಷ ಜ್ಞಾನ ಪ್ರಬೋಧಕರಾದ ಗುರುಗಳ ಅನುಗ್ರಹ ವ್ಯತಿರಿಕ್ತಸಾಧ್ಯವಾಗದು; ಆದ ಪ್ರಯುಕ್ತ, ನಮ್ಮ ಗುರುಗಳ ಕಾರುಣ್ಯದೆಶೆಯಿಂದ, ಆಪನಿತು=ನಮ್ಮ ಯೋಗ್ಯತೆಗೆ ತಿಳಿಸಿದಷ್ಟುಎಷ್ಟೋ ಅಷ್ಟೇ ತಿಳಿದುಕೊಂಡು ಹೇಳುತ್ತೇವೆ ಹೊರ್ತು ಸಾಕಲ್ಯೇನ ಹೇಳೋದಕ್ಕ ಸಮರ್ಥರಲ್ಲ; ಎಂತ ಸೂಚನೆ ಮಾಡುವಕ್ಕೋಸ್ಕರ ಆಪನಿತು ಯೆಂತ ಹೇಳಿದರು. ಅದು ಏನು ಕಾರಣವೆಂದರೆ ಪರಮಾತ್ಮನನ್ನ ಸಾಕಲ್ಯದಿಂದ ತಿಳಿಯೋದಕ್ಕೆ ದೇಶಕಾಲದಲ್ಲಿ ಸಮತ್ವೇನ ವ್ಯಾಪ್ತಳಾದ ಶ್ರೀ ರಮಾದೇವಿಯೂ ಕೂಡ ಸಮರ್ಥಳಲ್ಲ. ಅದು ಹೇಗಂದರೆ ಪರಮಾತ್ಮನನಖಾಗ್ರದಲ್ಲಿ ವಿದ್ಯಮಾನಗುಣ ರೂಪಕ್ರಿಯೆಗಳು ತಿಳಿಯಬೇಕಂತ, ಅನಾದ್ಯನಂತಕಾಲಗಳಿಂದ ಶ್ರುತಿ ಸ್ಮೃತಿಗಳು ಮೀರಿದಂಥ ಮಹತ್ತರ ಜ್ಞಾನದಿಂದ ಆಲೋಚನೆ ಮಾಡಿದ ಕಾಲಕ್ಕೂ, ಒಂದು ಗುಣದೊಳಗೆ ಅನಂತ ಗುಣರೂಪ ಕ್ರಿಯೆಗಳು ಕಾಂಬೋಣದರಿಂದ ಅದಕ್ಕೆ ಅನಿರ್ಧಾರಿತವಾದ ಜ್ಞಾನವುಳ್ಳಾಕಿಯಾಗಿ, ಅನಂತ ಗುಣ ಬಿಟ್ಟು ಒಂದು ಗುಣ ಗ್ರಹಣ ಮಾಡಿದರೂ, ಅದರೊಳಗೇವೆ ಅನಂತಾನಂತ್ವ ಕಂಡು ಎಲ್ಲಿಗೂ ಪ್ರಾಂತಗಾಣದೆ ಇದ್ದ ಪ್ರಯುಕ್ತ, ನನಗೆ ಅಸಾಧ್ಯವೆಂದು ತಿಳಿಯುವಂಥ ಯತ್ನಬಿಟ್ಟು, ಪರಮಾತ್ಮನ ಮಹಾಮಹಿಮಾವರ್ಣನ ಕಂಡು ಹೇಳಲಾಗಿ ಆನಂದ ಸಮುದ್ರದಲ್ಲಿ ಮುಳುಗಿ ಇದ್ದಾಳೆ. ಎಂಬೋ ನಿಮಿತ್ಯದಿಂದ ಪ್ರಕೃತಿಬದ್ಧರಾದ ಬ್ರಹ್ಮಾದಿಗಳಿಂದ ಸಾಕಲ್ಯೇನ ತಿಳಿಸಿಕೊಂಬೋದರಗೋಸ್ಕರ ಹ್ಯಾಗೆ ಸಮರ್ಥನಾದಾನು ?

ಹಾಗಾದರೆ ಬ್ರಹ್ಮಾದಿಗಳು ಪ್ರತಿಬಂಧಕರೂಪವಾದ ಪ್ರಾಕೃತ ಬದ್ಧತ್ವಾದಿ ಅನಿತ್ಯದಿಂದ ಸಾಕಲ್ಯೇನ ತಿಳಿಯೋದಕ್ಕೆ ಅಸಮರ್ಥರಾದರು ಯಂತಾ ಶಂಕಾ ಕೂಡೋದೇ ಇಲ್ಲ. ಅದು ಹೇಗಂದರ ಪ್ರಕೃತಿಬದ್ಧತ್ವ ಹೋದ ಮೇಲೆ ನಿತ್ಯತ್ವವನ್ನು ಐದಿ, ಸ್ವಸ್ವರೂಪಾನಂದಭಾವವನ್ನು ಐದಿದಾಗ್ಯಾದರೂ ಮುಕ್ತ ಬ್ರಹ್ಮರು ಮುಕ್ತ ಶೇಷ ಗರುಡಾದಿಗಳು ಆದ ಕಾಲಕ್ಕೂ, ಪರಮಾತ್ಮನ್ನ ಸಾಕಲ್ಯೇನ ತಿಳಿಯೋದರಗೋಸ್ಕರ ಸಮರ್ಥರಾಗರು; ಎಂದ ಮೇಲೆ ಮನುಷ್ಯ ದೇಹ ಧಾರಣ ಮಾಡಿದಂಥ ಜ್ಞಾನಿಗಳು, ನಮ್ಮ ಯೋಗ್ಯತೆಯನುಸರಿಸಿ, ಪರಮಾತ್ಮನ್ನ ತಿಳದೇವು ಯೆಂತ ಹೇಳೋಣ ಆಶ್ಚರ್ಯವಲ್ಲ. ತನ್ನಿಮಿತ್ಯದಿಂದ, ಶ್ರೀ ಜಗನ್ನಾಥರಾಯರು "ಆಪನಿತು ಪೇಳುವೆ" ಎಂತ ಹೇಳಿದರು.

"ಪರಮಭಗವದ್ಭಕ್ತರಿದ ನಾದರದಿ ಕೇಳುವದು"ಎಂತ ಯಾಕೆ ಅಂದರು? ಪರಮಾತ್ಮನ ಕಥಾಶ್ರವಣ ಮನನಕ್ಕ ಸರ್ವರೂ ಅಧಿಕಾರಿಗಳು ಯೆಂತ ಉಕ್ತ ವಾಗಿರಲಿಕ್ಕಾಗಿ, ಪರಮ ಭಗವದ್ಭಕ್ತರಾದವರೇ ಇದನಾದರದಿ ಕೇಳುವದು ಯಂತ ಯಾಕೆಂದರು? ಯಂತ ಶಂಕಾಬಂದರೆ, ಅದು ಕೂಡೋದಿಲ್ಲೆಂತ ಹೇಳು ತ್ತಾರೆ. "ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀಚ ಭರತರ್ಷಭ ॥ ತೇಷಾಂ ಜ್ಞಾನೀ ನಿತ್ಯಯುಕ್ತ ಏಕ ಭಕ್ತಿರ್ವಿಶಿಷ್ಯತೇ" ತ್ರಿವಿಧತಾಪತ್ರಯಗಳಿಂದ ಶ್ರಮ ವನ್ನು ಐದಿ, ಪರಮಾತ್ಮನವ್ಯತಿರಿಕ್ತ ಪರಿಹಾರಕರ ಕಾಣದಲೇ ಪರಮಾತ್ಮನ ಮೊರೆಯೈದಿ ದಾವ ಮಹತ್ಮನ ಅನುಗ್ರಹಸಂಪಾದನ ಮಾಡಬೇಕಂತ ಭಗವ ತ್ಕಥಾಪಠನ ಮಾಡೋಣಾ ಹಾಗೆ ಶ್ರವಣ ಮಾಡುವಂಥವನಾಗಿ ಅಜ್ಞ ಜನರ ದೃಷ್ಟಿಗೆ ಪರಮ ಭಗವದ್ಭಕ್ತತ್ವೇನ ದೃಶ್ಯನಾಗುತ್ತಾನೆ. ಹಾಗೇ ಅರ್ಥಾರ್ಥಿ ಯಾದವ, ಇದೇಪ್ರಕಾರ ಜಿಜ್ಞಾಸು. ಪರಮಾತ್ಮನ ಸಂಪಾದನಮಾಡಬೇಕೆಂದು ವೇದೋಕ್ತ ಕರ್ಮಗಳನ್ನು ಮಾಡುತ್ತಾ, ಜ್ಞಾನದಿಂದ ಪರಮಾತ್ಮನ ತಿಳಿಯ ಬೇಕೆಂಬೋ ಇಚ್ಛಾದಿಂದ ಆಲೋಚನೆ ಮಾಡುವಂಥ ಅಧಿಕಾರಿ ಜಿಜ್ಞಾಸು ಎಂತ ಕರಸಿಕೊಳತಾನೆ. ಮತ್ತು ಆ ಬ್ರಹ್ಮಸ್ತಂಬ ಪರಿಯಂತ ಸಕಲ ಅಸಾರ ವೆಂದು ತಿಳಿದು, ತರತಮ ಪಂಚಭೇದ ಜ್ಞಾನದಿಂದ ಯಾವನು ಧ್ಯಾನ ಮಾಡು ತ್ತಾನೋ ಅವ ಜ್ಞಾನಿಯು. ಈ ಪ್ರಕಾರ ನಾಲ್ಕು ಜನರು ಪರಮಾತ್ಮನ ಸೇವಾ ಮಾಡುತ್ತಾರೆ. ಈ ಪರಮಾತ್ಮನ ಶ್ರವಣ ಮನನ ನಿದಿಧ್ಯಾಸನಾದಿಗಳು ನಾಲ್ಕು ಪ್ರಕಾರದವರಿಗೂ ಪರಮ ಮುಖ್ಯತ್ವೇನ ಕೂಡೋದಿಲ್ಲ. ಅವರೊಳಗೆ ಯಾರು ಮುಖ್ಯರೆಂದರೆ "ಪ್ರಿಯೋಹಿಜ್ಞಾನಿನೋತ್ಯರ್ಥಮಹಂಸಚಮಮಪ್ರಿಯಃ ನಾಲ್ಕು ವಿಧರಾದವರು ತ್ರಿವಿಧ ತಾಪಗಳಿಂದ ಪರಮ ಆರ್ತರಾಗಿ ಪರಮಾತ್ಮನ ಸೇವಾ ಮಾಡೋಣ, ಮತ್ತು ದ್ರವ್ಯಾದಿ ಆಕಾಂಕ್ಷೆಯಿಂದ ಸೇವಾಮಾಡುವನು. ಕೂಡ ಆರಾಧನೆ ಮಾಡಿದ ಕಾಲಕ್ಕೂ, ಇವರು ಜ್ಞಾನಾರ್ಜನೆ ನಿಮಿತ್ತರಾಗದೆ ಇದ್ದ ಪ್ರಯುಕ್ತ, ಪರಮಾತ್ಮನ ಅತ್ಯರ್ಥ ಪ್ರಸಾದಕ್ಕೆ ಯೋಗ್ಯರಾಗದೆ ಪರ ಮಾತ್ಮಗೆ ಇವರು ಭಕ್ತರೆಂತ ಕರೆಸುವದಿಲ್ಲ. ಏನು ಕಾರಣವೆಂದರೆ ಮುಖ್ಯ ಭಕ್ತರಾದವರು, ಪರಮಾತ್ಮನಲ್ಲಿ ಭಕ್ತಿ ವ್ಯತಿರಿಕ್ತವಾಗಿ, ಇನ್ನೊಂದು ಅಪೇಕ್ಷಾ ಮಾಡಬಾರದು. ಸಕಲ ಕಾಮಗಳಿಂದ ನಿವೃತ್ತರಾಗಿ ಭಕ್ತಿಯೊಂದೇ ಅಪೇಕ್ಷ ಮಾಡುವದೇ ಮುಖ್ಯ ಭಕ್ತರ ಉಪಾಸನಾ ಇದ್ದ ಪ್ರಯುಕ್ತ ಜ್ಞಾನಿಗಳಿಂದ



ನಿಂದಿತವಾದ ಆಚರಣೆ ಇದ್ದದ್ದು ಶ್ರೇಷ್ಠವಾಗದು. ಇದರಿಂದ ಪರಮಾತ್ಮಗೆ ಪ್ರೀತಿಯಾಗದು. ಆರ್ತ, ಅರ್ಥಾರ್ಥಿ, ಇಬ್ಬರಕಿಂತಲೂ ಜಿಜ್ಞಾಸು ಉತ್ತಮ. ಏಕೆಂದರೆ ಸಕಲ ಶಾಸ್ತ್ರಗಳನ್ನು ಜಿಜ್ಞಾಸಾ ಮಾಡುತ್ತ ಮನಸ್ಸಿನಲ್ಲಿ ಪರಮಾತ್ಮನ ವ್ಯಾಪ್ತಿ ವಿಭೂತಿಗಳ ಚಿಂತನೆ ಮಾಡುತ್ತ ಇದ್ದಂಥ ಜ್ಞಾನಿ, ಅಭ್ಯಾಸಯೋಗ ಯುಳ್ಳವನೇ ಹೊರ್ತು, ಪರಮಾತ್ಮನ್ನ ಅಪರೋಕ್ಷೀಕರಿಸಿ, ಪ್ರತ್ಯಕ್ಷ ನೋಡು ವದರಗೋಸ್ಕರ ಯೋಗ್ಯನಾಗದೇ ಇದ್ದ ಪ್ರಯುಕ್ತ, ಜ್ಞಾನಿಗಳಿಂದ ಅಧಮ ಯೆಂತ ಕರಿಸಿಕೊಳ್ಳುತ್ತಾನೆ. ಅದು ಏನು ಕಾರಣವೆಂದರೆ, ಶಬ್ದ ಸ್ಪರುಶಾದಿ ಗಳನ್ನು ಸ್ವಪ್ನದಲ್ಲಾದರೂ ಸ್ಮರಿಸದೇ ಪರಮಾತ್ಮನಲ್ಲಿ ತದೈಕ ಭಕ್ತಿನಿಷ್ಠಾದಿಂದ "ಪ್ರಿಯೋಹಿ ಜ್ಞಾನಿನೋತ್ಯರ್ಥಮಹಂ ಸಚ ಮಮ ಪ್ರಿಯಃ" ಎಂಬೋ ಗೀತಾ ವಾಕ್ಯದಂತೆ ಪರಮಾತ್ಮನ ವ್ಯತಿರಿಕ್ತ ಇನ್ನೊಂದು ಅಪೇಕ್ಷಿಸದ ಜ್ಞಾನಿಯು ಸರ್ವರಿಂದ ಪ್ರಿಯನು. ಇಂಥ ಸುಜ್ಞಾನಿಯೇ ನನಗೂ ಪ್ರೀಯಯಾದವನೆಂದು ಶ್ರೀ ಕೃಷ್ಣನ ವಾಕ್ಯ. ಹೀಗಿದ್ದ ಪ್ರಯುಕ್ತ ಇಂಥವರೇ ಪರಮಭಕ್ತರು. ಇಂತಹ ಪರಮ ಭಗವದ್ಭಕ್ತರೇ ಇದನ್ನು ಆದರದಿ ಕೇಳುವದು ಯಂತ ಶಿಷ್ಯ ಶಿಕ್ಷಾರ್ಥ ವಾಗಿ ಹೇಳುವಂಥಾವರಾದರು ॥ ಇದೇ ಪಲ್ಲಾಭಿಪ್ರಾಯ.

**ಶ್ರೀಗುರು ವಿಜಯ ವಿಠಲರ ವ್ಯಾಖ್ಯಾನ**– ಶ್ರೀರಮಣಿ ಕರಕಮಲ ಪೂಜಿತ=ಶ್ರೀ=ಸಂಪತ್ಕರಳಾದ,ರಮಣೀ=ಮನೋಹರಳಾದ, ಲಕ್ಷ್ಮೀದೇವಿಯ– ಕರಕಮಲ=ಕರಲಕ್ಷಣವಾದ ಕಮಲದ್ದ ಶಿಂದ ಪೂಜಿತರಾದ, ಚಾರು=ಮನೋ ಹರವಾದ ಚರಣಲಕ್ಷಣವಾದ, ಸರೋಜ=ಸರೋವರದಲ್ಲಿ ಹುಟ್ಟಿದಂಥ ಕಮಲ, ಪಾದಕಮಲ ಉಳ್ಳಂಥಾತನೆ, ಮತ್ತು ನೀ ಎಂಥವನೆಂದರೆ "ನೀರಜಭವಾಂಡೋ ದಯ, ನೀರಜ=ಕಮಲದಲ್ಲಿ, ಭವ=ಹುಟ್ಟಿದ, ಬ್ರಹ್ಮ ; ಇಂಥ ಬ್ರಹ್ಮಾಂಡದ ಉದಯ=ಹುಟ್ಟಿಸುವದಕ್ಕೂ, ಸ್ಥಿತಿ-ರಕ್ಷಣ ಮಾಡುವದಕ್ಕೂ, ಕಾರಣೀಭೂತ ನಾದಂಥವ. ಕೈವಲ್ಯದಾಯಕ ಎಂಬೋಣದರಿಂದ ಬ್ರಹ್ಮಾದಿ ಜೀವರುಗಳ ಸೃಷ್ಟಿ ಸ್ಥಿತಿ ಮಾಡಿ ಅವರವರ ಆಗಾಮಿ ಸಂಚಿತಗಳನ್ನು ಕಳೆದು, ಉಳಿದ ಪ್ರಾರಬ್ಧವೂ ಕೂಡ ಅನುಭವ ಮಾಡಿಸಿ, ನಾಲ್ಕು ಸ್ಥೂಲದೇಹಗಳನ್ನು ನಾಶ ಮಾಡಿ, ಅಪುನರಾವರ್ತಿರೂಪವಾದ ಲೋಕದಲ್ಲಿ ಅತ್ಯತ್ತಮವಾದ ಸುಖವಾ ದಂಥಾದ್ದು ಕೈವಲ್ಯಯಂತ ಕರೆಸುತ್ತದೆ. ಇಂಥ ಕೈವಲ್ಯ= ಮೋಕ್ಷವನ್ನು ದಾಯಕ=ಕೊಡುವಂಥ, ನಾರಸಿಂಹನೆ ! ನಮಿಪೆ. ಹೇನರಸಿಂಹ! ನೀ ಎಂಥವ

ಎಂದರೆ, ಬ್ರಹ್ಮ ರುದ್ರಾದ್ಯಕ್ಷಯೆಂಬೊ-ಬ್ರಹ್ಮಸಮೀರಾದಿ ಜೀವರುಗಳಿಗೆ ಪಾಪ ಪುಣ್ಯ ಪ್ರೇರಿಸಿ ಕೊಡುವಂಥ ನಾರಾಯಣದೇವರು. ವಾಣಿ=ಪ್ರಾಣಿಗಳ ವಾಣಿಯಲ್ಲಿನಿಂತು ನುಡಿಸುವಂಥಾಕೆ ಸರಸ್ವತಿ. ಫಣೀಂದ್ರ, ವೀಂದ್ರಭವೇಂದ್ರಮುಖ ವಿನುತ= ಶೇಷ-ಗರುಡ ರುದ್ರ ಇಂದ್ರಾದಿಗಳಿಂದ ನಮಿತ ಶ್ರೇಷ್ಠನಾದ ನಾರಸಿಂಹನೇ ! ನಮಿಪೆ=ನಮಸ್ಕಾರಮಾಡುವೆ.ಎಮಗೆ ಮಂಗಳವನ್ನು ಕರುಣಿಸು.

**ಪದ್ಯ ೨**– ಜಗದುದರ ಎಂದರೆ ಜಗತ್ತೆ ಉದರದಲ್ಲಿ ಉಳ್ಳಂಥ ಪರಮಾತ್ಮನೇಯಂತ ಅರ್ಥ. ಅಥವಾ ಒಂದು ಪಕ್ಷದಲ್ಲಿ ಜಗತ್ತೇವೆ ಉದರವಾಗಿಉಳ್ಳಂಥ ಪರಮಾತ್ಮನೆ ಯಂತ ಎರಡನೇ ಅರ್ಥ. ಹೀಗೆ ಅರ್ಥ ಮಾಡೋಣದರಿಂದ, ಜಗತ್ತಿಗೂ ಪರಮಾತ್ಮಗೂ ಅಭೇದ ಬಂತು. ಅಭೇದ ಹೇಳೋಣದರಿಂದ ಪರಮಾತ್ಮನಲ್ಲಿ ಜಗದ್ವಿಲಕ್ಷಣತ್ವ ಕೂಡೋದಿಲ್ಲ. ಜಗದೈಕ್ಯ ಹೇಳೋಣದರಿಂದ ಪರಮಾತ್ಮನು ನಿರ್ದುಷ್ಟ ಜ್ಞಾನಾನಂದಾದಿ ಗುಣಗಳಿಗೆ ಸಮುದ್ರ ಸ್ಥಾನಾಪನ್ನನಾದವ. ಅದು ಹೇಗಂದರೆ– ಪರಮಾತ್ಮ ಎಂಥವ ? ನಾರಾಯಣಶಬ್ದವಾಚ್ಯನಾದವ. ಅರಾಃ=ದೋಷರಹಿತ ಗುಣಗಳಿಗೆ ಅಯನಂ=ಆಶ್ರಯನಾದವ ಯಂತ ಶ್ರುತಿ ಸ್ಮೃತಿಗಳು ಪ್ರತಿಪಾದನ ಮಾಡುವಂಥದಕ್ಕೆ ಅವಮಾನ ಬರುತ್ತದೆ. ಆದ ಪ್ರಯುಕ್ತ ಪರಮಾತ್ಮಗೆ ಜಗದ್ವಿಲಕ್ಷಣತ್ವ ಹೇಳಬೇಕೇ ಹೊರ್ತು ಜಗದೈಕ್ಯವನ್ನು ಸರ್ವಥಾ ಹೇಳಕೂಡದು. ಆದ ಪ್ರಯುಕ್ತ ಸರ್ವ ಪ್ರಕಾರದಿಂದ ಜಗದ್ವಿಲಕ್ಷಣತ್ವ ಹೇಳಬೇಕು. ಹಾಗಾದರೆ ಜಗದುದರಾ ಎಂಬೋದಕ್ಕೆ ಏನು ಅರ್ಥ? ಬೇಡ ಬಂದರೂಬರಲಿ, ಜಗದುದರ ಎಂತ ಯಾಕೆಅರ್ಥ-ಮಾಡಬಾರದು? ಎಂದರೆ, ಪರಮಾತ್ಮ ಸ್ವರೂಪದಿಂದ ಎಂಥವನೆಂದರೆ "ಮೋದೋದಕ್ಷಿಣಃ ಪಕ್ಷಃ ಪ್ರಮೋದ ಉತ್ತರಃಪಕ್ಷಃ ಆನಂದಆತ್ಮಾ" ಎಂಬೋ ಪ್ರಮಾಣದ್ದಶಯಿಂದ ಪರಮಾತ್ಮ ಜ್ಞಾನಾನಂದಾತ್ಮಕ. ಅಪ್ರಾಕೃತ ದೇಹವುಳ್ಳಂಥ ಪರಮಾತ್ಮಗೆ "ಈದಾವಪ್ರಕೃತಿ ಸಂಬಂಧಿಯಾದ ಚತುರ್ವಿಂಶತಿತತ್ವಾತ್ಮಕವಾದ ಕ್ಷಣಶಃನಾಶವೈದುವಂಥ ಜಗತ್ತು ಉದರವಾಗಿ ಉಳ್ಳಂಥಾತ" ಎಂಬೋ ಅರ್ಥ ಕೂಡೋದಿಲ್ಲ. ದಾಸಾರ್ಯರು ಮಹಾಜ್ಞಾನವುಳ್ಳವರಾದ ಪ್ರಯುಕ್ತ, ಶ್ರುತಿಸ್ಮೃತಿವಾಕ್ಯಗಳ ಅನುಸರಿಸೇವೇ ಜಗದುದರಾ ಎಂತ ನುಡಿದಾರೆ. ಅದರ ಭಾವಗರ್ಭಿತವಾದ ಅರ್ಥವನ್ನು ಸಂಕೋಚದಿಂದ ನಿರೂಪಣ ಮಾಡಿದ್ದಾರೆ. "ಜಗದುದರಾ" ಎಂದರೆ ಜಗತ್ತು ಉದರದಲ್ಲಿ ಉಳ್ಳಂಥಾತನೆಂದು ಅರ್ಥ. ಭಾಗವತ ಪ್ರಮಾಣ.



"ಪಾತಾಲಮೇತಸ್ಯಹಿಪಾದ ಮೂಲಂ"ಇತ್ಯಾದಿ ಪ್ರಮಾಣ."ಹದಿನಾಲ್ಕು ಲೋಕಗಳನ್ನೇ ಪರಮಾತ್ಮನು ತನ್ನ ಅಂಗಳಲ್ಲಿ ಧರಿಸಿಹನು. ಎಂಬೋ ವಾಕ್ಯದಿಂದ ಯಾವಾತನ ಪಾದ ಮೂಲವೇ ಪಾತಾಳಲೋಕ ಯೆಂತ ಕರಸಿಕೊಳತದೆ. ಹಾಗೇವೆ ಪರ್ವತಗಳು ಯಾವಾತನ ಅಸ್ಥಿ ಸಂಘ ಯೆಂತ ಕರಿಸಿಕೊಳತವೆ. ಸಮಸ್ತವಾದ ಜಗತ್ತಿನಲ್ಲಿ ಇದ್ದಂಥ ನದಿ ಮೊದಲಾದವೆಲ್ಲ ಪರಮಾತ್ಮಗೆ ಅಂಗಯಂತ ಕರೆಸಿಕೊಳತವೆ" ಯೆಂತ ಭಾಗವತದಲ್ಲಿ ಉಕ್ತವಾಗಿದೆ. ಅದೇ ವಾಕ್ಯದಿಂದ ಅಪ್ರಾಕೃತನಾದ ಪರಮಾತ್ಮಗೆ ಪ್ರಕೃತಿ ಸಂಬಂಧಿಯಾದ ಜಗತ್ತು ವಿರಾಟರೂಪಿ ಹರಿಯ ಅವಯವಯಂತ ಅರ್ಥಮಾಡೋಣದರಿಂದ ಪರಮಾತ್ಮ ಜಗತ್ ಸಾಮ್ಯವನ್ನು ಐದಿದ ಎಂದು ಯಾಕೆ ಆಗಬಾರದು? ಎಂದರೆ; "ನಾಸ್ತಿ ನಾರಾಯಣ ಸಮೋನ ಭೂತೋನ ಭವಿಷ್ಯತಿ। ಏತೇನ ಸತ್ಯ ವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಂ" ಮತ್ತು "ಲಕ್ಷ್ಮೀಕಾಂತ ಸಮಂತತೋ ವಿಕಲಯನ್" ಇತ್ಯಾದಿ ಪ್ರಮಾಣದಿಂದ– ಹೇ ಲಕ್ಷ್ಮೀಕಾಂತನಾದ ನಾರಸಿಂಹನೇ ನೀನು ಯೆಂಥವ? । ಈಶ=ಸ್ವಾಮಿಯಾದಂಥವ ! ತೇ=ನಿನಗೆ-ಸಮಂ=ಸಮಾನವಾದ ವಸ್ತುವನ್ನು , ವಿಕಲಯನ್ ಸರ್ವ ಶಾಸ್ತ್ರಗಳಲ್ಲಿ ವಿಚಾರ ಮಾಡಿದ ಕಾಲಕ್ಕೂ, ನೈವಪಶ್ಯಾಮಿ=ಎಂದೆಂದು ನೋಡಿಲ್ಲ. ಹ್ಯಾಗೆ ನೋಡಿಲ್ಲ? ಎಂದರೆ ದೂರತಃಅಪಾಸ್ತಂ ಅಷ್ಟಮರಸಇವ=ದೂರದಶಿಯಿಂದ ನಿರಾಕರಣ ಮಾಡಲ್ಪಟ್ಟಂಥ ಎಂಟನೇ ರಸದೋಪಾದಿಯಲ್ಲಿ, ಅಂದರೆ– ಲೋಕದಲ್ಲಿ ಷಡ್ರಸಗಳು ಪ್ರಸಿದ್ಧವಾದಂಥವು; ಏಳನೆಯ ರಸವೇಇಲ್ಲ. ಎಂಟನೆಯ ರಸವಂತೂ ದೂರತಃ ನಿರಾಕರಣವಾಯತು. ಇದರೋಪಾದಿಯಲಿ, ರಮಾ ಬ್ರಹ್ಮಾದಿ ಜಗತ್ತಿನಲ್ಲಿ ನಿನ್ನ ಸಮಾನವಾದ ವಸ್ತು, "ನಾಸ್ತಿನಾರಾಯಣ ಸಮಂ"। ಜಗದಾಶ್ರಯನಾದ ಪರಮಾತ್ಮನ ಸಮ, "ನ ಭೂತಂ" ಹಿಂದೆ ಹೋದ ಜಗತ್ತಿನಲ್ಲಿ ಇಲ್ಲ. "ನ ಭವಿಷ್ಯತಿ" ಮುಂದೆ ಬರುವಂಥ ಜಗತ್ತಿನಲ್ಲಿ ಇಲ್ಲ. ವರ್ತಮಾನಕಾಲದಲ್ಲಿಯೂ ಇಲ್ಲ. ಈ ಪ್ರಮಾಣದಿಂದ. ಅಥವಾ ರಸಶಬ್ದದಿಂದ ಶ್ರೇಷ್ಠತ್ವ ಎಂತ ಅರ್ಥ ಮಾಡಬೇಕು. ಪ್ರಮಾಣ ॥

ಏಷಾನಾಂ ಭೂತಾನಾಂ ಪೃಥ್ವೀರಸಃ। ಪೃಥಿವ್ಯಾಃಅಪೋರಸಃ।
ಅಪಾಂ ಓಷಧಯೋ ರಸಃ। ಓಷಧೀನಾಂ ಪುರುಷೋರಸಃ।
ಪುರುಷಸ್ಯ ವಾಗ್ರಸೋ ವಾಚಃ ಋಗ್ರಸಃ । ಋಚಃ

ಸಾಮ ರಸಃ । ಸಾಮ್ನ । ಉದ್ಗೀಥೋರಸಃ। ಸಏಷ ರಸಾನಾಂ
ರಸತಮಃ ಪರಮಃ ಇತ್ಯಾದಿ ॥

**ಟೀಕಾ** ॥ ಏಷಾಂ ಪ್ರಸಿದ್ಧಾನಾಂ ಸರ್ವೇಷಾಂ ಭೂತಾನಾಂ ಸ್ಥಾವರಾಣಾಂ ಸಕಾಶಾತ್ । ಪೃಥಿವ್ಯಾಃ ಅಭಿಮಾನಿದೇವತಾ ರಸಃ । ತಸ್ಯಾಃ ಪೃಥಿವ್ಯಾಃಸಕಾಶಾತ್ । ಆಪಸ್ತದಭಿಮಾನೀ ವರುಣೋರಸಃ । ಅಪಾಂ=ವರುಣಸ್ಯ ಸಕಾಶಾತ್ ಓಷಧಯೋ ಓಷಧ ದೇವತಾ ಸೋಮೋರಸಃ। ಓಷಧೀನಾಂ ಸೋಮಸ್ಯ ಸಕಾಶಾತ್ ಪುರುಷಃ ಪೌಂಸ್ಯದೇವತಾ ರುದ್ರೋರಸಃ। ಪುರುಷಸ್ಯ-ರುದ್ರಸ್ಯ ಸಕಾಶಾತ್ । ವಾಕ್‌ವೇಧಾಭಿಮಾನಿನೀ ಸರಸ್ವತೀರಸಃ । ವಾಚಃ ಸರಸ್ವತ್ಯಾಃಸಕಾಶಾತ್ ಋಕ್‌ರಸಃ ಋಚಃ ಸಕಾಶಾತ್ ಸಾಮರಸಃ। ಸಾಮ್ನಃಸಕಾಶಾತ್ ಉದ್ಗೀಥೋರಸಃ । ಸಾಮಾದೀನಾಂ ಭೂತಾದಿಭ್ಯಃಶ್ರೇಷ್ಠತ್ವವದುದ್ಗೀಥಸ್ಯ ಶ್ರೇಷ್ಠತ್ವಂ ನಭವತಿ । ಕಿಂತು ಮಹಾನ್ ವಿಶೇಷಃ ಇತಿ ಜ್ಞಾಪಯಿತು ಮಾಹ" "ಸಏಷ" ಇತಿ । ಅಷ್ಟಮಃ ಪೃಥಿವ್ಯಪೇಕ್ಷಯಾ । ಅಷ್ಟಮತ್ವೇನೋಕ್ತಃ ಯ ಉದ್ಗೀಥಃ । ಸಏಷ ರಸಾನಾಂ ಶ್ರೇಷ್ಠಾನಾಂ ಪೃಥಿವ್ಯಾದೀನಾಂಸಕಾಶಾತ್ । ರಸತಮಃ । ಶ್ರೇಷ್ಠತಮಃ । ಪರಮಶ್ರೇಷ್ಠಾದಪಿ ಶ್ರೇಷ್ಠತಮಶ್ಚ ಯತ್ಪರಮಂ ತಸ್ಮಾದುತ್ತಮಃ ಇತ್ಯರ್ಥ ॥

ಇತ್ಯಾದಿ ಪ್ರಮಾಣದ್ವಶಿಯಿಂದ ಸಾಕ್ಷಾತ್ ಪರಮಾತ್ಮ ಜಗಜ್ಜೀವರಿಗೆ ಅತ್ಯಂತ ಭಿನ್ನನಾದವ ಎಂತ ಆಗಮದಿಂದ ಅನುಮಾನದಿಂದ ಪ್ರತ್ಯಕ್ಷದಿಂದ ಕೂಡಾ, ಸರ್ವೋತ್ತಮಾ ಎಂತ ನಿರ್ಧಾರಿತವಾದ ಜ್ಞಾನ ಉಳ್ಳಂಥಾವರಾಗಿ ರಮಾ ಬ್ರಹ್ಮಾದಿಗಳಿಂದ ಉಪಾಸಿತನಾಗಿದ್ದಾನೆ. ಇಂಥ ಪರಮಾತ್ಮಗೆ ಜಗದೈಕ್ಯ ಹೇಗೆ ಕೂಡೀತು ? ಪರಮಾತ್ಮ ನಾಮದಿಂದ ರೂಪದಿಂದ ಕ್ರಿಯಾದಿಂದ ಕೂಡ, ಜಗದ್ವಿಲಕ್ಷಣನಾದಂಥವ.

ಅದುಹ್ಯಾಗಂದರೆ ಕೇಶವ ಎಂಬನಾಮದಿಂದ ಕಂ=ಬ್ರಹ್ಮಾ, ಶಂ=ಶಂಕರ, ಇವರ ನಾಮದ್ವಶಿಯಂದ ಅವರವರಲ್ಲಿ ವ್ಯಾಪ್ತನಾಗಿ, ಅವರ ಜೀವ ಪ್ರಕೃತಿ ಕಾಲ ಕರ್ಮಾನುಸರಿಸಿ ಅವರವರ ವ್ಯಾಪಾರ ವರ್ತಿಸುತ್ತಾನಾದ ಪ್ರಯುಕ್ತ ಕೇಶವ ಯಂತನಾಮ ಬಂದುಯೋಗವಾಯಿತು. ನಾರಾಯಣಯಂಬೋ ನಾಮದಿಂದ । ನರಾಣಾಂ ಅಯನಂ=ನಾರಾಯಣಃ । ಮನುಷ್ಯರುಗಳಿಗೆ ಆಶ್ರಯನಾದ ಪ್ರಯುಕ್ತ ಪರಮಾತ್ಮಗೆ ನಾರಾಯಣಂತ ನಾಮ. ಹಾಗೇವೇ ನಾರಾಃ



ವೇದಾಃ ತೇಷಾಂ ಅಯನಂ=ನಾರಾಯಣಃವೇದಗಳಿಗೆ-ವೇದಾಭಿಮಾನಿ ದೇವತೆಗಳಿಗೆ ಆಶ್ರಯನಾದ ಪ್ರಯುಕ್ತ ನಾರಾಯಣ ಯೆಂತ ಕರೆಸುತ್ತಾನೆ. "ವಿಷ್ಣು" ವೆಂಬುವಂಥ ನಾಮದಿಂದ ಪರಮಾತ್ಮ ಜಗದ್ವ್ಯಾಪ್ತನಾದ ಪ್ರಯುಕ್ತ ವಿಷ್ಣು ನಾಮ. ಈ ಅರ್ಥದಿಂದ ಪರಮಾತ್ಮನ ಅನಂತಾನಂತ ನಾಮಗಳು ಸಕಲವೂ ಯೋಗದಿಂದ ಪ್ರಸಿದ್ಧವಾದಂಥವು.

ಜೀವನ ನಾಮಗಳಲ್ಲಿ, ಅವು ಎಂಥವು ಎಂದರೆ ಸಂಕೋಚದಿಂದ ಹೇಳುತ್ತದೆ. ದೇವ, ಋಷಿ, ಪಿತೃ, ಗಂಧರ್ವ ಮನುಷ್ಯೋತ್ತಮ ಎಂಬೋ ಲಕ್ಷಣದಿಂದ ದೇವತೆಗಳೊಳಗೆ ಸ್ವರೂಪದಿಂದ ನಾಮ ಉಳ್ಳವರು ಕೆಲವರು. ಅವರು ಯಾರೆಂದರೆ, ಬ್ರಹ್ಮ, ಗರುಡ, ಶೇಷ, ರುದ್ರ ಇಂದ್ರ ಅಹಂಕಾರಿಕ ಪ್ರಾಣ ಸೂರ್ಯ-ಚಂದ್ರ ಮೊದಲಾದ ದೇವತೆಗಳು ಸ್ವರೂಪದಿಂದ ನಾಮ ಸಂಕೇತ ಉಳ್ಳವರು; ಆದಕಾಲಕ್ಕೂ ಇವರು ರೂಢನಾಮ ಉಳ್ಳವರೇ ಹೊರ್ತು, ಯೋಗದಿಂದ ನಾಮ ಉಳ್ಳವರಲ್ಲ. ಅದು ಹೇಗಂದರೆ ಬ್ರಹ್ಮ ಎಂಬೋ ನಾಮದಿಂದ "ಬೃಂಹ್ವತಿ ಯಸ್ಮಿನ್ ಗುಣಾಃಇತಿ ಬ್ರಹ್ಮ. ಬಾಹ್ಯದ ಗುಣಸಂಪನ್ನತ್ವಈಪ್ರಸಿದ್ಧನಾದ ಬ್ರಹ್ಮನಲ್ಲಿ ಕೂಡೋದಿಲ್ಲ. ಹ್ಯಾಗೆಂದರೆ, ಬ್ರಹ್ಮಾದಿ ಸಕಲ ನಾಮಗಳು ರೂಢವಾದವು. ಏನು ಕಾರಣವೆಂದರೆ ಜೀವ ಎಂಥವ ? ಭಸ್ಮಸ್ಥಾನಾಪನ್ನನಾದವ, ಹಾಗೇವೇ ದಾರುಮಯ ಪ್ರತಿಮಾಸ್ಥಾನಾಪನ್ನನಾದವ. ಇವೇ ಮೊದಲಾದ ದೃಷ್ಟಾಂತಗಳು ಪೂರ್ವೋಕ್ತವಾಗಿ ಅವಲ್ಲಾ; ಅದರೋಪಾದೆಲಿ ಜೀವ ಪರಮಾತ್ಮನಿಂದಲೇವೆ ವ್ಯಾಪಾರವುಳ್ಳವನಾದ ಪ್ರಯುಕ್ತ, ಜೀವ ಸ್ವರೂಪದಿಂದ ಚೇತನನಾದ ಕಾಲಕ್ಕೂ, ಪರಮಾತ್ಮನ ವ್ಯತಿರಿಕ್ತ ಜಡನಾದಂಥವ; ಇಂಥ ಜಡಸ್ಥಾನಾಪನ್ನನಾದ ಜೀವನು ಅಣುಮಹತ್ವಧಾರಣವಲ್ಲಿ ಹ್ಯಾಗೆ ಸಮರ್ಥನಾದಾನು ? ಮುಖ್ಯತಃ ಪರಮಾತ್ಮನ ವ್ಯತಿರಿಕ್ತ, ಶ್ವಾಸೋಚ್ಛ್ವಾಸಕ್ಕೆ ಅಸಮರ್ಥತ್ವ ಇರೋಣದರಿಂದ ಜೀವನ-ಸ್ವರೂಪದಲ್ಲಿ ದಾವ ಶಕ್ತಿ ಕೂಡೀತು.?

ಇನ್ನು ಪರಮಾತ್ಮ ಜೀವರುಗಳ ಮೇಲೆ ಅನುಗ್ರಹ ಮಾಡುವ ನಿಮಿತ್ಯವಾಗಿ, ಜೀವಪ್ರಕೃತಿ ಕಾಲ ಕರ್ಮಗಳ ಅನುಸರಿಸಿ ಮಹತ್ಮೆ ತಂದು ಕೊಡುತ್ತಾನೆ. ತನ್ನಿಮಿತ್ಯವಾಗೇವೆ ದೇವತೆಗಳು ಸಾಂಶರು, ಗುಣವುಳ್ಳವರು, ಯಂತ ಕರೆಸುತ್ತಾರೆ. ತಸ್ಮಾತ್ ಕಾರಣಾತ್ ಪರಮಾತ್ಮನ ಸದೃಶರೂಪವನ್ನು ಎಂದಿಗೂ ಐದಲಿಕ್ಕೆ ಸಮರ್ಥರಲ್ಲ. ಹಾಗಾದರೆ ಶ್ರುತಿಯಲ್ಲಿ "ಸಾಮ್ಯಮುಪೆತಿ"

ಯೆಂತ ಹೇಳಿದೆ ಎಂದರೆ, ಸರ್ವಗುಣ ಸಂಪೂರ್ಣನಾದ ಪರಮಾತ್ಮನ
ಸಾದೃಶ್ಯ ಐದತಾನೆ. ಎಂಬೋ ಅರ್ಥದಲ್ಲಿ. ಅರ್ಥದಾವುದು ಎಂದರೆ, ಜೀವ
ಮಾಡಲ್ಪಟ್ಟ "ಪುಣ್ಯ ಪಾಪೇ ವಿಧೂಯ, ಯದಾ ಪಶ್ಯಃಪಶ್ಯತೇ ರುಕ್ಮವರ್ಣಂ
ಕರ್ತಾರಂಮೀಶಂ ಪುರುಷಂ ಬ್ರಹ್ಮಯೊನೀಂ । ತದಾ ವಿದ್ವಾನ್ ಪುಣ್ಯಪಾಪೇ
ವಿಧೂಯ ನಿರಂಜನಃ ಸಾಮ್ಯಮುಪೈತಿ । ಯಃ ಪಶ್ಯತಿ, ಪಶ್ಯೋ ಜೀವಃ।
ಜೀವನು, ಯದಾ=ದಾವಕಾಲದಲ್ಲಿ, ರುಕ್ಮವರ್ಣಂ=ಹೇಮವರ್ಣವಿಗ್ರಹಂ।
ಬ್ರಹ್ಮಯೋನಿಂ=ಹಿರಣ್ಯಗರ್ಭಕಾರಣಾತ್, ಕರ್ತಾರಂ=ಜಗತ್ಕರ್ತಾರಂ। ಪಶ್ಯತಿ=
ನೋಡುತ್ತಾನೋ, ಆ ಕಾಲದಲ್ಲಿ ಅಸೌ ವಿದ್ವಾನ್=ಈ ಜ್ಞಾನಿಯು, ಪುಣ್ಯ
ಪಾಪೇವಿಧೂಯ=ಅನಿಷ್ಟಪುಣ್ಯ ಪಾಪಗಳನ್ನು ಬಿಟ್ಟು, ನಿರಂಜನ = ಉತ್ತರ
ಪೂರ್ವಾಘಶ್ಲೇಷ ವಿನಾಶ ಮಾಡಿ ಅವಿದ್ಯಾಹೀನನಾಗಿ, ಪುರುಷಂ ಸಾಮ್ಯಂ=
ನಿರ್ದುಃಖಪೂರ್ಣಾನಂದತ್ವಾದಿ ಬ್ರಹ್ಮಸಾಮ್ಯವನ್ನು, ಆಪ್ನೋತಿ=ಐದತಾನೆ.
ಯೆಂತ ಶ್ರುತಿಯಲ್ಲಿ ಹೇಳಿದ ಪ್ರಕಾರ, ಮುಕ್ತಿಯಲ್ಲಿ ಸಾಕ್ಷಾತ್ ಪರಮಾತ್ಮನ
ಸಾಮ್ಯವನ್ನೇ ಐದ ತಾನೆಯೆಂದಲಿ ಹೇಳಿರಲಿಕ್ಕಾಗಿ, ಪೂರ್ವೋಕ್ತವಾದ ವಾಕ್ಯ
ದಿಂದ ಜೀವ ಬಂದು ಪರಮಾತ್ಮನ ವ್ಯತಿರಿಕ್ತ ಜಡಸ್ಥಾನಾಪನ್ನನಾದಂಥವನಾದ
ಪ್ರಯುಕ್ತ, ಜೀವ ಪರಮಾತ್ಮರಿಗೆ ಸಾಮ್ಯವಲ್ಲಾಯೆಂತ ಸಿದ್ಧಾಂತ ಮಾಡಿದ
ಮ್ಯಾಲೆ, ಶ್ರುತಿಗೆ ಅಪ್ರಾಮಾಣ್ಯ ಬಂತಲ್ಲಾ! ಎಂಬ ಶಂಕಾ ಬಂದರೆ ಅದಕ್ಕೆ
ಹೇಳುತ್ತಾರೆ.

ಶ್ರುತಿಗೆ : ಅಪ್ರಾಮಾಣ್ಯ ಎಂದಿಗೂ ಬರುವದಿಲ್ಲ. ಶ್ರುತಿಗೆ ಜೀವಾನು
ಸರಿಸಿ ಅವರವರ ಜ್ಞಾನಾನುಸರಿಸಿ ಅರ್ಥವಾಗುತ್ತದೆ. ಅದು ಹ್ಯಾಗಂದರೆ
ಸಾಕ್ಷಾತ್ ಪರಮಾತ್ಮನ ಉತ್ತಮ ದೃಷ್ಟಾಂತವನ್ನು ತೋರಿಸುತ್ತಾರೆ. ಪರ
ಮಾತ್ಮ ಎಂಥವ ಎಂದರೆ, ಒಂದುರೂಪದಿ ಅನಂತರೂಪಾತ್ಮಕನಾದವ.
ಅನಂತರೂಪದಿಂದ ಒಂದೇ ರೂಪ ಉಳ್ಳಂಥವ. ಅನಂತಾನಂತ ಚಂದ್ರ-ಸೂರ್ಯರ
ಪ್ರಕಾಶವುಳ್ಳಂಥವನಾದ ಕಾಲಕ್ಕೂ, ರಮಾ ಬ್ರಹ್ಮಾದಿ ದೇವತೆಗಳಿಗೆ ಅವರವರ
ಯೋಗ್ಯತಾನುಸರಿಸಿ, ತನ್ನ ರೂಪ ತಿಳಿಯೋ ಜ್ಞಾನ, ಮತ್ತು ಜ್ಞಾನಕ್ಕೆ ತನ್ನ
ರೂಪ ಎಷ್ಟು ವಿಷಯವೋ ಅಷ್ಟೇ ಸ್ಪಷ್ಟತ್ವರೂಪ, ಅದರಿಂದ ಎಷ್ಟು ಆನಂದ
ಹುಟ್ಟಬೇಕೋ ಅಷ್ಟೇ ಆನಂದ, ಈ ಪ್ರಕಾರ ಪ್ರಾಣಿಗಳಿಗೆ ಕೊಡುತ್ತಾನೆ.
ಅದೇ ಪ್ರಕಾರ ಸಾಕ್ಷದ್ರುಮಾಭಿಮನ್ಯವಾದ ವೇದಗಳು, ತದಭಿಮಾನಿ ದೇವತೆ



ಗಳು, ತ್ರಿವಿಧ ಜೀವರುಗಳಿಗೆ ಅವರವರ ಯೋಗ್ಯತಾನುಸರಿಸಿ ಅರ್ಥ ತಿಳಿಸಿ
ಕೊಡುತ್ತಾರೆ. ಸತ್ವ ಜೀವರುಗಳಿಗೆ, ವೇದಗಳು ಹೇಗೆ ಅರ್ಥ ತೋರಿಸಿ
ಕೊಡುತ್ತವೆ ಎಂದರೆ ಸಾಕ್ಷಾತ್ ನಾರಾಯಣ ಸರ್ವೋತ್ತಮ, ರಮಾ ಬ್ರಹ್ಮಾದಿ,
ಗಳು ತದ್ಭೃತ್ಯರು. ನಾರಾಯಣ ಸಕಲ ಗುಣಗಳಿಗೆ ಸಮುದ್ರಸ್ಥಾನಾಪನ್ನ
ನಾದಂಥವ, ನಿರ್ದುಷ್ಟನಾದಂಥವನಾತ, ಜೀವರುಗಳನ್ನು ಸಂಸಾರಸಮುದ್ರ
ದಶಿಯಿಂದ ತಾರಣ ಮಾಡೋದರಕ್ಕೋಸ್ಕರ ಸರ್ವಸಮರ್ಥನಾಗಿ ಸೃಷ್ಟ್ಯಾದ್ಯ
ಷ್ಟಕರ್ತನಾದಂಥವ. ಯೆಂತ ಸಂದೇಹವಿಲ್ಲದೇ ಸ್ಪಷ್ಟತ್ವೇನ ಅರ್ಥ ತೋರಿಸಿ
ಕೊಡುತಾವೆ.

ಇನ್ನು ನಿತ್ಯ ಸಂಸಾರಿಗಳಿಗೆ ವೇದಗಳು ಎಂಥಾ ಅರ್ಥ ತೋರಿಸಿ ಕೊಡು
ತ್ತಾವೆಂದರೆ; ಈದಾವ ವೇದಗಳಿಂದ ನಾರಾಯಣ ಸರ್ವೋತ್ತಮ ಎಂತ ನಿರ್ಧಾ
ರಿತವಾಗುವದಿಲ್ಲ. ಬ್ರಹ್ಮಸರ್ವೋತ್ತಮ ಶಿವಸರ್ವೋತ್ತಮ ಎಂತ ನಿರ್ಧಾರಿತ
ವಾಗದು. ಯಾರಾದರೂ ಸರ್ವೋತ್ತಮ ಆಗಲಿ ಎಂಬ ಸಂಶಯ ಜ್ಞಾನ
ಹುಟ್ಟಸಿ ಕೊಡುತ್ತವೆ. ಇನ್ನು ಕಲ್ಯಾದಿತಮೋಯೋಗ್ಯರಿಗೆ, ಹೇಗೆ ಅರ್ಥ
ತೋರಿಸಿಕೊಡುತ್ತವೆಯಂದರೆ, ಬ್ರಹ್ಮಸರ್ವೋತ್ತಮ, ಶಿವಸರ್ವೋತ್ತಮ, ಇಂದ್ರ
ಸರ್ವೋತ್ತಮ, ಗಣೇಶ ಸರ್ವೋತ್ತಮಾಯಂತ, ಉತ್ತಮತ್ವಕ್ಕೆ ಅತಿವ್ಯಾಪ್ತಿ
ತರೋಣ, ಎರಡನೇದು ಜೀವೇಶ್ವರರಿಗೆ ಐಕ್ಯ, ನಾರಾಯಣ ನಿರ್ಗುಣ ನಿರಾ
ಕಾರ, ಇವೇ ಮೊದಲಾದ ದೋಷಗಳು ಕಲ್ಯಾದಿ ತಮೋಯೋಗ್ಯರಿಗೆ ಇದೇ
ವೇದಾಭಿಮಾನಿ ದೇವತೆಗಳು ನಿರ್ಧಾರಿತವಾದ ಅರ್ಥ ತೋರಿಸಿಕೊಡುತ್ತಾರೆ.
ಇಷ್ಟು ಪ್ರಕಾರದಿಂದ ಒಂದೇ ವೇದಗಳು ಅವರವರ ಯೋಗ್ಯತಾನುಗುಣವಾಗಿ
ಅರ್ಥವಾಗುತ್ತವೆ. ವೇದಕ್ಕೆ ನಿಯಾಮಕಳಾದ ರಮಾದೇವಿ, ಶ್ರೀ ಭೂ ದುರ್ಗಾ
ಈ ಮೂರು ರೂಪಗಳಿಂದ, ನಿತ್ಯ ಸಂಸಾರಿಗಳನ್ನು ತಮೋ ಯೋಗ್ಯರನ್ನು
ಮೋಹನ ಮಾಡತಾಳಾದ ಪ್ರಯುಕ್ತ "ಪರಮಂ ಸಾಮ್ಯ ಮುಪೈತಿ" ಎಂಬುವ
ಶುದ್ಧವಾದ ಪದದಲ್ಲಿ ದೋಷರೂಪರಾದ ತಮೋಯೋಗ್ಯ ಜೀವರುಗಳಿಗೆ ಎಂಥಾ
ಅರ್ಥ: ಪ್ರೇರಿಸುತ್ತಾಳೆ. ಎಂದರೆ, ನಿರ್ದುಃಖಪೂರ್ಣಾನಂದತ್ವಾದಿ ಬ್ರಹ್ಮಸಾಮ್ಯ
ವನ್ನು ಐದಥಾನೆಂತ ಅರ್ಥತೋರಿಸಿ, ತಮೋ ಯೋಗ್ಯರಾದ ಕಲ್ಯಾದಿ
ಗಳನ್ನು, ತಮಸ್ಸಿನಲ್ಲಿ ದುಃಖಬಡಿಸುತ್ತಾಳೆ. ತನ್ನಿಮಿತ್ಯ ಈ ಅರ್ಥ ಬಂದು
ಅವಿಧಿಯೆಂತ ಕರಸುತ್ತದೆ. ಇದು ಜ್ಞಾನಿಗಳಾದ ರಮಾ ಬ್ರಹ್ಮಾದಿಗಳಿಗೆ

ಸಮ್ಮತವಲ್ಲ.

ಹಾಗಾದರೆ ವಿಹಿತವಾದ ಅರ್ಥ ದಾವುದು ಎಂದರೆ, ಶ್ರೀ ಪರಮಾತ್ಮನ ದಶೆಯಿಂದ ಜೀವನು ಭಿನ್ನನು. ಪ್ರಕೃತಿಕಾಲ ಕರ್ಮ ಅನುಸರಿಸಿ, ಸ್ಥೂಲ ವಾದ ದೇಹಗಳು ಧರಿಸಿ, ಪ್ರಾರಬ್ಧ ಕರ್ಮಮೂಲದಿಂದ, ಸಂಚಿತ ಆಗಾಮಿ ಪ್ರಾರಬ್ಧಕರ್ಮ ಪುಣ್ಯ ಪಾಪಗಳ ಮೂಲವಾದ ಲಿಂಗದೇಹದಿಂದ, ನಿರ್ದುಷ್ಟ ರಾಗಿ, ಫಲಗಳನ್ನುಂಡು ತೀರಿಸಿದ ತರುವಾಯ, ಪರಮಾತ್ಮನ ರುಕ್ಮವರ್ಣವುಳ್ಳ ರೂಪವನ್ನು ನೋಡಿ, ಮೇಘದಿಂದ ನಿವೃತ್ತನಾದ ಸೂರ್ಯನೋಪಾದೆಯಲಿ ಪ್ರಕಾಶಮಾನನಾಗಿ ನಿರ್ದುಷ್ಟಾನಂದತ್ವಾದಿ "ಬ್ರಹ್ಮಸಾಮ್ಯಮುಪೈತಿ." ಬ್ರಹ್ಮ ಸಾಮ್ಯವೆಂದರೆ, ವೈಕುಂಠದಲ್ಲಿ ಮುಕ್ತರಾದವರಿಗೆ ಐದು ಪ್ರಕಾರವಾದಂಥ ಮುಕ್ತಿ ಆಗುತ್ತದೆ. ಅದು ಹೇಗಂದರೆ, ಸಾಲೋಕ್ಯ, ಸಾರೋಪ್ಯ, ಸಾಮೀಪ್ಯ, ಸಾಯುಜ್ಯ, ಸಾಧಿಷ್ಣ್ಯ, ಹೀಗೆ ಐದು ಪ್ರಕಾರದಿಂದ, ದೇವ, ಋಷಿಪಿತೃಗಂಧರ್ವ ರಾಜರು, ಮಾನುಷೋತ್ತುಮಾ ಎಂಬೊ ಐದುವಿಧ ಜೀವರುಗಳು, ಅವರವರ ಯೋಗ್ಯತಾನುಸರಿಸಿ ಸುಖಬಡುತ್ತಾರೆ. "ಸಾಮ್ಯಮುಪೈತಿ" ಎಂಬೋ ಪದ ದಿಂದ ಏನು ಅರ್ಥವೆಂದರೆ, ಮುಕ್ತಿಯಲ್ಲಿ ಪರಮಾತ್ಮನ ಸದೃಶವಾದ ರೂಪ ವನ್ನು ಮಾತ್ರ ಐದು ತಾನೆ. "ಉಪ" ಎಂದರೆ ಮುಕ್ತಿಯಲ್ಲಿ ಪರಮಾತ್ಮನ ಸಾಮಿಪ್ಯವನ್ನು " ಏತಿ " ಐದತಾನೆ. ಯೆಂತ ನಿಶ್ಚಿತಾರ್ಥ. ಹೀಗೆ ಹೇಳೋಣ ದರಿಂದಲೂನೂ, ಸಾಮ್ಯ ಬಂತಲ್ಲಾ ! ಯಂತ ಶಂಕಾ ಬಂದರೆ,ಅದಕ್ಕೆ ಹೇಳು ತ್ತಾರೆ. ಒಂದು ದೃಷ್ಟಾಂತ ಹೇಳೋಣದರಿಂದ, ತದ್ವಸ್ತು ವಿಶಿಷ್ಟವು ಹೇಳ ಬಾರದು. ಯಾಕಂದರೆ ಪ್ರಥಮತಃ ಉತ್ತಮ ದೃಷ್ಟಾಂತ ಹೇಳುತ್ತಾರೆ.

ಪರಮಾತ್ಮನ ಪ್ರಭಾ ಎಂಥದು ಎಂದರೆ, ಅನಂತ ಸೂರ್ಯಚಂದ್ರಾಗ್ನಿ ಗಳ ಪ್ರಭೆಗೆ ಮಿರಿದಂಥಾದ್ದು. ಶ್ರುತಿ ಸ್ಮೃತಿಗಳಲಿ ಹೇಳುತಿರಲಿಕ್ಕಾಗಿ, ಅನಂತಾನಂತ ಸೂರ್ಯ ಚಂದ್ರಾಗ್ನಿಗಳ ಪ್ರಕಾಶಯುಕ್ತವಾದ-ರೂಪವನ್ನು ಚಿಂತನೆ ಮಾಡೋದರಗೋಸ್ಕರ ಜೀವರುಗಳಿಗೆ ಯೋಗ್ಯತಾ ಇಲ್ಲದೇ ಇದ್ದ ಪ್ರಯುಕ್ತ ಪ್ರಾಣಿಗಳ ಯೋಗ್ಯತಾ ವಿವಕ್ಷಾ ನೋಡಿ.

" ಉದ್ಯದ್ಭಾಸ್ವತ್ ಸಮಾಭಾಸಶ್ಚಿದಾನಂದೈಕ ದೇಹವಾನ್ ॥
ಚಕ್ರಶಂಖಗದಾಪದ್ಮಧರೋ ಧ್ಯೇಯೋಹಮೀಶ್ವರಃ " ॥



ಎಂತ ಉಕ್ತವಾಗೋ ಮಾತ್ರದಿಂದ, ಪರಮಾತ್ಮಗೆ ಇಷ್ಟೇ ಪ್ರಕಾರಯೆಂತ ಸಿದ್ಧಾಂತ ಹ್ಯಾಗೆ ಮಾಡಬಾರದೋ ಹಾಗೆ, "ನಹಿದೃಷ್ಟಾಂತೇ ಸರ್ವಸಾಮ್ಯಂ" ಎಂಬೋ ನ್ಯಾಯದಿಂದ ಸರ್ವಸಾಮ್ಯ ತಿಳಿಯಲಿಕ್ಕೆ ಬಾರದು. ಇದು ಉತ್ತಮ ದೃಷ್ಟಾಂತ. ಇನ್ನು ನೀಚ ದೃಷ್ಟಾಂತ ಹೇಳುತ್ತಾರೆ. ಸ್ತ್ರೀಮುಖಕ್ಕೆ ಚಂದ್ರ ಮುಖಿಯೆಂತ ದೃಷ್ಟಾಂತ ಹೇಳೋಣದರಿಂದ, ಚಂದ್ರನಲ್ಲಿ ಇದ್ದಂಥ ಧರ್ಮಗ ಳೆಲ್ಲ ಸ್ತ್ರೀ ಮುಖಕ್ಕೆ ಹೇಗೆ ಕೂಡ್ಯಾವು? ಅದಕ್ಕೇವೇ "ನಹಿದೃಷ್ಟಾಂತೇ ಸರ್ವ ಸಾಮ್ಯಂ" ಎಂತ ನಿರಾಕರಣ ಮಾಡಿ, ಅದರಲ್ಲಿ ಅಲ್ಪಗುಣ ವ್ಯಾಪ್ತಿ ಇರೋಣ ದರ ದಶೆಯಿಂದ ಸಾಮಾನ್ಯ ದೃಷ್ಟಾಂತ ತೆಗೆದುಕೊಂಡು ಇರುತ್ತಾರೆ. ಇದು ಬಹಳವಾದ ವಸ್ತುಗಳಲ್ಲಿ ರೂಢಿ ಇರುತ್ತದೆ. ಅದು ಹೇಗಂದರೆ ಒಬ್ಬ ಮನು ಷ್ಯನಲ್ಲಿ, ಮೇರು ಸಮಾನವಾದ ಸ್ಥಳ ಉಳ್ಳವ ಎಂತ ಹೇಳುತ್ತಾರೆ. ಬಲದಲ್ಲಿ ಅರ್ಜುನಗೆ ಸಮಾನನಾದವ ಯೆಂತ ಹೇಳುತ್ತಾರೆ. ದಾನದಲ್ಲಿ ಕರ್ಣಯೆಂತ ಹೇಳುತ್ತಾರೆ. ಕ್ಷಮಾದಲ್ಲಿ ಪೃಥ್ವಿಗೆ ಸಮಾನನಾದವ ಯೆಂತ ಹೇಳುತ್ತಾರೆ. ರೂಪದಲ್ಲಿ ಮನ್ಮಥಗೆ ಸಮಾನನಾದವ ಯೆಂತ ಹೇಳುತ್ತಾರೆ. ಐಶ್ವರ್ಯದಲ್ಲಿ ಇಂದ್ರಗೆ ಸಮಾನನಾದವ ಎಂತ ಹೇಳುತ್ತಾರೆ. ಏವಮಾದಿ ದೃಷ್ಟಾಂತಗಳಿಂದ ಯತ್ಕಿಂಚತ್ ಮನುಷ್ಯವಿಲಕ್ಷಣವಾದ ಗುಣಾಧಿಕ್ಯ ಕಾಂಬೋಣದರಿಂದ ಈ ಪ್ರಯೋಗಗಳು ನಡದಿರುತ್ತವೆ. ಇದು ಬಂದು ಸರ್ವಸಾಮ್ಯದಿಂದ ಹ್ಯಾಗೆ ತಿಳಿಯಬಾರದೋ ಹಾಗೆ ಮುಕ್ತಿಯಲ್ಲಿ ಸಾಕ್ಷಾತ್ ಸರ್ವಸ್ವತಂತ್ರನಾದ ಪರ ಮಾತ್ಮನ ಸರ್ವಸಾಮ್ಯವನ್ನು ಐದುಥಾನೆಂಬುವ, ಸಾಮ್ಯರೂಪವನ್ನು ಐದಿದ ಮುಕ್ತಿಗೆ ಸರ್ವಸಾಮ್ಯ ತಿಳಿಯಬಾರದು. ಏನು ಕಾರಣ ಎಂದರೆ, ಸಾಮ್ಯಶಬ್ದ ಯಂದರೆ, ಪರಮಾತ್ಮ ಪ್ರಾಣಿಗಳಮೇಲೆ ಪೂರ್ಣ ಅನುಗ್ರಹಮಾಡಿ, ಯೋಗ್ಯ ಚಿದಾನಂದಾತ್ಮಕವಾದ ದೇಹವನ್ನು ವ್ಯಕ್ತ ಮಾಡುತ್ತಾನೆ. ಅದು ಎಂಥದು ಎಂದರೆ ಪರಮಾತ್ಮನ ಸದೃಶ ಚತುರ್ಭುಜ ಉಳ್ಳಂಥಾ, ಶ್ರೀವತ್ಸಕೌಸ್ತುಭವ್ಯತಿ ರಿಕ್ತವಾದ ಚಿನ್ಹಗಳುಳ್ಳಂಥಾದ್ದು. ಆದ ಪ್ರಯುಕ್ತ ಅಲ್ಪಗುಣ ವ್ಯಾಪ್ತಿದಶೆ ಯಿಂದ, ಸಾಮ್ಯಯೆಂತ ಕರಸಿಕೊಳುತ್ತಾನೆಂತ ಸಿದ್ಧಾಂಥ ॥

ಶ್ರೀ ಕೃಷ್ಣಾರ್ಪಣಮಸ್ತು ॥

ಇಂಥ ಸಾಮ್ಯದಿಂದ, ಸೃಷ್ಟ್ಯಾದ್ಯಷ್ಟ ಕರ್ತೃತ್ವೋಪೇತನಾದ, ಸಕಲ ಗುಣಗಳಿಂದ ಪೂರ್ಣನಾದ ನಾರಾಯಣಗೆ, ಅಲ್ಪಗುಣ ಸಾಮ್ಯ ಐದಿದ ಜೀವ

ಸಮಾ ಎಂಬುವದು ಅವಿಹಿತವಾದಂಥಾದ್ದು.ಹೊರ್ತು ಸರ್ವರುಗಗಳಿಂದ ಸರ್ವ ಸಮ್ಮತವಾಗದೇ ಇದ್ದಂಥಾದ್ದು. ಚತುರ್ಭುಜತ್ವ, ಶಂಖ ಚಕ್ರಧರತ್ವ, ಪರ ಮಾತ್ಮನ ಸದೃಶವಾಗಿ ಇರೋಣದರಿಂದ ಆದರೂ, ಸಾಕ್ಷಾತ್ ನಾರಾಯಣಗೆ, ಜೀವ ಸಮನಲ್ಲ. ಅದು ಹೇಗೆಂದರೆ ಪರಮಾತ್ಮನ ಶಂಖಚಕ್ರ ಎಂಥವು ? ಎಂದರೆ, ಪರಮಾತ್ಮಾತ್ಮಕವಾದಂಥವು. ಪರಮಾತ್ಮಾತ್ಮಕತ್ವಹೇಳೋಣದರಿಂದ, ಈದಾವ ಶಂಖಚಕ್ರಗಳು ಚೇತನವಿಶಿಷ್ಟವಾದಂಥಾವಾಗಿ ಮಹತ್ಕಾರ್ಯ ಮಾಡ ಲ್ಪಟ್ಟಂಥವು.

|| ಶ್ರೀಮಧ್ವೇಶಾರ್ಪಣಮಸ್ತು ||

ಶ್ರೀಗುರು ವಿಜಯ ವಿಠ್ಠಲರ ಟೀಕಾ ಇಷ್ಟೇ ದೊರತಿದೆ. ಮುಂದಿನ ಗ್ರಂಥವು ದೊರೆತಿಲ್ಲ. ಇದರಲ್ಲಿರುವ ಪ್ರಮೇಯ, ಸೂಕ್ಷ್ಮ ಶಾಸ್ತ್ರಾರ್ಥ ವಿಚಾರ ಗಳ ಮನನ ಮಾಡಿ ಅರ್ಥ ತಿಳಿಯುವದೇ ಮಹತ್ವವಾದುದು.

(ಸಂಚಾಲಕ)



ಅಪರೋಕ್ಷ ಜ್ಞಾನಿಗಳಾದ

# ಶ್ರೀ ಗುರು ಶ್ರೀಶವಿಠಲರ ಶಿಷ್ಯರ ವ್ಯಾಖ್ಯಾನ

ಶ್ರೀಲಕ್ಷ್ಮೀನೃಸಿಂಹಾಯನಮಃ | ಶ್ರೀವೇದ ವ್ಯಾಸಾಯನಮಃ
ಶ್ರೀಹಯಗ್ರೀವಾಯನಮಃ | ಶ್ರೀ ಮದಾನಂದ ತೀರ್ಥ ಭಗವತ್ಪಾದಾ
ಚಾರ್ಯ ಗುರುಭ್ಯೋನಮಃ | ಶ್ರೀ ವಾದಿರಾಜ ಗುರುಭ್ಯೋನಮಃ
ಶ್ರೀಮದ್ಗುರುವರ ಶ್ರೀ ಟೀಕಾಕೃತ್ಪಾದಾಚಾರ್ಯ ಗುರುಭ್ಯೋನಮಃ

"ಭಕ್ತ್ಯಾದಿಗುಣ ಸಂಯುಕ್ತಂ ಭಕ್ತಾಭೀಷ್ಟ ಪ್ರದಾಯಕಂ |
ಪುರಂದರಗುರುಂ ವಂದೇ ದಾಸ ಶ್ರೇಷ್ಠಂ ದಯಾನಿಧಿಂ || ೧ ||

ಶ್ರೀ ಮದ್ಗುರುವರ ಶ್ರೀ ಪುರಂದರದಾಸರಾಯ ಗುರುಭ್ಯೋನಮಃ
ಶ್ರೀವಿಜಯದಾಸರಾಯ ಗುರುಭ್ಯೋನಮಃ | ಶ್ರೀಕಲ್ಲೂರ ವೈರಾಗ್ಯದಾಸರಿಗೆ ನಮೋನಮಃ |

"ದಾಸವರ್ಯಂ ದಯಾಯುಕ್ತಂ ದೂರೀಕೃತದುರಾಶಿಷಂ |
ಹರಿಕಥಾಮೃತವಕ್ತಾರಂ ಜಗನ್ನಾಥಗುರುಂ ಭಜೇ" || ೧ ||

ಶ್ರೀಮದಾಶುಕವಿಕುಲತಿಲಕ ಭಗವನ್ನಿಷ್ಠಪರರು, ಶ್ರೀಮದ್ವೇಂಕಟಾಚಲನಿವಾಸಿ ಶ್ರೀರಮಣಪಾದಾರವಿಂದಾರ್ಚಕರು, ಶ್ರೀಮನ್ನರಪಂಚಾನನಾತ್ಮಸಂಭವರು, ಶ್ರೀಮಜ್ಞಾನಭಕ್ತಿ ವೈರಾಗ್ಯಪೂರ್ಣರು, ಶ್ರೀಮದ್ಗುರುವರ್ಯದಾಸಾರ್ಯರು,ಶ್ರೀ ಮದ್ರಂಗವೊಲಿದ ದಾಸಾರ್ಯ ಮಹಾನುಭಾವಗಳವರು ವಿರಚಿಸಿದ ಹರಿಕಥಾ ಮೃತಸಾರ ವ್ಯಾಖ್ಯಾನ ಬರೆವದಕ್ಕೆ ಮಂಗಳಾಯಭವಂತು | ಜ್ಞಾನಭಕ್ತಿ ವೈರಾ ಗ್ಯಮಸ್ತು. ಶ್ರೀಮದ್ಗುರುವರ್ಯ ಕುಂಟೋಜೀ ದಾಸರಾಯ ಅಸ್ಮದ್ಗುರು ಚರಣಾರವಿಂದೇಭ್ಯೋನಮಃ

ಪೃಥ್ವೀಮಂಡಲಮಧ್ಯಸ್ಥಾಃ ಪೂರ್ಣಬೋಧಮತಾನುಗಾಃ |
ವೈಷ್ಣವಾಃ ವಿಷ್ಣುಹೃದಯಾಃ ತಾನ್ನಮಸ್ಯೇ ಗುರೂನ್ಮಮ ||

‡ ಶ್ರೀ ತತ್ವಪತಿ ಪ್ರಾಣೇಶಾಯನಮಃ || ದಾಸವರ್ಗಗರಿಗೆ ನಮೋನಮಃ||

‡ ಈ ಮಂಗಲಾಚರಣೆಯಿಂದ ಇವರಲ್ಲಿಪ್ಪಗುರುಭಕ್ತಿ ನಿರ್ಮಲಜ್ಞಾನವೆಷ್ಟಿದೆ ಎಂಬುವ ದನ್ನು ವಾಚಕರು ಊಹಿಸಬಹುದು. ಇಂಥ ಸುಜ್ಞಾನಿಗಳೇ ನಮಗೆ ತಾರಕರು.

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವದು ॥ ಪಲ್ಲ ॥

### ವ್ಯಾಖ್ಯಾನ

ಶ್ರೀ ಭಾವಿ ಸಮೀರಾಯನಮಃ । ಸಂತತಂ ಶ್ರೀರಸ್ತು ॥
ಶ್ರೀ ಗುರುಗಳ ಚರಣಾರವಿಂದಗಳಿಗೆ ನಮೋನಮಃ ।

**ಹರಿಕಥಾಮೃತಸಾರ**= ಹರಿ=ಶ್ರೀರಮಾಕಾಂತ. ಪ್ರಣವ ಪ್ರತಿಪಾದ್ಯ ಶ್ರೀ ಆದಿನಾರಾಯಣನೆಂಬೊ ಶ್ರೀಹರಿಸ್ಮರಣೆ ಸಕಲದೋಷ ಪರಿಹರಿಸಿ ಮುಕ್ತರನ್ನ ಮಾಡುವದು. ಶ್ರೀನಾರಾಯಣನ ಮಹಾತ್ಮ್ಯಜ್ಞಾನಪೂರ್ವಕ ಸುದೃಢ ಸ್ನೇಹೋ ಭಕ್ತಿಃ ಎಂಬೋ ಪ್ರಮಾಣಾನುಸಾರ ಹರಿಸ್ಮರಣೆ ಮಾಡೋಣದರಿಂದ ಅನಾದಿಯಿಂದ ಬದ್ಧವಾದ, ಸತ್ವರಜಸ್ತಮತ್ರಿಗುಣಾತ್ಮಕವಾದ ಲಿಂಗದೇಹ ಅವಿದ್ಯಾಪಟಲ ಹರಿದು, ಲಿಂಗದೇಹ ಭಂಗವಾಗುವದು. ಪುನಃ=ಮತ್ತು ಹರಿಸ್ಮರಣೆ, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಅರಿಷಡ್ವರ್ಗಗಳ ಖಂಡಿಸಿ, ಸ್ವರೂಪ ಸುಖ ವ್ಯಕ್ತ ಮಾಡುವದು. ಅಜ್ಞಾನವೆಂಬೋ ತೂಲರಾಶಿಗೆ ಅಗ್ನಿ ಸ್ಥಾನಿಯಾಗಿ ದಹಿಸಿಬಿಡುವದು. ಶ್ರೀ ಹರಿನಾಮ ಸ್ಮರಣೆಯಿಂದ ಸಕಲ ಸಾಧನ ಪೂರ್ಣವಾಗುವದು. ಶ್ರೀ ಹರಿನಾಮ ಸ್ಮರಣೆ ಇಂಥ ಮಾಹಾತ್ಮ್ಯವುಳ್ಳಂಥಾದ್ದು. ॥ ಪ್ರಮಾಣ ॥ " ನಾಮ್ನೋಸ್ತಿ ಯಾವತೀ ಶಕ್ತಿಃ ಪಾಪನಿರ್ಹರಣೇ ಹರೇಃ ॥ ತಾವತ್ಕರ್ತುಂ ನ ಶಕ್ನೋತಿ ಪಾತಕಂ ಪಾತಕೀಜನಃ" ॥ ಪೂರ್ವಪಕ್ಷ-ಜನರು ಹರಿಸ್ಮರಣೆ ಮಾಡುತ್ತಾರಲ್ಲ! ಅವರ ದೋಷ ಪರಿಹಾರವಾಗುವದಿಲ್ಲ. ಕಾರಣವೇನಂದರೆ, ಶ್ರೀರಮಾವಲ್ಲಭ ಶ್ರೀನಾರಾಯಣಸ್ಮರಣೆ ವಿಧಾನಪೂರ್ವಕ ಮಾಡಬೇಕು. ಶ್ರೀಹರಿ ಸರ್ವೋತ್ತಮ ಜ್ಞಾನದಿಂದ ತಾರತಮ್ಯ ಪಂಚಭೇದ ಶ್ರೀ ಗುರುಗಳಿಂದ ಶ್ರವಣ ಮಾಡಿ, ತದನುಸಾರವಾಗಿ ಮಾಹಾತ್ಮ್ಯ ಜ್ಞಾನಪೂರ್ವಕ ಪ್ರೇಮಾಸಕ್ತನಾಗಿ, ಶ್ರೀ ಹರಿ ಗುರುಗಳಲ್ಲಿ ಭಕ್ತಿಪುರಸ್ಸರ, ಸರ್ವತ್ರ ವ್ಯಾಪ್ತನಾದ ಸರ್ವಾಂತರ್ಯಾಮಿ ಶ್ರೀ ಆದಿನಾರಾಯಣನ ಸ್ಮರಣೆ ಸರ್ವದಾ ಸಕಲೇಂದ್ರಿಯಗಳಿಂದಲ್ಲಿ ಆಗೋಕರ್ಮಗಳ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಆದಿನಾರಾಯಣನ ಸ್ಮರಣೆಮಾಡಿ ಸಮರ್ಪಣ ಮಾಡಿದರೆ,ರಮಾಕಾಂತಅಜ್ಞಾನಾಖ್ಯಭವಬಂಧಪರಿಹರಿಸಿ ಮುಕ್ತಿಪ್ರದನಾಗುವ.



ತಮೋಧಿಕಾರಿಗಳು, ನಿತ್ಯಸಂಸಾರಿಗಳಾದ ಅಜ್ಞಾನಿಗಳು ತಜ್ಞಾನರಹಿತ ಪರಮಾತ್ಮನ ಸ್ಮರಣೆ ಮಾಡುತ್ತಾರಾದಕಾರಣ ಪರಿಹಾರವಾಗುವದಿಲ್ಲ. ಹಾಗಾದರೆ ಪರಮಾತ್ಮನ ನಾಮಸ್ಮರಣೆ ವೃಥಾಆಗಬಾರದಲ್ಲ! ಅಂದರೆ ಕಿಂಚಿತ್ತು ಐಹಿಕನಶ್ವರ ಸುಖವಾಗುತ್ತದೆ.

ಸತ್ವಾಧಿಕಾರಿಗಳಾದ ಮುಕ್ತಿಯೋಗ್ಯರು ಅಜ್ಞಾನದಿಂದ ಹರಿಸ್ಮರಣೆ ಮಾಡಿದಕಾಲಕ್ಕೂ, ಯೋಗ್ಯತಾನುಸಾರ, ಕಾಲಾನುಸಾರ ಯೋಗ್ಯರಿಗೆ ಭಕ್ತಾಭಿಮಾನಿಯಾದ ಶ್ರೀಹರಿಯು ಜ್ಞಾನಕ್ಕೆಕಾರಣನಾಗುವ. ಶ್ರೀಹರಿ ಸ್ಮರಣೆವೃಥಾ ಎಂದಿಗೂ ಆಗದು. ಸತ್ವಾಧಿಕಾರಿಗಳಾದ ಮುಕ್ತಿಯೋಗ್ಯರು ಹರಿಸರ್ವೋತ್ತಮ ತಾರತಮ್ಯ ಪಂಚಭೇದ ಜ್ಞಾನದಿಂದ, ಆದಿನಾರಾಯಣನ ವ್ಯಾಪ್ತತ್ವ ತಿಳಿದು ಹೇಗೆ ಹೇಗೆ ಅಧಿಕಾರಾನುಸಾರ ಉಪಾಸನ ಮಾಡ್ಯಾರು, ಆ ಪ್ರಕಾರ ಜ್ಞಾನ ಪ್ರಕಾಶವಾಗಿ ಅಜ್ಞಾನ ಪರಿಹಾರವಾಗಿ ಹರಿಸ್ಮರಣೆಯಿಂದ ಮುಕ್ತರಾಗುವರು. ಕಾರಣ ಶ್ರೀಸ್ಮರಣೆಯಲ್ಲಿ ಇಂಥ ಮಹಿಮೆ ಉಂಟು.

ಸಕಲ ಸಾಧನಗಳೊಳಗೆ ಮುಖ್ಯಸಾಧನ ಶ್ರೀನಾಮಸ್ಮರಣೆ. ಪ್ರಮಾಣ॥ "ಯಸ್ಯಸ್ಮೃತ್ಯಾ ಚ ನಾಮೋಕ್ತ್ಯಾ ತಪಃಸಂಧ್ಯಾಕ್ರಿಯಾದಿಷು ನ್ಯೂನಂಸಂಪೂರ್ಣತಾಂ ಯಾತಿ" । " ಶ್ರೀ ರಮಾದೇವಿಯು ಸ್ವಾಂತರ್ಗತನಾದ ಬಿಂಬಮೂರ್ತಿ ಸ್ಮರಣೆಯಿಂದ ಅಕ್ಷರಳಾಗಿ ನಿತ್ಯ ಮುಕ್ತಳೆನಿಸಿದ್ದಾಳೆ. ಶ್ರೀ ಬ್ರಹ್ಮಾದಿಗಳು ಹರಿ ಸ್ಮರಣೆಯಿಂದಲೇ ತಮ್ಮ ತಮ್ಮ ಪದ ಹೊಂದಿ ಮುಕ್ತರಾಗಿದ್ದಾರೆ. ಕಾರಣ ಶ್ರೀಹರಿಸ್ಮರಣೆ ಮಹಿಮೆ ಇಂಥಾದ್ದು.

ಶ್ರೀ ಹರಿ ಮಾಹಾತ್ಮ್ಯ ಹೇಗಂದರೆ ಶ್ರೀರಮಾವಲ್ಲಭ ಆದಿನಾರಾಯಣ, ಶ್ರೀರಮಾ ಬ್ರಹ್ಮ ರುದ್ರೇಂದ್ರಾದಿಗಳಿಂದ ಪೂಜ್ಯನಾಗಿ, ಸ್ತೋತ್ರಮಾಡಿಸಿಕೊಳ್ಳಲ್ಪಟ್ಟಂಥಾಸ್ವಾಮಿ, ಕ್ಷರಾಕ್ಷರಪುರುಷರಗಳಿಗೆ ಸರ್ವೋತ್ತಮ,ಸರ್ವಾಂತರ್ಯಾಮಿ ಚೇತನಾಚೇತನ ಜಗತ್ಯಕ್ಕೆಒಡೆಯ,ಜೀವರಿಗೆ ಜೀವನಪ್ರದ,ಜೀವರೂಪಿ,ಸರ್ವಾರಾಧಾರಕ, ಇಂಥಾಮಹಾಮಹಿಮೋಪೇತ ಶ್ರೀ ಆದಿನಾರಾಯಣ. ಇಂಥಾತನ ಸ್ಮರಣೆ ಬಂದು ಮುಕ್ತಿಪ್ರದವಾಗುವದು.

**ಕಥಾಮೃತಸಾರ**= ಶ್ರೀಸ್ವಾಮಿ ಹರಿಯ ಕಥಾ ಎಂಥಾದ್ದು? ಶ್ರೀರಮಾಕಾಂತ ನಾರಾಯಣ ಕ್ರೀಡಾ ಮಾಡುವದೇ ಸರ್ವೇಶ್ವರನ ಕಥಾ; ಆಸೃಜ್ಯರಾದ ಬ್ರಹ್ಮಾದಿ ತೃಣಾಂತ ಅನಂತವಿಧ ಜೀವರ, ಸೃಷ್ಟಿ ಮಾಡೋಣ. ಸ್ಥಿತಿ ಹಾಗೆ

ಬ್ರಹ್ಮಾದಿಗಳಿಗೆ ಮುಕ್ತಿಪ್ರದನಾಗಿ ಸ್ವಪದ ಕೊಡೋಣ; ಈ ಪ್ರಕಾರ ಶ್ರೀರಮಾಕಾಂತ ಶ್ರೀ ಕೃಷ್ಣಲೀಲಾ ಮಾಡುವದೇ ಸ್ವಾಮಿಕಥಾ. ಪೂರ್ವೋಕ್ತ ಪ್ರಕಾರ ಶ್ರೀಹರಿಸ್ಮರಣೆ ಪೂರ್ವಕ ಶ್ರೀ ರುಕ್ಮಿಣೀಪತಿ ಶ್ರೀಗೋಪಾಲಕೃಷ್ಣ ಲೀಲಾ ಮಾಡುವ ಕಥಾ ಭಾಗವನ್ನು, ತದನುಸಾರವಾಗಿ ಮುಕ್ತಿಯೋಗ್ಯರಾದ ಭಗವದ್ಭಕ್ತರು ಕಥನ ಮಾಡಿದರೆ ಇಹಪರದಲ್ಲಿ ಆನಂದೋದ್ರೇಕವಾಗುವದು.

**ಅಮೃತಸಾರ**= ಆದಿನಾರಾಯಣನ ಕಥಾಮೃತಸಾರ, ಜ್ಞಾನಿಗಳು ಪರಮಾನಂದದಿಂದ ಪರಮಾತ್ಮನ್ನ ಕೊಂಡಾಡುವದು. ಶ್ರೀಗುರುಗಳವರ ಮುಖಕಮಲದಿಂದ ಸ್ತೋತ್ರ ಮಾಡುವಂಥ ಕಥಾಮೃತವನ್ನು, ಸ್ವಾಧಮರಾದವರು ಪಾನಮಾಡಿದರೆ, ಹರಿಸರ್ವೋತ್ತಮ ತಾರತಮ್ಯ ತಿಳದು ಭವಾಖ್ಯವಾದ ಅನಿತ್ಯ ಸಂಸಾರದಲ್ಲಿ ಜನನ ಮರಣವೆಂಬೋ ಮೃತಿಯನ್ನು ಪರಿಹರವುಳ್ಳವರಾಗಿ, ನಿತ್ಯವಾದ ಸ್ವರೂಪ ಸುಖ ವ್ಯಕ್ತಿಯಾಗಿ, ಅಮೃತವೆಂಬೋ ಮುಕ್ತಿಯನ್ನು ಶ್ರೀಹರಿ ಕಥಾಮೃತ ತತ್ಸಾರಪಾನ ಮಾಡಿ, ವೈಕುಂಠಪುರದಲ್ಲಿ ವಾಸವಾಗಿ ಪುನಃ ಜನನ ಮರಣಾದಿಗಳಿಂದ ದೂರನಾಗಿ, ಚಿತ್ಸ್ವರೂಪ ಅಚ್ಛಸುಖವೆಂಬೋ ಆನಂದಾವಿರ್ಭಾವ ಉಳ್ಳವರಾಗುವರು. ಪ್ರಮಾಣ ||ನಾರದಉವಾಚ|| ಅಮೃತತ್ವಂನೀಯತೆಯಸ್ಮಾತ್ ಹರೇರ್ನಾಮಾಮೃತಂಶುಭಂ||ಇಂಥಾ ಮಹಾಮಹಿಮನಾದ ಶ್ರೀನಾರಾಯಣನ ಕಥಾಮೃತ ತತ್ಸಾರವನ್ನು, ಗುರುಗಳ ಕರುಣದಿಂದ= ಶ್ರೀ ರಮಾಕಾಂತ ಆದಿನಾರಾಯಣನ ಕಥಾ ಕೇವಲ ಅಮೃತಸಾರವನ್ನು ಗುರುಗಳ ಅನುಗ್ರಹದಿಂದ, ಆಪನಿತು ಪೇಳುವೆ "ಶ್ರೀಹರಿವಾಯುಗಳು"ಪ್ರೇರಿಸಿದಷ್ಟು ಯೋಗ್ಯತಾನುಸಾರ ಶ್ರೀ ಆದಿನಾರಾಯಣನ ಕಥಾಭಾಗವನ್ನು ತೋರಿದಷ್ಟು ಕೊಂಡಾಡುವೆ. 'ಪರಮಭಗವದ್ಭಕ್ತರಿದನು = ಕೇವಲೋತ್ತಮರಾದ ಭಗವದ್ಭಕ್ತರು ಶ್ರೀ ಹರಿ ಕಥಾಮೃತಸಾರವನ್ನು ಪರಮಾದರದಿ ಕೇಳುವದು, ಭಕ್ತಿ ಪುರಸ್ಸರವಾಗಿ ಪರಮಾದರದಿಂದ ಆಸಕ್ತರಾಗಿ ಶ್ರವಣ ಮಾಡಿರೆಂದು, ಅಧಿಕಾರಿಗಳಾದ ಸ್ವಾಧಮ ಭಗವದ್ಭಕ್ತರಿಗೆ ಉಪದೇಶ ಮಾಡಿದರು. ಶ್ರೀಮದ್ಗುರುವರ ಜಗನ್ನಾಥದಾಸರು ಹರಿಕಥಾಮೃತಸಾರ ಪ್ರಥಮದಲ್ಲಿ ಸೂಚಿಸಿದ್ದು, "ಭಕ್ತಿಪುರಸ್ಸರ ಶ್ರವಣ ಮಾಡೋಣದರಿಂದ ಮುಕ್ತರಾಗುವರು"ಪ್ರಮಾಣಗಳು ಯೇಸ್ಮರಂತಿ ಸದಾವಿಷ್ಣುಂ ಶಂಖ ಚಕ್ರಗಧಾಧರಂ|| ಸರ್ವಪಾಪವಿನಿರ್ಮುಕ್ತಾಃ ಪರಂ ಬ್ರಹ್ಮ ವಿಂಶತಿ ತೇ||



**ಪದ್ಯ ೧**– ಶ್ರೀ ಅಂದರೆ ಜ್ಞಾನ ಸಂಪತ್ತು, ಶ್ರೀ ರಮಾದೇವಿಯರಿಗೆ ಶ್ರೀಶಬ್ದ ಮುಖ್ಯವಾಗಿ ಉಂಟಾಗುತ್ತದೆ. ಶ್ರೀರಮಾದೇವಿ ಬ್ರಹ್ಮಾದಿಗಳ ಜ್ಞಾನ ಸಂಪತ್ತಿಗೆ ಅಭಿಮಾನಿಗಳು; ಕಾರಣ ರಮಾಶ್ರೀ ಎಂದುಕರೆಸುತ್ತಾಳೆ. ಶ್ರೀರಮಾ ಆದಿನಾರಾಯಣನ ಮಾಹಾತ್ಮೆಕೊಂಡಾಡೋ ವಿಷಯವಾಗಿ"ಜ್ಞಾನ ಭಕ್ತ್ಯಾದಿ ಮಂಗಳಕರವಾದ ಗುಣಗಳುಳ್ಳ ಜ್ಞಾನ ಸಂಪತ್ತು ಉಳ್ಳಾಕೆ" ಶ್ರೀ ಎಂದು ಕರೆಸುತ್ತಾಳೆ. ಈ ಪ್ರಕಾರ ಜ್ಞಾನವುಳ್ಳ ಶ್ರೀರಮಾದೇವಿಯರ ಕರಕಮಲ=ಕರಪದ್ಮಗಳಿಂದ ಪೂಜಿತ, ಚಾರುಚರಣ ಸರೋಜ=ಪೂಜಾ ಮಾಡಿಸಿಕೊಳ್ಳುವಂಥ ಚಾರು ಮನೋಹರವಾದ ಶ್ರೀಆದಿನಾರಾಯಣನಪಾದಪದ್ಮಗಳು. ಶ್ರೀರಮಣಿ= ಜ್ಞಾನಕ್ಕೆ ಪರಮುಮುಖ್ಯ ಕಾರಣ ನಾರಾಯಣ, ಷಡ್ಗುಣೈಶ್ವರ್ಯ ಸಂಪನ್ನ ಪೂರ್ಣ ಜ್ಞಾನಾನಂದಾದಿಗಳ ಸಂಪತ್ತಿಗೆ ಪರಮ ಮುಖ್ಯ ಕಾರಣನಾದ, ಶ್ರೀಆದಿನಾರಾಯಣನಲ್ಲಿ, ಸರ್ವದಾ ರಮಿಸುತ್ತಳಾದಕಾರಣ, ನಿತ್ಯ ಮುಕ್ತಳಾದ ರಮಾದೇವಿಯರು ಶ್ರೀರಮಣಿ ಎಂದುಕರಸುತ್ತಾಳೆ. ಅಥವಾ ಪರಮುಮುಖ್ಯ ವೃತ್ತಿಯಿಂದ ಆದಿನಾರಾಯಣ ವಕ್ಷಸ್ಥಳ ವಾಸಿಯಾದ ಶ್ರೀಲಕ್ಷ್ಮೀದೇವಿಯ ಬಿಂಬನಾದ ಶ್ರೀ ರೂಪಿಹರಿಯು ವಿಜ್ಞಾನಮಯನು ಆನಂದಮಯದಿಂದ ಸ್ವರಮಣನಾದ ಕಾರಣ ಶ್ರೀಶಬ್ದವಾಚ್ಯನು. ಈ ಪ್ರಕಾರ ಮಹಾಮಹಿಮಾ ಜ್ಞಾನ ಸಂಪತ್ತು ಉಳ್ಳ, ಶ್ರೀ ರಮಾ ಕರಕಮಲಗಳಿಂದ ನಿರಂತರ ಪೂಜಾ ಮಾಡಿಸಿಕೊಳ್ಳುವ, ಮನೋಹರವಾದ ಶ್ರೀರಮಾಪತಿ ಆದಿನಾರಾಯಣ ಪಾದ ಪದ್ಮಗಳು. ಶ್ರೀರಮಣಿ– ಜ್ಞಾನಕ್ಕೆ ಮುಖ್ಯ ಕಾರಣ ನಾರಾಯಣ ಷಡ್ಗುಣೈಶ್ವರ್ಯ ಸಂಪನ್ನ-ಪೂರ್ಣ ಜ್ಞಾನಾನಂದಾದಿಗಳ ಸಂಪತ್ತಿಗೆ ಮುಖ್ಯ ಕಾರಣನಾದ ಆದಿನಾರಾಯಣನಲ್ಲಿ ಸರ್ವದಾ ರಮಿಸುತ್ತಾಳಾದ ಕಾರಣ ನಿತ್ಯ ಮುಕ್ತಳಾದ ಶ್ರೀರಮಾದೇವಿಯರು ಶ್ರೀರಮಣಿಯೆಂದು ಕರೆಸುತ್ತಾಳೆ. ಈ ಪ್ರಕಾರ ಮಹಾಮಹಿಮಾ ಶ್ರೀನಾರಾಯಣನ ಜ್ಞಾನಸಂಪತ್ತು ಉಳ್ಳಂಥ ಶ್ರೀ ರಮಾದೇವಿಯರ ಕರಕಮಲಗಳಿಂದ ಪೂಜಾ ಮಾಡಿಸಿಕೊಳ್ಳುವಂಥ ಮನೋಹರತಮವಾದ ಪಾದಪದ್ಮಗಳುಳ್ಳವನು. ಬ್ರಹ್ಮಸಮೀರವಾಣಿ ಫಣೀಂದ್ರ ಭವೀಂದ್ರಮುಖವಿನುತ"||ಬ್ರಹ್ಮ=ಚತುರ್ಮುಖ ಉಳ್ಳಂಥಬ್ರಹ್ಮನಿಂದ, ಸಮೀರ=ಸರ್ವ ಜೀವೋತ್ತಮನಾದ ವಾಯುದೇವರಿಂದ ಗರುಡ ಶೇಷ ರುದ್ರೇಂದ್ರ ಪ್ರಮುಖರಿಂದಮುಖ್ಯರಿಂದ ನಮಿಸಿಕೊಳ್ಳುವಂಥವನು. ಅಥವಾ ಸ್ತೋತ್ರ ಮಾಡಿಸಿಕೊಳ್ಳುವಂಥ ಆದಿನಾರಾಯಣನ-ಪಾದ ಪದ್ಮಗಳು.

ಶ್ರೀರಮಾ ಬ್ರಹ್ಮಾದಿ ದೇವತೆಗಳಿಗೆ ತಾರತಮ್ಯವದೆ. ಶ್ರೀ ನಾರಾಯಣನ ಪಾದಕಮಲಗಳು ಒಂದೇ ಪ್ರಕಾರ ಸ್ತೋತ್ರ ಹೇಗೆ ಮಾಡುತ್ತಾರೆಂಬ ಶಂಕಾ ಬಂದರೆ, ಹರಿ ಸರ್ವೋತ್ತಮ ಪಂಚಭೇದಯುಕ್ತವಾಗಿ, ಪೊಂದಿಬಾಹೋಹಾಗೆ, ಶ್ರೀಮನ್ ಮಹಾಹರಿಕಥಾಮೃತಸಾರ. ಈ ಮಹಾಗ್ರಂಥದ ಪ್ರಥಮ ಪೀಠಿಕಾಧ್ಯಾಯದಲ್ಲಿ ಪ್ರಥಮ ಪದ್ಯದಲ್ಲಿ, ಶ್ರೀಮದಾಶುಕವಿಕುಲತಿಲಕ ಭಗವನ್ನಿಷ ಶ್ರೀ ವೆಂಕಟಾಚಲ ನಿವಾಸ ಶ್ರೀರಮಣ ಪಾದಾರವಿಂದಾರ್ಚಕರು, ಶ್ರೀಮನ್ನರ ಪಂಚಾನನಾತ್ಮಸಂಭವರು ಶ್ರೀಮಜ್ಞಾನ ಭಕ್ತಿ ವೈರಾಗ್ಯಪೂರ್ಣರು ಶ್ರೀಮದ್ಗುರುವರರು ಶ್ರೀಗುರು ಜಗನ್ನಾಥದಾಸರಾಯ ಮಹಾನುಭಾವರು ಕರತಳಾಮಲಕ ಮಾಡಿ ವೇದಶಾಸ್ತ್ರಗಳ, ತದನುಸಾರವಾಗಿ ವಿವರಿಸಿದ್ದಾರೆ. ಅಂದರೆ ಜ್ಞಾನ ಸಂಪತ್ತು ಮುಖ್ಯ, ಜ್ಞಾನಾದಿ ಸಂಪತ್ತಿಗೆ ಜ್ಞಾನಪ್ರದ ಶ್ರೀ ನಾರಾಯಣನೇ ಮುಖ್ಯ. ಅನಂತಾನಂತ ರೂಪಾತ್ಮಕ ಶ್ರೀರಮೇಶ ಲೋಕೇಶ, ಜಗತ್ಯದಲ್ಲಿ ಕ್ಷರಾಕ್ಷರಗಳಿಗೆ ಈಶ, ಶ್ರೀ ಪರಮಾತ್ಮನೇ ಸರ್ವೋತ್ತಮ. ಶ್ರೀರಮಣಿ ಶ್ರೀ ನಾರಾಯಣನ ತರುವಾಯ, ಶ್ರೀರಮಾ ಅಕ್ಷರಳು. ನಿತ್ಯಮುಕ್ತಳಾದ ಶ್ರೀ ರಮಾದೇವಿಯರ ಕರಕಮಲಗಳಿಂದ ಪೂಜಾ ಮಾಡಿಸಿಕೊಳುವಂಥ ಪಾದಪದ್ಮಗಳುಳ್ಳಶ್ರೀನಾರಾಯಣ ಸರ್ವೋತ್ತಮ,ಶ್ರೀರಮಾ ತಾರತಮ್ಯದಿಂದ ಶ್ರೀನಾರಾಯಣಗೆ ಅನಂತಗುಣಕಡಿಮಿ. ಶ್ರೀರಮಾದೇವಿಯ, ತರುವಾಯ ಬ್ರಹ್ಮ ವಾಯುಗಳು. ರಮಾದೇವಿ ಬ್ರಹ್ಮಾದಿಗಳ ಅಂತರ್ಗತಳು. ಅವ್ಯಕ್ತ ತತ್ವಕ್ಕೆ ನಿಯಾಮಕಳು. ಆನಂದಮಯ ಕೋಶಕ್ಕೆ ಅಭಿಮಾನಿ. ಬ್ರಹ್ಮಾಂತರ್ಗತಳಾಗಿ ಸಕಲ ಅವಯವಗಳಿಂದಲ್ಲ್ಯೂ ಶ್ರೀನಾರಾಯಣನ ವಿರಾಡ್ರೂಪ, ಸ್ವದೇಹ ಸ್ವಬಿಂಬಾಭಿನ್ನರೂಪಿ ಪರಮಾತ್ಮನ ಪೂಜಾ ಮಾಡುತ್ತಾಳೆ.

ಈ ಪೂಜಾ ಬ್ರಹ್ಮಾದಿಗಳಿಗೆ ಕೂಡದು. ಬ್ರಹ್ಮ ವಾಯು ವಿಜ್ಞಾನ ಕೋಶಕ್ಕೆ ಅಭಿಮಾನಿಗಳು, ಮಹತ್ತತ್ವಕ್ಕೆ ನಿಯಾಮಕರು. ಗರುಡ ಶೇಷಾದಿಗಳಲ್ಲಿ ೨೪ ತತ್ವಕ್ಕೆ ನಿಯಾಮಕರಾಗಿ, ಶ್ರೀರಮಾಂತರ್ಗತ: ಶ್ರೀ ನಾರಾಯಣನ ಪಾದಕಮಲಗಳ ಸ್ತೋತ್ರ ಮಾಡುತ್ತಾ ಪೂಜಾ ಮಾಡುತ್ತಾರೆ. ರಮಾದೇವೇರ ವಿನಾ ಪ್ರತ್ಯೇಕ ಪೂಜಾ ಬ್ರಹ್ಮ ವಾಯುಗಳಿಗೆ ಕೂಡದು. ಕಾರಣ ಶ್ರೀ ರಮಾದೇವಿಯರಿಗೆ ಬ್ರಹ್ಮವಾಯುಗಳಿಗೆ ತರತಮ ಭಾವ.

ಬ್ರಹ್ಮ ವಾಯುಗಳ ತರುವಾಯ ಗರುಡ ಶೇಷ ರುದ್ರಾದಿಗಳು. ಇವರು



ಮುಖ್ಯ ಪ್ರಾಣಾಂತರ್ಗತ ಶ್ರೀಲಕ್ಷ್ಮೀ ನಾರಾಯಣನ ಪಾದಪದ್ಮಗಳ ಸ್ತೋತ್ರಾರ್ಹರು. ಗರುಡ ಶೇಷ ರುದ್ರರು ಅಹಂಕಾರ ತತ್ವಕ್ಕೆ ನಿಯಾಮಕರು. ಮನೋಮಯಕೋಶಕ್ಕೆ ಅಭಿಮಾನಿಗಳು. ಏಕಾದಶೇಂದ್ರಿಯಗಳಿಂದಾಗೋ ಕರ್ಮಗಳ ಶ್ರೀಗುರು ಮಧ್ವಾಂತರ್ಗತ ಶ್ರೀರಮಾವಲ್ಲಭನ ಪೂಜಾ ಮಾಡುತ್ತಾರೆ. ಬ್ರಹ್ಮ ವಾಯುದ್ವಾರವೇ ಮುಖ್ಯ; ಪ್ರತ್ಯೇಕ ಪೂಜಾ ಇಲ್ಲ. ಗರುಡ ಶೇಷ ರುದ್ರರಿಗೆ ತಾರತಮ್ಯದಿಂದ ಭೇದ ಹೇಳುತ್ತಾರೆ. ಇವರು ಸಮಾನಕಕ್ಷದಲ್ಲಿದ್ದರೂ ಸಾಧನಾದಿಗಳು ಬೇರೆ. ಗರುಡ ಶೇಷ ರುದ್ರಾದಿಗಳ ತರುವಾಯ ಇಂದ್ರ ಕಾಮರು ಇವರು ಮನೋಭಿಮಾನಿಗಳು. ಇಂದ್ರ ಕಾಮ ಶ್ರೀ ನಾರಾಯಣನ ಸ್ತೋತ್ರ ಮಾಡಬೇಕಾದರೆ ಗರುಡಶೇಷ ರುದ್ರಾಂತರ್ಗತ ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಲಕ್ಷ್ಮಿಕಾಂತ ನಾರಾಯಣನ ಪಾದಕಮಲಗಳ ಸ್ತೋತ್ರ ಮಾಡುತ್ತ ಪೂಜಾ ಮಾಡುತ್ತಾರೆ.

ಇವರ ತರುವಾಯ ಪಂಚಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯ ಪಂಚತನ್ಮಾತ್ರ ಪಂಚಭೂತಗಳಭಿಮಾನಿ ದೇವತೆಗಳು. ಪೂರ್ವೋಕ್ತ ಪ್ರಕಾರ ತಾರತಮ್ಯಾನುಸಾರು ಆದಿನಾರಾಯಣ ಪೂಜಾ ಇಂದ್ರಿಯಾಭಿಮಾನಿ ದೇವತೆಗಳು ಸ್ತೋತ್ರ ಮಾಡುತ್ತಾರೆ.

ಮಾನುಷೋತ್ತಮರ ಆರಂಭವಾಗಿ ಬ್ರಹ್ಮ ಪರಿಯಂತರ ತಮ್ಮ ತಮ್ಮ ಬಿಂಬಮೂರ್ತಿ ಪರಮಾತ್ಮನ ಪೂಜಾ ಸ್ತೋತ್ರ ಮಾಡಿ ಮುಕ್ತರಾಗುತ್ತಾರೆ. ಉಪಾಸನಾ ಮಾಡಬೇಕಾದರೆ, ಸ್ವಾಧಮರು ಸೋತ್ತಮರ ಅಂತರ್ಗತ ಶ್ರೀ ನಾರಾಯಣನ, ಯೋಗ್ಯತಾನುಸಾರ ಪೂಜಾ ಮಾಡಿ, ತಮ್ಮ ತಮ್ಮ ಪದದಿಂದ ಮುಕ್ತರಾಗುತ್ತಾರೆ.

**ಪೂರ್ವಪಕ್ಷ** = ಸ್ವಾಧಮರಿಗೂ ಶ್ರೀ ನಾರಾಯಣ ಬಿಂಬಮೂರ್ತಿ; ಸೋತ್ತಮರಿಗೂ ಸಹ ಶ್ರೀ ನಾರಾಯಣನೇ ಬಿಂಬ. ತಮ್ಮ ತಮ್ಮ ಬಿಂಬ ಮೂರ್ತಿಯನ್ನು ಉತ್ತಮರ ದ್ವಾರ ಬಿಟ್ಟು ತಾವೇ ಯಾಕೆ ಪೂಜಾ ಮಾಡಬಾರದೆಂಬುವ ಶಂಕಾ ಬಂದರೆ; ಪರಮಾತ್ಮನ ಸಂಕಲ್ಪ ಹಾಗೇ ಇರುತ್ತದೆ. ಸ್ವೋತ್ತಮರ ವಿನಾ ಸ್ವಾಧಮರು ಪ್ರತ್ಯೇಕ ನಾರಾಯಣನ ಪೂಜಾ ಮಾಡಕೂಡದು. ಸ್ವೋತ್ತಮರು ಅವರವರಿಗೆ ಬಿಂಬರಾಗಿದ್ದಾರೆ. ಮುಖ್ಯತಯಾ ಕೇವಲ ಹರಿಯೇ ಬಿಂಬನಾದರೂ ಸಕಲ ಷಟ್‌ಕರ್ಮಾದಿಗಳು ಮಾಡಿ, ಫಲ

ರಾಹಿತ್ಯರಾಗಿ ಈ ಷಟ್ಕರ್ಮಾದಿಗಳು "ಮದ್ಗುರ್ವಂತರ್ಗತ ಭಾರತೀರಮಣ
ಮುಖ್ಯ ಪ್ರಾಣಾಂತರ್ಗತ ಶ್ರೀ ಲಕ್ಷ್ಮೀ ನಾರಾಯಣ ಪ್ರೇರಣಯಾ ಶ್ರೀ ಲಕ್ಷ್ಮೀ
ನಾರಾಯಣ ಪ್ರೀತ್ಯರ್ಥಂ ಶ್ರೀ ಕೃಷ್ಣಾರ್ಪಣಮಸ್ತು". ಈಪ್ರಕಾರ ಸಮರ್ಪಣ
ಮಾಡಿದರೆ ಶ್ರೀ ಹರಿವಾಯುಗಳು ಪ್ರೀತರಾಗುತ್ತಾರೆ. ಗುರುಗಳ ವಿನಾ
ಪೂಜಾ ಕೂಡದು. ಶ್ರೀಹರಿಯು ಸ್ವಾಧಮರಂತರ್ಗತನಾಗಿ ಪೂಜಾ ಮಾಡಿಸಿ
ಕೊಂಡು, ಸೋತ್ತಮರಂತರ್ಗತನಾಗಿ ಶ್ರೀ ನಾರಾಯಣಾ ಪೂಜಾ ಸ್ವೀಕಾರ
ಮಾಡಿ ಪ್ರೀತನಾಗುತ್ತಾನೆ. ಪೂಜ್ಯ ಪೂಜ್ಯಕರಲ್ಲಿ ಪೂಜ್ಯ ಪೂಜಕನೆನಿಸಿ,
ಪೂಜಾಸಾಧನ ಪದಾರ್ಥಗಳಲ್ಲಿ ತಾನೇ ಆಗಿ, ಸೇವ್ಯಸೇವಕನೆನಿಸಿ,ಅವ್ಯಕ್ತನಾಗಿ
ವ್ಯಾಪಾರ ಮಾಡಿ ಶ್ರೀಲಕ್ಷ್ಮೀಪತಿ ವಿಹಾರ ಮಾಡುತ್ತಾನೆ. ತತ್ಪ್ರಯುಕ್ತ ಸ್ವಾಧ
ಮರು ಸೋತ್ತಮರಂತರ್ಗತ ಪರಮಾತ್ಮನನ್ನು ಪೂಜಾ ಮಾಡಬೇಕೆಂದು
ಜ್ಞಾನಿಗಳು ಶಾಸ್ತ್ರದಲ್ಲಿ ಉಕ್ತನಾಗಿದೆ ಯಂತ ಹೇಳುತ್ತಾರೆ. ಸ್ವೋತ್ತಮರಾದ
ಗುರುಗಳ ಸೇವೆಯೇ ಅಧಮರಿಗೆ ಶ್ರೀಹರಿಸೇವೆ. ಸ್ವಾಧಮರಂತರ್ಗತ ಪರ
ಮಾತ್ಮನ್ನ ಉತ್ತಮರು ಯಾಕೆ ಪೂಜಾ ಮಾಡಬಾರದೆಂತ ಶಂಕಾ ಬಂದರೆ,
ಪರಮಾತ್ಮ ಎಲ್ಲಕಡೆ ಒಂದೇ, ಪರಮಾತ್ಮಗೆ ತರತಮ ಎಲ್ಲಿದೆ? ಅಂದರೆ,
ಉತ್ತಮರಿಗೆ ಸ್ವಾಧಮರು ನೀಚರು. "ನೀಚಾಧಿಷ್ಠಾನದಲ್ಲಿ ಹರಿಯ ಪೂಜಿಸ
ದಿರು" ಎಂದು ಶ್ರೀ ವಿಜಯದಾಸರ ವಚನ. ಈ ಪ್ರಕಾರ ಪ್ರಮಾಣಗಳು
ಇವೆ. ಯಥಾ ದೇವೇ ತಥಾ ಗುರೌ ||"ಸಮಾಶ್ರಯೇದ್ಗುರುಂ ಭಕ್ತ್ಯಾ ಮಹಾ
ವಿಶ್ವಾಸಪೂರ್ವಕಂ|ನಿಕ್ಷಿಪೇತ್ಸರ್ವಭಾರಾಂಶ್ಚ ಗುರೋಃ ಶ್ರೀಪದಪಂಕಜೇ" ||೧||
ಗುರುಸೇವಾ ಗುರುಸ್ತೋತ್ರಂ ಪರಂ ಶಿಷ್ಯಕೃತಂ ಶ್ರುತಂ"|| ಉಮಾ ಮಹೇಶ್ವರ
ಸಂವಾದೇ ಗುರುಸ್ತೋತ್ರಂ | ಗುರುರೇವ ಪರೋ ಧರ್ಮೋ ಗುರುರೇವ ಪರಾ
ಗತಿಃ ||ಗುರುರೇವ ಪರೋಬಂಧುಃ ಗುರುರ್ದೈವಂ ಪರಂ ಸ್ಮೃತಂ ||ಸ್ಕಾಂದೇ||
ಈ ಪ್ರಕಾರ ಶ್ರೀ ರಮಾ ಬ್ರಹ್ಮ ರುದ್ರೇಂದ್ರಾದಿಗಳು, ತಾರತಮ್ಯಾನುಸಾರ
ಶ್ರೀರಮಾವಲ್ಲಭ ಪ್ರಣವ ಪ್ರತಿಪಾದ್ಯ ಶ್ರೀ ನಾರಾಯಣನ ಪಾದಕಮಲಗಳ
ಸ್ತೋತ್ರ ಮಾಡಿ ಪೂಜಾ ಮಾಡುತ್ತಾರೆ. ಬ್ರಹ್ಮ ರುದ್ರೇಂದ್ರಾದಿಗಳು ಒಂದೇ
ಪ್ರಕಾರ ಸ್ತೋತ್ರ ಮಾಡುವದಿಲ್ಲ. ತರತಮಾನುಸರಿಸಿ ಸ್ತೋತ್ರ ಮಾಡುತ್ತಾರೆ.
ಈ ಪ್ರಕಾರ "ಬ್ರಹ್ಮ ಸಮೀರವಾಣಿ ಫಣೀಂದ್ರ ವೀಂದ್ರ ಭವೇಂದ್ರ ಮುಖ
ವಿನುತಾ ಎಂಬುವದಕ್ಕೆ ಮೇಲಿನ ವ್ಯಾಖ್ಯಾನ.



ಶ್ರೀ ರಮಾವಲ್ಲಭ ಶ್ರೀನಾರಾಯಣನ ಮಾಹಾತ್ಮೆ ಗ್ರಂಥಕಾರರಾದ ಶ್ರೀ
ಗುರುಗಳವರು, ದಾವ ಪ್ರಕಾರ ಸ್ತೋತ್ರ ಮಾಡುತ್ತಾರೆ ಎಂದರೆ "ನೀರಜ
ಭವಾಂಡೋದಯಸ್ಥಿತಿಕಾರಣನೆ"=ನೀರ=ಉದಕದಲ್ಲಿ, ಜ=ಜನಿಸಲ್ಪಟ್ಟ ಕಮಲ-
-ಭವಬ್ರಹ್ಮ, ಅಂಡ ಅಂದರೆ ತತ್ತಿಆಕಾರ ಬ್ರಹ್ಮಾಂಡ, ಬ್ರಹ್ಮಾಂಡದ ಚತುರ್ದಶ
ಲೋಕಗಳ, ತ್ರಿವಿಧಸ್ಥಳ- ಭೂಜಲ ಖೇಚರದಲ್ಲಿದ್ದ ಸತ್ವರಜಸ್ತಮಜೀವರುಗಳ,
ಉದಯ=ಸೃಷ್ಟಿಗೆ, ಸ್ಥಿತಿ=ಪಾಲನೆಗೆ ಕಾರಣನೆ=ಬ್ರಹ್ಮಾದಿಗಳ ಸೃಷ್ಟಿ ಸ್ಥಿತಿಗೆ
ಮುಖ್ಯಕರ್ತೃನಾದವನೆ. ಕೈವಲ್ಯದಾಯಕ=ಶ್ರೀರಮಾಕಾಂತ ಬ್ರಹ್ಮರುದ್ರೇಂದ್ರಾ
ದಿಗಳಿಗೆ ಕೈವಲ್ಯ (ಮುಕ್ತಿ) ಪ್ರದಾಯಕನಾದವನೆ. ಶ್ರೀರಮಾಬ್ರಹ್ಮರುದ್ರೇಂದ್ರಾ
ದಿಗಳಿಂದ ಪೂಜಾ ಮಾಡಿಸಿಕೊಳ್ಳಲ್ಪಟ್ಟಂಥ ಲಕ್ಷ್ಮೀಕಾಂತ ನಾರಸಿಂಹನೆ
ನಮಿಪೆ || ಹೇ ರಮಾವಲ್ಲಭ ತವಪಾದ ಪದ್ಮಕ್ಕೆ ಅಷ್ಟಾಂಗದಿಂದ ವಂದಿಸುವೆ.
"ಕರುಣಿಪುದೆಮಗೆ ಮಂಗಳವ"=ಹೇ ಸ್ವಾಮಿ ನಮಗೆ ಮಂಗಳವನ್ನು ಅನುಗ್ರಹ
ಮಾಡಬೇಕು. ಹೇ ಲಕ್ಷ್ಮೀಕಾಂತ ! ನಿನ್ನ ಪಾದ ಪದ್ಮಗಳಲ್ಲಿ ಜ್ಞಾನಭಕ್ತಿ ಪುರ
ಸ್ಸರ ಅನುಸಂಧಾನಪೂರ್ವಕ, ಆದರದಿಂದ ನಿನ್ನ ನಾಮ ಸ್ಮರಣೆಯಿಂದ ಮಂಗ
ಳಕರವಾದ ಮುಕ್ತಿಯನ್ನು ಎಮಗೆ ಅನುಗ್ರಹ ಮಾಡಬೇಕು ||೧|| ಈ ಪ್ರಕಾರ
ಶ್ರೀಮದ್ಗುರುವರ ಜಗನ್ನಾಥದಾಸರಾಯರು ಹರಿಕಥಾಮೃತಸಾರ ಪೀಠಿಕಾ
ಧ್ಯಾಯ ಪ್ರಥಮ ಪದ್ಯದಲ್ಲಿ, ಶ್ರೀಹರಿ ಸರ್ವೋತ್ತಮ ತಾರತಮ್ಯ ಪಂಚಭೇದ
ಸಂಪ್ರದಾಯ ಪೂರ್ವಕವಾಗಿ ವರ್ಣನ ಮಾಡಿದರು. ಶ್ರೀ ಗುರುಗಳವರ ಪದ
ಪದ್ಮಗಳಿಗೆ ನಮೋನಮಃ ||

**ಪದ್ಯ ೨**– ಶ್ರೀಗುರು ಜಗನ್ನಾಥದಾಸ ರಾಯರು ಪೂರ್ವಪದ್ಯದಲ್ಲಿ
ಹರಿಸರ್ವೋತ್ತಮ ತಾರತಮ್ಯಪಂಚಭೇದ ಸುಯುಕ್ತ ವಾಗಿ ಸೂಚಿಸಿ, ಸರ್ವ
ಜೀವಾಂತರ್ಗತ ರಮಾಕಾಂತ ಶ್ರೀ ಲಕ್ಷ್ಮೀನರಸಿಂಹ ದೇವರ ಸ್ತೋತ್ರ
ವರ್ಣನ ಮಾಡಿ ಈ ಎರಡನೆ ಪದ್ಯದಲ್ಲಿ ತ್ರಿಗುಣಾಭಿಮಾನಿ ಅವ್ಯಕ್ತತತ್ವಕ್ಕೆ
ನಿಯಾಮಕಳಾದ ಶ್ರೀರಮಾದೇವಿಯರ ಸ್ತೋತ್ರ ಮಾಡುತ್ತಾರೆ. "ಜಗದುದರ
ನತಿ ವಿಮಲಗುಣ......................ನಾಲೋಚನದಿ"= ಜಗತ್ತೇವೆ ಉದರವುಳ್ಳ
ಪರಮಾತ್ಮ. ಸಕಲ ಬ್ರಹ್ಮಾಂಡ ಪಿಂಡಾಂಡಕ್ಕೆ, ಶ್ರೀ ನಾರಾಯಣನ ಉದರ
ದಿಂದಸೃಷ್ಟಿಸ್ಥಿತಿ; ಕಾರಣಜಗದುದರ;ಸರ್ವಜಗತ್ತು ಸೂಕ್ಷ್ಮವಾಗಿ ಲಯವಾದರೂ
ಪರಮಾತ್ಮನ ಉದರದಲ್ಲಿ ಪ್ರವೇಶವಾಗಿ, ಪೊರಮಟ್ಟು ಮುಕ್ತರಾಗುತ್ತಾರೆ.

ಬ್ರಹ್ಮ ರುದ್ರೇಂದ್ರಾದಿ ಸಮಸ್ತ ದೇವತೆಗಳನ್ನು ಸ್ವಾಮಿ ತನ್ನ ಅವಯವಗಳಿಂದ
ಉತ್ಪತ್ತಿ ಮಾಡುತ್ತಾನೆ. ಬ್ರಹ್ಮಾದಿ ಸಮಸ್ತ ದೇವತೆಗಳು ಸತ್ವ ರಜಸ್ತಮ
ಜೀವರು ತ್ರಿವಿಧಾಧಿಕಾರಿಗಳು, ಸ್ಥಾವರ ಜಂಗಮ ಜೀವರು, ಜಡಗಳು ಸೂಕ್ಷ್ಮ
ವಾಗಿ ಶ್ರೀಲಕ್ಷ್ಮೀಕಾಂತನ ಉದರದಲ್ಲಿ ಆವಾಸ ಮಾಡಿರುತ್ತಾರೆ. ಸ್ವಾಮಿ
ಜಗದುದರ– ಅತಳ, ವಿತಳ, ಸುತುಳ, ತಳಾತಳ, ರಸಾತಳ ಪಾತಾಳಾದಿ ಕೆಳ
ಗಿನ ಏಳು ಲೋಕಗಳು- ಭೂಲೋಕ, ಭುವರ್ಲೋಕ ಸುವರ್ಲೋಕ,
ಮಹರ್ಲೋಕ ಜನೋಲೋಕ ತಪೋಲೋಕ ಸತ್ಯಲೋಕ, ಮ್ಯಾಲಿನ ಏಳು
ಲೋಕ, ೧೪ ಲೋಕ ಸಹಿತ ಬ್ರಹ್ಮಾಂಡ. ಇಂಥಾ ಅನಂತಾನಂತ ಬ್ರಹ್ಮಾಂಡ
ಉದರದಲ್ಲಿಟ್ಟು ಸಂರಕ್ಷಣೆ ಮಾಡುತ್ತಾನಾದ ಪ್ರಯುಕ್ತ ಸ್ವಾಮಿಗೆ ಬ್ರಹ್ಮಾಂ
ಡೋದರನೆಂದು, ಅನಂತ ವೇದಗಳಲ್ಲಿ ಉಕ್ತವಾಗಿದೆ. ಇಂಥ ಮಹಾಮಹಿ
ಮೋಪೇತನಾದ ವಿರಾಡ್ರೂಪಿ "ನಾರಾಯಣನ", ಅತಿವಿಮಲಗುಣರೂಪಗಳನು
ಕೇವಲ ಪರಮ ನಿರ್ಮಲತರವಾದ ಗುಣಗಳ, ಸರ್ವೋತ್ತಮನಾದ ಬ್ರಹ್ಮಾದಿ
ದೇವತೆಗಳಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟ ಸ್ವಾಮಿ, ಚತುರ್ದಶಭುವನಾಧಿ
ಪತಿ ಶ್ರೀ ಆದಿನಾರಾಯಣನ ನಿರ್ಮಲವಾದ ರೂಪಗಳ, ತ್ರಿಗುಣಮಾನಿ=
ಸ್ವರೂಪತಃಸತ್ವರಜಸ್ತಮೋ ಜೀವರಿಗೂ, ಸತ್ವರಜ ತಮುಗುಣಗಳಿಗೂ ತ್ರಿಗುಣ
ಗಳಿಗೂ ತ್ರಿಗುಣವಾದ ಜಡವಸ್ತುಗಳಿಗೂ ಅಭಿಮಾನಿಯಾದ, ಅವ್ಯಕ್ತಾದಿ
ಚತುರ್ವಿಂಶತಿ ತತ್ವೇಶರಿಗೆ ನಿಯಾಮಕರು ನಿತ್ಯಮುಕ್ತಳಾದ ಶ್ರೀ ರಮಾದೇವಿ
ಯರು, "ಆಲೋಚನದಿ"=ಕೇವಲ ಮಹಾಜ್ಞಾನ ಪುರಸ್ಸರ, ಶ್ರೀಪತಿಗುಣರೂಪ
ಗಳ ಚಿಂತನ ಮಾಡುತ, ಭಾರತ=ಭಾರತದಲ್ಲಿ, ನಿಗಮತತಿಗಳ=ಅನಂತಾನಂತ
ವೇದಗಳ ಸಮೂಹಗಳಲ್ಲಿ ವಿಚಾರಿಸಿ ನೋಡಿದರೆ ಅವುಗಳಿಗೆಲ್ಲ ಅತಿಕ್ರಮಿಸಿ=
ಭಾರತಾದಿ ವೇದಗಳಲ್ಲಿ ವರ್ಣಾದಿಗುಣ ರೂಪಗಳು, ಅತಿ ವಿಶೇಷವಾಗಿ ಭಾರ
ತಾದಿ ಶಾಸ್ತ್ರ ವೇದಗಳಿಗೆ ಅಗೋಚರವಾದ ಶ್ರೀ ಪರಮಾತ್ಮನ ಅನಂತಾನಂತ
ಗುಣರೂಪಕ್ರಿಯಗಳನ್ನು, ಬಗೆಬಗೆಯ ನೂತನವ ಕಾಣುತ=ವಿಧವಿಧವಾಗಿ
ಹೊಸ ಹೊಸಪರಿಯಾಗಿ ಶ್ರೀರಮಾದೇವಿಯರು ಜ್ಞಾನದೃಷ್ಟಿಯಿಂದ ನೋಡುತ್ತ,
ಮಿಗೆಹರುಷದಿಂ ಪೊಗಳಿಹಿಗ್ಗುವ=ಅನಂತಾನಂತ ಕೋಟಿ ಸೂರ್ಯಪ್ರಕಾಶನಾದ
ಅನಂತಾನಂತ ಬ್ರಹ್ಮಾಂಡಕ್ಕೆ ಒಡೆಯನಾದ ಸರ್ವತ್ರ ವ್ಯಾಪ್ತನಾದ ಶ್ರೀನಾರಾ
ಯಣನ ಮಂಗಳರೂಪಗಳ ನೋಡಿ, ಆನಂದಾದಿ ಗುಣಗಳ ಪಾರುಗಾಣದೆ,



ಆನಂದ ಪೊರಚೆಲ್ಲಿ, ಪರಮ ಹರುಷದಿಂದ ಹಸನ್ಮುಖಳಾಗಿ, ಸ್ತೋತ್ರ ಮಾಡಿ
ಹಿಗ್ಗುವಂಥ, ಜಗನ್ಮಾತೆ ತ್ರಿಗುಣಾಭಿಮಾನಿ. ಶ್ರೀ ಲಕ್ಷ್ಮೀಕಾಂತನ ವಕ್ಷಸ್ಥಲ
ನಿವಾಸಿ, ಶ್ರೀ ಲಕ್ಷ್ಮೀದೇವಿಯರು ನಿತ್ಯನಿತ್ಯದಲ್ಲಿ "ಸಂತೈಸಲನುದಿನದಿ"ತ್ರಿಗುಣಾ
ತ್ಮಕ ಲಿಂಗದಲ್ಲಿ ವ್ಯಾಪ್ತಳಾದ ರಮಾದೇವಿಯರು ತ್ರಿಗುಣದಿಂದ ದೂರಮಾಡಿ,
ಅನುದಿನ=ಸದಾ ನಿತ್ಯವಾದ ಮುಕ್ತಾವಸ್ಥೆಯಲ್ಲಿಸಹ, ಜ್ಞಾನಾನಂದ ಉನ್ನಾಹ
ಗ್ರೈಸಿ ಸಂರಕ್ಷಣೆ ಮಾಡಲಿ ‖ ಇಂತು ತ್ರಿಗುಣಾಭಿಮಾನಿ ಶ್ರೀ ಭೂದುರ್ಗಾ
ದೇವಿಯರಮಾಹಾತ್ಮೆ ಗುರುಗಳ ದ್ವಾರಾ ಶ್ರವಣಮಾಡಿ, ತ್ರಿಗುಣದಿಂದ ಆಗೋ
ಕರ್ಮಗಳಿಗೆ ರಮಾದೇವಿಯರೆ ಅಭಿಮಾನಿಗಳು; ತ್ರಿಗುಣ ಕಾರ್ಯಗಳು
ಶ್ರೀರಮೆಯಿಂದಲೇ ಶ್ರೀಹರಿಯು ಮಾಡಿಸುವನೆಂದು ತಿಳಿದು, ಸರ್ವತಂತ್ರ
ಸ್ವತಂತ್ರನಾದ ಶ್ರೀರಮಾಂತರ್ಗತ ಶ್ರೀ ನಾರಾಯಣಗೆ ಸಮರ್ಪಣ ಮಾಡಿಸಿ
ಶ್ರೀ ಹರಿವಾಯುಗಳು ನಿರ್ಲಿಪ್ತನ್ನ ಮಾಡುವರು.

**ಪದ್ಯ ೩**– ಪೂರ್ವದಲ್ಲಿ ನಿತ್ಯಮುಕ್ತಳಾದ ಅವ್ಯಕ್ತ ತತ್ವಾಭಿಮಾನಿ ಶ್ರೀ
ರಮಾದೇವಿಯ ಸ್ತೋತ್ರ ಮಾಡಿ, ಅನಂತರ ಮಹತ್ತತ್ವಾಭಿಮಾನಿ ಶ್ರೀ ರಮಾ
ದೇವಿಯ ಸ್ತೋತ್ರಮಾಡಿ, ಅನಂತರ ಮಹತ್ತತ್ವಾಭಿಮಾನಿ ಬ್ರಹ್ಮದೇವರ
ಮಾಹಾತ್ಮೆ ಶ್ರೀಮದ್ಗುರುವರ ಶ್ರೀಜಗನ್ನಾಥದಾಸರಾಯಗುರುಗಳು ಮೂರನೇ
ಪದ್ಯದಲ್ಲಿ ಕೊಂಡಾಡಿ ಸ್ತೋತ್ರಮಾಡುತ್ತಾರೆ. ನಿರುಪಮಾನಂದಾತ್ಮಭವ=ನಿರು
ಪಮ= ಉಪಮೆರಹಿತ ಶ್ರೀನಾರಾಯಣ. ಈತನಿಗೆ ಸಮರಾದವರು ಯಾರೂ
ಇಲ್ಲ. ಕ್ಷರಾಕ್ಷರರಾದ ಶ್ರೀರಮಾ ಬ್ರಹ್ಮ ರುದ್ರೇಂದ್ರಾದಿಗಳು, ಶ್ರೀ ಲಕ್ಷ್ಮೀಪತಿಗೆ
ಸದೃಶರಾಗುವದಿಲ್ಲ. ಶ್ರೀಹರಿ ಅನಂತಾನಂತ ಗುಣ ಪೂರ್ಣ, ಅನಂತಾನಂತ
ರೂಪಾತ್ಮಕ, ಸರ್ವೋತ್ತಮ, ಚತುರ್ದಶವಾದ ಸಮಸ್ತ ಲೋಕದಲ್ಲಿ ಪರ
ಮಾತ್ಮನ ಸರಿಯಾದವರು ಯಾರೂ ಇಲ್ಲ. ಕಾರಣಶ್ರೀರಮಾವಲ್ಲಭ ಉಪಮಾರ
ರಹಿತ, ಸಮರು ಇಲ್ಲ. ಎಂಬೋ ವ್ಯಾಳೆಗೆ, ಅಧಿಕರಂತೂ ದೇವತೆಗಳೊಳಗೆ
ಇಲ್ಲ. ಶ್ರೀಹರಿ ನಿರುಪಮಸಮಾಧಿಕ ಶೂನ್ಯನೆಂದು ಶ್ರುತಿ ಸ್ಮೃತಿಗಳಲ್ಲಿ
ಉಕ್ತವಾಗಿದೆ.

ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ । ಶ್ರೀನಾರಾಯ
ಣನೇ ಕ್ಷರಾಕ್ಷರರಲ್ಲಿಉತ್ತಮ;ಸಮರಧಿಕರಾರೂಇಲ್ಲ. ಈತನೇವೇಪರಃ=ಉತ್ತಮ
ನೆಂದು ಕರಸಿಕೊಳ್ಳುತ್ತಾನೆ. ಆನಂದಾತ್ಮ, ಪೂರ್ಣ ಜ್ಞಾನಾನಂದ ಶರೀರ

ಉಳ್ಳಂಥ ಸ್ವಾಮಿ. ಸಮಸ್ತ ಷಡ್ಗುಣೈಶ್ವರ್ಯಾದಿ ಜ್ಞಾನಾನಂದ ಗುಣಗಳುಳ್ಳವ ಶ್ರೀ ಹರಿಯು. ಬ್ರಹ್ಮಾದಿ ದೇವತೆಗಳು ಕ್ಲಪ್ತಾನಂದ ಉಳ್ಳವರು. "ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಂ" ಇಂಥ ಸಮಸ್ತ ಗುಣ ಪರಿಪೂರ್ಣ ಸಕಲದೋಷದೂರನಾದ ಮಹಾಮಹಿಮೋಪೇತನಾದ ಶ್ರೀರಮಾಕಾಂತ ಓಂಕಾರ ಪ್ರತಿಪಾದ್ಯ, ಉಪಮೆರಹಿತನಾದ ಪರಮಾತ್ಮನ ನಾಭಿಕಮಲೋದ್ಭವ ಬ್ರಹ್ಮ. "ನಿರ್ಜರ ಸಭಾಸಂಸೇವ್ಯ"= ಗರುಡ ಶೇಷ ಭವೇಂದ್ರಾದಿ ದೇವತೆಗಳ ಸಮೂಹಗಳಿಂದ ಸಮೀಚೀನವಾಗಿ ಸೇವ್ಯಮಾನನಾಗಿ ಒಪ್ಪುವಂಥ, ಋಜುಗಣದರಸೆ= ಋಜುಗಣಸ್ಥರಾದ ರ್ಗ್ ಜನಕ್ಕೆ ಅರಸು=ಶ್ರೇಷ್ಠ. ಇಂಥ ಬ್ರಹ್ಮದೇವರ ವರ್ಣನ ಶೇಷದೇವರಿಗೆ ಅಸಾಧ್ಯ. "ಸತ್ವಪ್ರಚುರ"=ಈದಾವ ಬ್ರಹ್ಮದೇವರು ವಿಶೇಷವಾಗಿ ಸತ್ವಗುಣ ಪ್ರಾಚುರ್ಯವುಳ್ಳವರು. "ವಾಣೀಮುಖ ಸರೋಜ ಇನ"= ಶ್ರೀ ಸರಸ್ವತೀ ದೇವಿಯರ ಮುಖವೆಂಬೊ ಕಮಲಕ್ಕೆ, ಸೂರ್ಯಸ್ಥಾನಿಯಾದಂಥವ, ಅಂದರೆ ಸೂರ್ಯಉದಯಕ್ಕೆ ಕಮಲವು ಅರಳುತ್ತದೆ. ಕಮಲಮಿತ್ರ ಸೂರ್ಯನಂತೆ ಸರಸ್ವತಿದೇವಿಯರ ಮುಖಕಮಲವೆಂಬೋದಕ್ಕೆ ಸದಾ ಸಂತೋಷಕರನಾದವ.

"ಗರುಡ ಶೇಷಶಶಾಂಕದಳ ಶೇಖರರ ಜನಕ"=ಶ್ರೀಲಕ್ಷ್ಮೀಪತಿಗೆಉತ್ತಮವಾದ ವಾಹನನೆನಿಪ ಗರುಡದೇವರಿಗೆ, ಶ್ರೀ ರಮಾಕಾಂತ ಶ್ರೀ ನಾರಾಯಣನ ಪರಿಯಂಕ ಸೇವಾಕ್ಕೆ ಅಧಿಕಾರಿಗಳಾದ ಶೇಷದೇವರಿಗೆ, ಶಶಾಂಕದಳ = ಎರಳಿವಾಹನನಾದ ಚಂದ್ರನನ್ನೇ ಜಟಾದಲ್ಲಿ ಧರಿಸಿದ-ಚಂದ್ರಶೇಖರ, ಮಹಾರುದ್ರನೇ ಮೊದಲಾದ ಸಮಸ್ತ ದೇವತೆಗಳಿಗೆ ಜನಕನಾದ ಬ್ರಹ್ಮ. ಇಲ್ಲಿ ಪೂರ್ವಪಕ್ಷ= ಸಮಸ್ತ ದೇವತೆಗಳು ಶ್ರೀನಾರಾಯಣನ ಅವಯವಗಳಿಂದ ಸೃಷ್ಟರಾಗಿದ್ದಾರೆ. ಜಗಜ್ಜನ್ಮಾದಿಕಾರಣನೆಂದು ಸ್ವಾಮಿಗೆ ನಾಮಧೇಯ ಇರಲಾಗಿ, ಬ್ರಹ್ಮದೇವರು ದೇವತೆಗಳಿಗೆ ಜನಕನೆಂದು ಹೇಗೆ ಕರಸಿಕೊಳ್ಳುತ್ತಾರೆಂದರೆ, ಶ್ರೀ ರಮಾವಲ್ಲಭ ಮುಖ್ಯವೃತ್ತಿಯಿಂದ ಸಮಸ್ತಜಗತ್ತಿಗೆ ಪಿತೃಸ್ಥಾನಿ, ಪರಲೋಕ ಬಂಧು, ಜ್ಞಾನಪ್ರದ, ಸೃಷ್ಟ್ಯಾದ್ಯಷ್ಟಕರ್ತ.॥ಪ್ರಮಾಣ॥ "ತ್ವಮೇವ ಮಾತಾಚ ಪಿತಾತ್ವಮೇವ ತ್ವಮೇವ ಬಂಧುಶ್ಚ ಸಖಾತ್ವ ಮೇವ ॥ ತ್ವಮೇವ ವಿದ್ಯಾ ದ್ರವಿಣಂತ್ವಮೇವ । ತ್ವಮೇವ ಸರ್ವಂ ಮಮ ದೇವದೇವ" ॥ ಇಂಥ ಸ್ವಾಮಿಯ ಪರಮಾನುಗ್ರಹದಿಂದ ತಾನು ಬ್ರಹ್ಮಾಂತರ್ಗತನಾಗಿ ಬ್ರಹ್ಮನ ದ್ವಾರಾ ಜಗತ್ತು ಸೃಷ್ಟಿಮಾಡು



ತ್ತಾನೆ. ಕಾರಣ ಗರುಡ ಶೇಷ ಭವಾದ್ಯರಿಗೆ ಜನಕನೆಂದು ನಾಮಉಳ್ಳಾತನಾಗಿರುವನು. ಪುನಃ ಪೂರ್ವಪಕ್ಷ= ಮುಖ್ಯ ಸೃಷ್ಟಿಗೆ ಶ್ರೀ ನಾರಾಯಣನ ತರುವಾಯ ರಮಾದೇವಿ ಕಾರಣಳು, ಶ್ರೀ ರಮಾದೇವಿಯರ ವಿನಾ ಸೃಷ್ಟಿಗೆ-ಬ್ರಹ್ಮದೇವರು ಹೇಗೆ ಕಾರಣನಾಗುತ್ತಾರೆ ? ಎಂದರೆ, ಮುಖ್ಯ ಸೃಷ್ಟಿಗೆ ಶ್ರೀ ನಾರಾಯಣನೇ ಕಾರಣ. ಅನಂತಾನಂತ ಬ್ರಹ್ಮಾಂಡ, ಅನಂತಾನಂತ ಬ್ರಹ್ಮರ ಸೃಷ್ಟಿ ಶ್ರೀ ರಮಾದೇವಿಯರ ಅಂತರ್ಗತನಾಗಿ, ಶ್ರೀಪತಿ ನಾರಾಯಣ ಶ್ರೀರಮಾ ಪರಿಮುಖದಿಂದ ಸೃಷ್ಟಿ ಮಾಡುತ್ತಾನೆ. ಅನಂತರ ರಮಾಂತರ್ಗತ ಪರಮಾತ್ಮ ಬ್ರಹ್ಮನದ್ವಾರಾ ಜಗತ್‍ಸೃಷ್ಟಿ, ಅನೇಕ ವಿಧ ಜೀವರ ಸೃಷ್ಟಿ ಮಾಡಿ, ಸೂಕ್ಷ್ಮ ಸೃಷ್ಟಿಯಲ್ಲಿ ಪದ್ಮಾದಿ ಸೃಷ್ಟಿಯಲ್ಲಿ ಗರುಡಾದಿ ದೇವತೆಗಳನ್ನು ಬ್ರಹ್ಮದೇವರ ದ್ವಾರಾ ಸೃಷ್ಟಿ ಮಾಡಿಸುತ್ತಾನೆ. ಆದ ಕಾರಣ, ಬ್ರಹ್ಮದೇವರು ಗರುಡ ಶೇಷ ರುದ್ರಾದಿಗಳಿಗೆ, ಜನಕ=ತಂದೆ ಎಂದು ಕರೆಸುತ್ತಾನೆ. ಸೃಷ್ಟಿ ಪ್ರಕರಣ ಶ್ರೀಮನ್‍ಮಹಾ ಭಾರತ ತಾತ್ಪರ್ಯ ನಿರ್ಣಯ ಮೂರನೇ ಅಧ್ಯಾಯದಲ್ಲಿ ಉಕ್ತವಾಗಿದೆ. ಮುಖ್ಯ ಮೂಲ ಸೃಷ್ಟಿಗೆ ಶ್ರೀನಾರಾಯಣನೇ ಕರ್ತ, ಅನಂತರ ಶ್ರೀರಮಾ ಕಾರಣಳು. ತರುವಾಯ ಶ್ರೀರಮಾ ಅನುಗ್ರಹದಿಂದ ಬ್ರಹ್ಮಕಾರಣ. "ಜಗದ್ಗುರುವೆ"= ತ್ರಿಜಗತ್ತಿಗೆ ಉತ್ತಮರಾಗಿ ಶ್ರೇಷ್ಠರಾದ ಗುರುಗಳು ಎನಿಸಿಕೊಂಬುವಂಥ ಹೇ ಬ್ರಹ್ಮದೇವರೇ— "ತ್ವಚ್ಚರಣಗಳಿಗೆ ವಂದಿಸುವೆ"=ಸಕಲ ಜೀವರಿಗೆ ಉತ್ತಮನಾದ ಬ್ರಹ್ಮ ! ತವಪಾದ ಪದ್ಮಗಳಿಗೆ ವಂದನ ಮಾಡುವೆ. "ಪಾಲಿಪುದು ಸನ್ಮತಿಯ"=ಸಮೀಚೀನವಾದ ಸನ್ಮತಿ ಹರಿ, ಸರ್ವೋತ್ತಮ ಜ್ಞಾನ, ತಾರತಮ್ಯ ಪಂಚಭೇದಜ್ಞಾನ, ಹರಿಭಕ್ತರ ಚರಣಗಳಲ್ಲಿ ಭಕ್ತಿ, ವಿಷಯದಲ್ಲಿ ವೈರಾಗ್ಯ, ತಜ್ಞಾನದಿಂದ ಶ್ರೀರಮಾಕಾಂತ ನಾರಾಯಣನ ಕೊಂಡಾಡುವಸುಬುದ್ಧಿ, ಅನುಗ್ರಹಮಾಡಿ ಪಾಲಿಸಬೇಕೆಂದು,ಮಹತ್ತತ್ವಾಧಿಪತಿ ಸರಸ್ವತಿಪತಿ ಬ್ರಹ್ಮದೇವರ ಸ್ತೋತ್ರ ಶ್ರೀ ಗುರುಗಳವರು ಮಾಡಿದರು.

**ಪದ್ಯ ೪**-ಆರು ಮೂರೆರಡೊಂದು ಸಾವಿರ ಮೂರೆರಡು ಶತಶ್ವಾಸಜಪಗಳ"

ಆರು ಮೂರು ಹದಿನೆಂಟು ಸಾವಿರ= ೧೮೦೦೦
ಎರಡೊಂದು ಸಾವಿರ=ಮೂರುಸಾವಿರ= ೩೦೦೦
ಮೂರೆರಡು ಶತ=ಆರುನೂರು = ೬೦೦

ಇಪ್ಪತ್ತೊಂಗು ಸಹಸ್ರದ ಆರುನೂರು ೨೧,೬೦೦ ಶ್ವಾಸಜಪಗಳ ಮಾಡಿ ಹಂಸ

ರೂಪಿ ಪರಮಾತ್ಮನಿಗೆ ನಿವೇದಿಸಿ, ಮೂರುವಿಧ ಜೀವರೊಳಗೆ=ಸತ್ವ,ರಜಸ್ತಮೋ ಜೀವರೊಳಗೆ, ಇಪ್ಪತ್ತೊಂದು ಸಹಸ್ರ ಆರುನೂರು ಶ್ವಾಸಜಪಗಳ ಜಪಿಸಿ, ಹಾಗೆ ತ್ರಿಸ್ಥಳದಲ್ಲಿ ಸಂಚರಿಸುವಂಥ, ಖೇಚರರು, ಭೂಚರರು, ಜಲಚರರು, ಆಕಾಶದಲ್ಲಿ ಗಮನವುಳ್ಳ ಗರುಡನೇ ಮೊದಲಾದ ಪಕ್ಷಿಗಳೊಳಗೆ, ಭೂಚರರು= ಭೂಮಿಯಲ್ಲಿ ಸಂಚಾರ ಮಾಡುವಂಥ ಮನುಷ್ಯರು, ಪಶ್ವಾದಿ ಕ್ರಿಮಿಕೀಟ ಜೀವರು, ಜಲಚರರು=ಉದಕದಲ್ಲಿ ಚರಿಸುವ ಮತ್ಸ್ಯಕೂರ್ಮಾದಿ ಸಮಸ್ತ ಜಂತುಗಳೊಳಗೆ, ಶ್ರೀಗುರು ಪವಮಾನರಾಯ ಗುರುಗಳು, ೨೧,೬೦೦ ಶ್ವಾಸ ಜಪಗಳು, ಅಬ್ಜಜಕಲ್ಪ ಪರಿಯಂತ=ಬ್ರಹ್ಮಕಲ್ಪ ಪರಿಯಂತ, "ತಾರಚಿಸಿ"=ಸ್ವತಃ ಮುಖ್ಯ ಪ್ರಾಣದೇವರು ಶ್ವಾಸಜಪಗಳ ಮಾಡಿ, ಶ್ರೀರಮಾ ಪತಿ ನಾರಾಯಣಗೆ ಹಂಸ ಮಂತ್ರಗಳ ಸಮರ್ಪಿಸಿ, ಸತ್ವ ಜೀವರಿಗೆ ಮುಕ್ತಿಯೆಂಬೋ ಚಿತ್ ಸ್ವರೂಪ ಸುಖಪ್ರದರಾಗುವರು. "ಸಂಸಾರ ಮಿಶ್ರರಿಗೆ"=ಜನನ ಮರಣಾದಿ ಭವಾಖ್ಯವಾದ ದುಃಖ ತರಂಗ ನರಕಯಾತನೆಗಳನುಭವ ನಿತ್ಯ ಸಂಸಾರಿಗಳಿಗೆ, ಮಿಶ್ರಗತಿ ಕೊಡುವರು. "ಅಧಮಜನರಿಗೆ ಪಾರದುಃಖಗಳೀವ "= ತಮೋಧಿಕಾರಿಗಳಾದ ದನುಜ ರಾಕ್ಷಸರಿಗೆ, ಪರಿಮಿತಿ ಇಲ್ಲದಂಥ ದುಃಖರೂಪವಾದ ಅಂಧತಮಸ್ಸ=ಅಜ್ಞಾನವೆಂಬ ಕತ್ತಲೆಗಳಿಂದ ತಮೋಂಧಕಾರವಾದ ದುರ್ಗತಿ ಉಳ್ಳ ಅಂಧಃ ತಮಸ್ಸು ಕೊಡವರು, ಈ ಪ್ರಕಾರ ಮೂರು ವಿಧ ಜೀವರೊಳಗೆ, ಶ್ವಾಸ ಜಪಗಳ ರಚಿಸಿ, ಅವರವರ ಗತಿ ಪ್ರದರಾದ, "ಗುರುಪವಮಾನ ಸಲಹೆಮ್ಮ"= ಪವಮಾನರಾಯ ಗುರುಗಳೇ!" ಮಹತ್ತತ್ವದಲ್ಲಿ ವ್ಯಾಪ್ತರಾಗಿ, ಸಮಸ್ತ ಇಂದ್ರಿಗಳಂತರ್ಗತರಾಗಿ, ಸಕಲ ಕರ್ಮಗಳು ನಿಮ್ಮ ಅಂತರ್ಗತ ಶ್ರೀ ರಮಾ ಕಾಂತ ಆದಿನಾರಾಯಣ ಪ್ರೇರ್ಯ ಪ್ರೇರಕನಾಗಿ ಜಗತ್ತಿನಲ್ಲಿ ವ್ಯಾಪಾರ ಮಾಡುತ್ತಾನೆಂಬ ಸುಜ್ಞಾನಪ್ರದರಾಗಿ, ಭವಾಖ್ಯವಾದ ಸಂಸಾರ ಸಮುದ್ರ ದಾಟಿಸಿ, ಶ್ರೀಹರಿ ಗುರುಗಳಲ್ಲಿ ಭಕ್ತಿ ಕೊಟ್ಟು, ವಿಜ್ಞಾನಾಭಿಮಾನಿ ಶ್ರೀಭಾರತೀ ಪತಿ ಶ್ರೀಮುಖ್ಯ ಪ್ರಾಣರಾಯ ಗುರುಗಳೇ ನಮ್ಮನ್ನು ಸಂರಕ್ಷಣ ಮಾಡಲಿ. ಈ ಪ್ರಕಾರ ಜಗದ್ಗುರುಗಳ ಸ್ತೋತ್ರ ಶ್ರೀ ಜಗನ್ನಾಥದಾಸರಾಯರು ಮಾಡಿದರು. ಪೂರ್ವ ಪಕ್ಷ= ಲಿಂಗದಲ್ಲಿ ಶ್ರೀ ವಾಯುದೇವರ ವ್ಯಾಪಾರ ಕೂಡದೆಂದು ಹೇಳುತ್ತಾರೆ. ಜೀವರಲ್ಲಿ ಶ್ರೀ ವಾಯುದೇವರ ಪ್ರೇರಕತ್ವ ಹೇಗೆ ಕೂಡುತ್ತದೆಂಬೋ ಶಂಕಾ ಬಂದರೆ, ಸ್ವೋತ್ತಮರ ಲಿಂಗದಲ್ಲಿ ಸ್ವಾಧಮರ ವ್ಯಾಪಾರ ಕೂಡದು. ಸ್ವಾಧಮರ



ಲಿಂಗದಲ್ಲಿ ಸ್ವೋತ್ತಮರ ಆವಾಸ ಕೂಡತದೆಂದು ಪ್ರಮಿತರು ಶಾಸ್ತ್ರದಲ್ಲಿ ಉಕ್ತವಾಗೇದಂತ ಹೇಳುತ್ತಾರೆ. ಬ್ರಹ್ಮವಾಯುದೇವರ ಲಿಂಗಕ್ಕೆ, ಶ್ರೀರಮಾದೇವೇರು ಅಭಿಮಾನಿಗಳು. ಪರಮ ಸೂಕ್ಷ್ಮತರ, ತಮ್ಮ ತಮ್ಮ ಲಿಂಗದಲ್ಲಿ ಈ ಉಭಯರ ವ್ಯಾಪಾರ ಕೂಡದೆಂದು ತಿಳಿಯಬೇಕು. ಈ ಪ್ರಕರಣ ಶ್ರೀಮದ್ರಂಗವೊಲಿದ ಭಾಗವತರು ಶ್ರೀಹರಿಕಥಾಮೃತ ಸಾರ ಅಧ್ಯಾಯ (೯) ರಲ್ಲಿ ೧೧ ನೇ ಪದ್ಯ ಪರಿಯಂತ, ಶ್ರೀರಮಾಂತರ್ಗತನಾಗಿ, ಬ್ರಹ್ಮಾದಿ ಜೀವರಂತರ್ಯಾಮಿಯಾಗಿ, ವ್ಯಾಪಾರ ಮಾಡತಾನೆಂದು ಸೂಚಿಸಿ, ಅನಂತರ ೧೨ ನೇ ಪದ್ಯದಲ್ಲಿ ಶ್ರೀವಾಯುದೇವರ ವ್ಯಾಪ್ತತ್ವ ಲಿಂಗದೇಹದೊಳಗೆ ಹೇಳಿದ್ದಾರೆ. ಸ್ವಾಧಮರಿಗೆ ಸ್ವೋತ್ತಮರ ವಚನ ಪ್ರಮಾಣವೆಂದು, ಜ್ಞಾನಿಗಳ ಸಮ್ಮತ. ಶ್ರೀಗುರು ಜಗನ್ನಾಥರಾಯರು ಸೂಚಿಸಿದ್ದು, ಅವರ ಗ್ರಂಥಕ್ಕೆ ಸಾಮಾನ್ಯ ಪಕ್ಷವೆಂದರೆ, ನಾನು ಮಂದಮತಿ ಅರ್ಭಕ, ವಿಶೇಷವಾಗಿ ಜ್ಞಾನಿಗಳಲ್ಲಿ ಶ್ರವಣ ಮಾಡಿ, ಸಂಪ್ರದಾಯ ಅರ್ಥ ತಿಳಿದವನಲ್ಲ. ಸ್ವೋತ್ತಮರು ನನ್ನ ಅಪರಾಧ ಕ್ಷಮಾ ಮಾಡಬೇಕು.

ಲಿಂಗದೇಹ ಜಡ, ಒಡಂಬಡಬಹುದು. ಜೀವನು ಚೇತನ, ಇಲ್ಲಿ ಪ್ರೇರಕತ್ವ ಹೇಗಂದರೆ, ಸ್ವಾಧಮರ ಜೀವರ ಸ್ವರೂಪ ಸ್ವೋತ್ತುಮರಿಗೆ ಗ್ರಾಹ್ಯವಾಗುತ್ತದೆ. ಸ್ವರೂಪ ಜ್ಞಾನವಿಲ್ಲದೇ ಉಪದೇಶ ಬಂದು ಅಸಾರ್ಥಕವಾಗುತ್ತದೆ. ಜ್ಞಾನಿಗಳು ಶಿಷ್ಯರ ಯೋಗ್ಯತೆ ಕಾಲ ಅವಲಂಬಿಸಿ, ಶ್ರೀ ನಾರಾಯಣನ ಮಾಹಾತ್ಮೆ, ಶ್ರೀಮನ್ನಾರಾಯಣನಮಾಹಾತ್ಮೆ, ತಾರತಮ್ಯಪಂಚಭೇದ ಸಯುಕ್ತಿಕವಾಗಿ ಉಪದೇಶಮಾಡುತ್ತಾರೆ. ಸ್ವಾವರರದು ಸೋತ್ತಮರಿಗೆ ಗ್ರಾಹ್ಯವಾಗುತ್ತದೆ. ಶ್ರೀ ವಾಯುದೇವರು ಜಗದ್ಗುರುಗಳು. ಗರುಡ ಶೇಷ ಭವೇಂದ್ರಾದಿಗಳ ಸ್ವರೂಪ ಬಲ್ಲರು. ಕಾರಣ ಜೀವೋತ್ತಮರಾದ ಶ್ರೀ ಗುರು ಪವಮಾನರಾಯರು ಗರುಡ ಶೇಷಾದಿಗಳಿಗೆ ಪ್ರೇರಕರಾಗಿ, ಬಿಂಬರೆನಿಸುತ್ತಾರೆ. ಶ್ರೀ ವಾಯು ದೇವರಿಗೆ ಸ್ವಾಧಮರಾದ ಇತರ ದೇವತೆಗಳು, ಪ್ರತಿಬಿಂಬರೆಂದು ಕರೆಸುತ್ತಾರೆ. ಈ ವಿಚಾರ ಕಲ್ಲೂರ ವೈರಾಗ್ಯಶಾಲಿ ಶ್ರೀಗುರು ತಮ್ಮಣ್ಣ ದಾಸರು, ಆಧ್ಯಾತ್ಮಮಾಲಾ ವ್ಯಕ್ತಮಾಡಿರುವರು.

ಹೇಗೆ ಲೋಕದ ದೃಷ್ಟಾಂತ ಮನುಷ್ಯನಾದ ಧನ್ವಂತ್ರಿ, ಔಷಧ ಮಾತ್ರೆಗಳನ್ನು, ಚೂರ್ಣವೇ ಮೊದಲಾದ ಲೇಹ್ಯಾದಿಗಳನ್ನು ಮಾಡುತ್ತಾನೆ. ಆದರದರ

ಗರ್ಭಭಾವ ಹೇಗೆ ಅವಗೆ ಜ್ಞಾನವಾಗಿರುತ್ತದೋ, ಆ ಪ್ರಕಾರ ಶ್ರೀಗುರು ಪವಮಾನರಾಯರು ಶ್ರೀ ನಾರಾಯಣನ ಅನುಗ್ರಹದಿಂದ, ಸರ್ವ ಸ್ವಾಧಮಜೀವರ ಸ್ವರೂಪಯೋಗ್ಯತೆ ಬಲ್ಲ ಕಾರಣ ಪ್ರೇರಕರೆಂದು ತಿಳಿಯಬೇಕು. ಜೀವಾಭಿಮಾನಿ ಶೇಷನೆಂದು ಹೇಳಿದ ಮೇಲೆ, ಶ್ರೀಮದ್ಗುರುವರ ಮಾತರಿಶ್ವಗುರುಗಳು ಗರುಡ ಶೇಷಾದಿಗಳಿಕಿಂತ ತತೋಪ್ಯಧಿಕರು. ಶ್ರೀ ರಮಾವಲ್ಲಭ ಶ್ರೀ ಆದಿನಾರಾಯಣ ರಮಾಂತರ್ಗತನಾಗಿ, ಶ್ರೀ ವಾಯುದೇವರ ಪರಿಮುಖದಿಂದ ಸರ್ವರಂತರ್ಯಾಮಿಯಾಗಿ ವ್ಯಾಪಾರ ಮಾಡುತ್ತಾನೆ. ಸರ್ವ ಜಗತ್ತಿಗೆ ಮುಖ್ಯ ಪ್ರೇರಕ ಲಕ್ಷ್ಮೀಪತಿ. ಶ್ರೀ ಹರಿ ಅನುಗ್ರಹ ಬಲ ಶ್ರೀಗುರು ಪವಮಾನರಾಯನೊಳು ಎಷ್ಟಂತ ವರ್ಣನೆ ಮಾಡಬೇಕು. ಗರುಡ ಶೇಷ ರುದ್ರಾದಿಗಳು ಶ್ರೀಪ್ರಾಣದೇವರಸ್ವರೂಪ ಮಾಹಾತ್ಮೆಅರಿಯರೆಂಬೋವ್ಯಾಳೆಗೆ, ಅಸ್ಮದಾದಿ ಭಣಗುಗಳಿಂದ ಶ್ರೀಅಸುದೇವ ಗುರುಗಳ ಸ್ವರೂಪ ನಿರ್ಧಾರ ಮಾಡಲಿಕ್ಕೆ ಹೇಗೆ ತಿಳಿಯುತ್ತದೆ. ತ್ರಿಜಗದ್ಗುರುಗಳವರು, ಶ್ರೀ ಭಾರತಿದೇವಿ ಶ್ರೀಮುಖ್ಯ ಪ್ರಾಣದೇವರ ಯೋಗ್ಯತೆ ರಮಾದೇವಿಬಲ್ಲಳು. ಶ್ರೀರಮಾಪತಿ ಆದಿನಾರಾಯಣ ಬಲ್ಲ. ಅಲ್ಪ ಮಾತಿಗೆ ತೋರಿದ್ದು ಶ್ರೀಗುರು ಜಗನ್ನಾಥದಾಸರಾಯರ ಅನುಗ್ರಹಕ್ಕೆ ಪಾತ್ರರಾದ ಕುಂಟೋಜೀಪುರನಿವಾಸಿ ಶ್ರೀಗುರು ಶ್ರೀಶರಾಯರ ಚರಣಾನುಗ್ರಹದಿಂದ ಸರ್ವಸ್ವೋತ್ತಮರಿಗೆ ವಿಜ್ಞಾಪನರೂಪವಾಗಿ ಬರಕೊಂಡಿದೆ. ಚಿತ್ತೈಸಿ ಅಪರಾಧಕ್ಷಮಾ ಮಾಡಿ ಉಧೃತನನ್ನ ಮಾಡುವಲ್ಲಿ ಶ್ರೀ ಸರ್ವಜ್ಞ ಚಿತ್ತರಾಗಿ ನಮೋ ನಮಃ "ಮಾತರ್ಮೇಮಾತರಿಶ್ವನ್ ಪಿತರತುಲಗುರೋ ಭ್ರಾತರಿಷ್ಟಾಪ್ತಬಂಧೋ । ಸ್ವಾಮಿನ್ ಸರ್ವಾಂತರಾತ್ಮನ್ನ ಜರ ಜರಯಿತರ್ಜನ್ಮ ಮೃತ್ಯಾಮಯಾನಾಂ ॥ ಗೋವಿಂದೇ ದೇಹಿ ಭಕ್ತಿಂ ಭವತಿಚ ಭಗವನ್ ಊರ್ಜಿತಾಂ ನಿರ್ನಿಮಿತ್ತಾಂ । ನಿರ್ವ್ಯಾಜಾಂ ನಿಶ್ಚಲಾಂ ಸದ್ಗುಣಗಣ ಮಹತೀಂ ಶಾಶ್ವತೀಂ ಮಾಶುದೇವ"॥ ಶ್ರೀರಮಾಕಾಂತ ನಾರಾಯಣನ ಮಾಹಾತ್ಮೆ ಶ್ರೀ ಲಕ್ಷ್ಮೀಪತಿ ಮಾಡೋ ವ್ಯಾಪಾರ ಯಾರಿಗೆ ತಿಳಿತದೆ. ಜೀವ ಪರಮ ಸೂಕ್ಷ್ಮವಾದುದು. ಈ ತ್ರಿವಿಧ ಚೇತನರ, ತ್ರಿವಿಧ ಜಡಜಡಗಳ, ವ್ಯಾಪಾರ ಜೀವನಲ್ಲಿ ಆಗುತ್ತವಲ್ಲ; ಜಡಗಳಿಗೆ ಈ ಸಾಮರ್ಥ್ಯ ಹೇಗೆಬಂದಿತು ? ತ್ರಿಗುಣಗಳನು ಸರಿಸಿ, ಅಹಂಕಾರ ಮಮಕಾರ ಹಾಗೂ ಕಾಮಕ್ರೋಧ ಲೋಭ ಮದಮೋಹ ಮತ್ಸರ ಏವಮಾದಿ ವ್ಯಾಪಾರ ಆಗುವದು ಶ್ರೀ ಪರಮಾತ್ಮನ ಬಂಧಕಶಕುತಿ



ಯಿಂದ ಆಗುತ್ತದೆ. ಶ್ರೀ ನಾರಾಯಣ ತನ್ನ ಮಾಹಾತ್ಮೆ ತಾನೇ ಬಲ್ಲ. ಜಡಗಗಳಿಂದ ಆಗುವ ಕಾರ್ಯ ಚೇತನದಲ್ಲಿ ಆವರಿಸಿ, ಸರ್ವತ್ರವ್ಯಾಪ್ತನಾಗಿ ಪ್ರೇರಿಸುವಂಥ ಸ್ವಾಮಿ ಶ್ರೀ ಪವಮಾನ ಗುರುಗಳವರ ಮುಖದಿಂದ ಸರ್ವರಂತರ್ಗತನಾಗಿ ವ್ಯಾಪಾರ ಮಾಡಿಸುವದು ಶ್ರೀಹರಿಗೇನು ಆಶ್ಚರ್ಯ. ಇದಕ್ಕೆ ಪ್ರಮಾಣ

ಏಕಾದಶಸ್ಕಂಧ ತಾತ್ಪರ್ಯ । "ಸಾತ್ವಿಕಾರಾಜಸಾಸ್ತತ್ರ ತಾಮಸಾದಿ ಪ್ರಭೇದತಃ । ತೇಷು ಸರ್ವೇಷು ಜೀವೇಷು ದೇಹೇಷು ಚ ವಸತ್ಯಯಂ ॥ ೧ ॥ ಪವಮಾನಾಭಿಧೋವಾಯುಃ ಉತ್ತಮಾನಾಂ ಶರೀರಗಃ । ಸ್ವರೂಪೇಂದ್ರಿಯ ದೇಹೇಷು ಮಾತರಿಶ್ವಾಭಿಧಾನತಃ॥ ೨ ॥ ಸ್ಥೂಲ ದೇಹಸ್ಯೋಪಿ ಮುಖ್ಯಪ್ರಾಣಭಿದೋಚ್ಯತೇ ॥ ಧತ್ತೇ ಲಿಂಗಶರೀರಸ್ಥಃ ಸೂತ್ರಂ ನಾಮ ಮಹಾಪ್ರಭುಃ ॥೩॥ ಸೂಕ್ಷ್ಮದೇಹ ಕಗ ಸ್ಥೋಪಿ ಸೂಕ್ಷ್ಮರೂಪೀತಿ ಚೋಚ್ಯತೇ॥ ಮಧ್ಯಮಾಧಮ ದೇಹೇಷು ಪ್ರಾಣಾಪಾನಾಭಿಧಾನತಃ ॥೪॥ ಪೂರ್ವೋಕ್ತಕೇಷು ಚ ಸರ್ವೇಷು ಸ್ಥೂಲ ದೇಹೇಂದ್ರಿಯಾದಿಷು । ಸ್ವರೂಪ ದೇಹ ಬುಧ್ಯಾದಿಸ್ಥಿತತ್ವೇನ ಮಹಾವಿಭುಃ ॥೫॥ ಪ್ರೇರಯತ್ಯಖಿಳಂವಿಶ್ವಂ ಜಂಗಮಾ ಜಂಗಮಂತಥಾ। ತತ್ತದ್ದೇಹ ಗತಃ ಪ್ರಾಣ ತತ್ತದ್ದೇಹಸ್ಥಂ ಮೂರ್ತಿನಾ ॥೬॥ ಅನಿರುದ್ಧನಾಮ್ನಾಹಿ ಸರ್ವ ಪ್ರೇರಕ ಮೂರ್ತಿನೇತಿ ಪವಮಾನಸಂಹಿತಾಯಾಂ ॥ ೭ ॥

**ಪದ್ಯ ೫**– ಚತುರವದನನರಾಣಿ=ನಾಲ್ಕು ಮುಖದಿಂದ ಚತುರ್ವೇದ=ಪಾರಾಯಣ ಮಾಡುತ್ತ ನಾಲ್ಕುವೇದಗಳಿಂದ ಶ್ರೀಆದಿನಾರಾಯಣನ ಮಾಹಾತ್ಮೆ ಕೊಂಡಾಡುವಂಥ, ಮಹತ್ತತ್ವಾಭಿಮಾನಿಯಾದ ಚತುರಾಸ್ಯವುಳ್ಳ ಬ್ರಹ್ಮದೇವರ ನಿಜಪತ್ನಿಯಾದ ಬುದ್ಧ್ಯಭಿಮಾನಿ ಸರಸ್ವತೀದೇವಿ । ಅತಿರೋಹಿತ ವಿಮಲ ವಿಜ್ಞಾನಿ । ಹೇ ಜನನಿ ! ಶ್ರೀರಮಾವಲ್ಲಭ ಶ್ರೀ ಆದಿನಾರಾಯಣನ ಮಂಗಳಕರವಾದ ಗುಣರೂಪವಿಚಾರಿಸಿ ತಿಳಿಯೋ ವಿಷಯವಾಗಿ– "ಅತಿರೋಹಿತ"= ಜ್ಞಾನತಿರೋಹಿತ ಆಗದಲೆ, ಅಚ್ಛಿನ್ನವಾದ ಜ್ಞಾನ ಭಕ್ತಿಗಳಿಂದ ಅತಿ ನಿರ್ಮಲತರವಾದ ವಿಶೇಷಾಕಾರವಾದ ಜ್ಞಾನವುಳ್ಳಂಥ, ಹೇ ತಾಯೆ ! " ನಿಗಮಪ್ರತತಿಗಳಿಗಭಿಮಾನಿ" = ಅನಂತ ವೇದಗಳಿಗೆ ರಮಾ ತರುವಾಯ ಅಮುಖ್ಯಾಭಿಮಾನಿಯಾದ ಹೇ ಮಾತೆಯೇ ॥ "ವೀಣಾಪಾಣಿ"= ಶ್ರೀ ರಮಾಕಾಂತ ಪ್ರಣವ ಪ್ರತಿಪಾದ್ಯ ಶ್ರೀ ನಾರಾಯಣನ ಮಾಹಾತ್ಮೆಯನ್ನು ಚತುರ ವೇದಾಭಿಮಾನಿಯಾಗಿ, ಸಾಮಗಾಯನಮಾಡುತ್ತ, ಕರಪದ್ಮದಲ್ಲಿ ವೀಣಾಧರಿಸಿ

ಆ ವೀಣೆಯಿಂದ ಚತುರವೇದಗಳನ್ನು ನುಡಿಸಿ "ಬಾರಿಸುತ್ತ,"ಸ್ವಾಮಿಯ ಗುಣ ವರ್ಣನೆಮಾಡುವ ಸರಸ್ವತೀದೇವಿಯೆ! ಬ್ರಹ್ಮಾಣಿ=ಬ್ರಹ್ಮಪತ್ನಿಯಾದ ಬ್ರಹ್ಮಾಣಿ ಎಂಬೋ ನಾಮಧ್ಯೇಯವುಳ್ಳಂಥ ಗಾಯತ್ರೀರೂಪಿಯೆ ! ॥ ನುತಿಸಿಬೇಡುವೆ=ಹೇ ತಾಯಿಯೇ ! ಸ್ತೋತ್ರ ಮಾಡಿ ನಿನ್ನ ಬೇಡಿಕೊಳ್ಳುತ್ತೇನೆ. "ಲಕ್ಷ್ಮೀಪತಿಯ ಗುಣಗಳ ತುತಿಪುದಕೆ"=॥ ಬುಧ್ಯಭಿಮಾನಿ ಹೇ ಸಾವಿತ್ರಿಯೇ ! ಶ್ರೀಲಕ್ಷ್ಮೀಪತಿ ಶ್ರೀ ನರಸಿಂಹದೇವರ ಮಂಗಳಕರವಾದ ಗುಣಗಳ ಸ್ತೋತ್ರ ಮಾಡುವದಕ್ಕೆ "ಸನ್ಮತಿಯ ಪಾಲಿಸಿ"=ಸಮೀಚೀನವಾದ ಬುದ್ಧಿಯನ್ನು ಪಾಲಿಸಿ, ನಿರ್ಮಲ ವಾದ ಸುಸ್ಥಿರವಾದ ಜ್ಞಾನವನ್ನು ಅನುಗ್ರಹ ಮಾಡು. "ನೆಲಸು ನೀಮದ್ವ ದನಸದನದಲಿ"ಕ ॥ ನನ್ನ ಮುಖವೆಂಬ ಮನೆ(ಸದನ)ಯಲ್ಲಿ ನಿಂತು, ಜಿಹ್ವಾಂ ತರ್ಗತಳಾಗಿ, ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀರಮಾಕಾಂತ ನಾರಾಯಣನಗುಣಗಳ, ನಿರ್ಮಲತರ ರೂಪಗಳ, ಅತಿ ವಿಚಿತ್ರ ಕ್ರಿಯೆಗಳ ಸ್ತೋತ್ರಮಾಡಿಸಿ, ಜ್ಞಾನಭಕ್ತಿಪ್ರದಳಾಗಿ ಉದ್ಧೃತನನ್ನ ಮಾಡು.

**ಪದ್ಯ ೬** "ಕೃತಿರಮಣ ಪ್ರದ್ಯುಮ್ನನಂದನೆ"= ಸೂಕ್ಷ್ಮ ಸೃಷ್ಟಿಯಲ್ಲಿ ಶ್ರೀ ಕೃತಿಪತಿ ಪ್ರದ್ಯುಮ್ನ ನಾಮಕ ಹರಿಯದೆಶೆಯಿಂದ ಅವತರಿಸಿದ (ಜನಸಿದ) ಭಕ್ತ್ಯಭಿಮಾನಿ ಭಾರತೀದೇವಿಯೆರೆ ! ಚತುರವಿಂಶತಿ ತತ್ವಪತಿ ! ಅವ್ಯಕ್ತಾದಿ ಇಪ್ಪತ್ತುನಾಲ್ಕು ತತ್ವಾಭಿಮಾನಿಗಳಿಗೆ ಪ್ರೇರಕರಾದಂಥ ಪವಮಾನರು–ದೇವತೆ ಗಳಿಗೆ ಗುರುವೆನಿಸುತಿಹ= ಗರುಡ ಶೇಷ ಭವಾದಿಗಳಿಗೆ ತತ್ವೋಪದೇಶಕರಾಗಿ ಸ್ವೋತ್ತಮರೆನಿಸಿಕೊಂಬುವಂಥ ವಿಜ್ಞಾನಾಭಿಮಾನಿಯಾದ ಶ್ರೀಗುರು ಪವ ಮಾನರಾಯ ಗುರುವರರ, ನಿಜಪತ್ನಿ= ಶ್ರೀಪ್ರಾಣದೇವರು ಅವತಾರ ಮಾಡಿ ಯಾವ ಯಾವ ನಾಮದಿಂದ ಕರೆಸುತ್ತಾರೋ, ಅಲ್ಲಲ್ಲಿ ಶ್ರೀಭಾರತೀದೇವಿಯರು ಅವತಾರ ಮಾಡಿ, ತತ್ಪತ್ನಿಯರಾಗಿರುತ್ತಾರಾದ ಕಾರಣ, ಶ್ರೀಪ್ರಾಣದೇವರ ನಿಜ ಪತ್ನಿಯರು ನಿಯತ ಪತ್ನಿಯರು, ಭಾರತೀದೇವಿಯರು.

ಇಲ್ಲಿ ಪೂರ್ವಪಕ್ಷ—ಅವ್ಯಕ್ತ ತತ್ವದಲ್ಲಿ ಶ್ರೀರಮಾದೇವಿಯರೇ ಅಭಿಮಾನಿ ಗಳಾಗಿರುತ್ತಾರೆ. ಪ್ರಾಣದೇವರಿಗೆ ಹೇಗೆ ಆವಾಸ ಕೂಡುತ್ತದೆ ? ಎಂಬ ಶಂಕಾ ಬಂದರೆ ಮುಖ್ಯಾಭಿಮಾನಿ ಶ್ರೀರಮಾ, ಅವ್ಯಕ್ತ ತತ್ವಕ್ಕೆ ನಿಯಾಮಕಳು. ಶ್ರೀ ರಮಾದೇವಿ ಅಂತರ್ಗತನಾಗಿ ಶ್ರೀ ನಾರಾಯಣನು, ಶ್ರೀ ಪ್ರಾಣದೇವರ ಅಂತ ರ್ಯಾಮಿಯಾಗಿ ಗರುಡ ಶೇಷಾದಿಗಳ ಅವ್ಯಕ್ತಾದಿ ತತ್ವಗಳಲ್ಲಿ ಪ್ರೇರಕನಾಗಿ



ವ್ಯಾಪಾರ ಮಾಡುತ್ತಾನೆ. ಶ್ರೀ ಪ್ರಾಣದೇವರು ಗರುಡ ಶೇಷ ರುದ್ರಾದಿ ದೇವತೆಗಳಿಗೆ ಸ್ವೋತ್ತಮರು. ಸ್ವಾಧಮರ ತತ್ವಗಳಲ್ಲಿ, ಸ್ವೋತ್ತಮರ ಪ್ರೇರಣೆ ಉಂಟಾಗುತ್ತದೆ. ಯೆಂತ ಜ್ಞಾನಿಗಳು ಹೇಳುತ್ತಾರೆ. ಶ್ರೀಮುಖ್ಯ ಪ್ರಾಣರು ಜೀವೋತ್ತಮರು, ಶ್ರೀ ನಾರಾಯಣನ ಅನುಗ್ರಹಕ್ಕೆ ಪೂರ್ಣಪಾತ್ರರು, ಶ್ರೀ ವಾಯುದೇವರ ದ್ವಾರದಿಂದಲೇ ಸರ್ವದೇವತೆಗಳ ತತ್ವಕಾರ್ಯ ಶ್ರೀ ಪರ ಮಾತ್ಮ ಮಾಡಿಸುತ್ತಾನೆ. ಶ್ರೀ ಪ್ರಾಣದೇವರ ತತ್ವಗಳಿಗೆ ಶ್ರೀ ರಮಾದೇವಿ ಯರು ಅಭಿಮಾನಿಗಳು. ಶ್ರೀ ರಮಾದೇವಿಯರಿಗೆ ಮುಖ್ಯ ಪ್ರೇರಕ ಶ್ರೀನಾರಾ ಯಣ; ಸಮಸ್ತ ದೇವತೆಗಳಿಗೆ ನಿಯಮ್ಯ ನಿಯಾಮಕನಾಗಿ, ಸ್ವೋತ್ತಮರಂತ ರ್ಗತನಾಗಿ ಪ್ರೇರಕನಾಗಿ, ಸ್ವಾವರಂತರ್ಗತನಾಗಿ ಪ್ರೇರಿಸಿಕೊಂಡು ಸ್ವೋತ್ತ ಮಸಾಧ್ವಮರಲ್ಲಿ ವ್ಯಾಪಾರ ಮಾಡಿ, ಸ್ವಾಧಮರ ತತ್ವಗಳಲ್ಲಿ ಸ್ವೋತ್ತಮರ ಪ್ರೇರಕತ್ವ ನಡೆಸುತ್ತಾನೆ. ಕಾರಣ ಶ್ರೀ ಪ್ರಾಣದೇವರು ಚತುರ ವಿಂಶತಿ ತತ್ವಗಳಲ್ಲಿ ಪ್ರೇರಕರೆನಿಸುತ್ತಾರೆ, ("ಈ ಪ್ರಮೇಯ ಬಹುರಹಸ್ಯವಾದದು ; ನಿಜವಾದ ಜ್ಞಾನಿಗಳ ತತ್ವ") ಇಂತು ಶ್ರೀ ಪ್ರಾಣದೇವರ ನಿಜಪತ್ನಿಯಾದ ಶ್ರೀಭಾರತಿದೇವಿ, ಚತುರವಿಂಶತಿ ತತ್ವಪತಿ. । ಚತುರ್ವಿಂಶತಿತತ್ವ ಅವ್ಯಕ್ತಾದಿ ಪೃಥ್ವಿವರೆಗೆ ೨೪ ತತ್ವಗಳು. ಅವ್ಯಕ್ತ ತತ್ವಕ್ಕೆ ಮುಖ್ಯಾಭಿಮಾನಿ ರಮಾದೇವಿ ಯವರು. ಅಮುಖ್ಯಾಭಿಮಾನಿ ಸರಸ್ವತೀ ಭಾರತಿಯರು. ಮನೋಭಿಮಾನಿ ಗೌರೀಶ ಮಹಾದೇವರು. ಅವಾಂತರಾಭಿಮಾನಿ ಇಂದ್ರ, ಮನೋಕಾರ್ಯ ಇಂದ್ರನ್ನಮಾನಿಮಾಡಿ, ಇಂದ್ರಾಂತರ್ಗತನಾಗಿ, ಮಹಾರುದ್ರದೇವರ ವ್ಯಾಪಾರ ನಾರಾಯಣ ನಡೆಸುತ್ತಾನೆ. ಆ ಪ್ರಕಾರ ಪ್ರಾಣಾಂತರ್ಯಾಮಿಯಾಗಿ, ಶ್ರೀ ರಮಾದೇವಿಯವರು, ಪ್ರಾಣದೇವರ ವ್ಯಾಪಾರ ನಡೆಸುತ್ತಾರೆ. ಲಿಂಗದೇ ಹದಲ್ಲಿ ಪ್ರಾಣದೇವರ ವ್ಯಾಪಾರ ಇದೆಯಂತ ಜ್ಞಾನಿಗಳು ಹೇಳುತ್ತಾರೆ. (ತ್ರಿವಿಧ ಲಿಂಗಗುಣಕಾರ್ಯ ಪ್ರಾಣದೇವರಿಗೆ ಸೋಂಕದು, ಲಿಂಗವು ಪ್ರಾಣ ಭಾರತಿಯರಿಗೆ ದಗ್ಧಪಟಾಯಮಾನವಾಗಿದೆ) ಈ ಪ್ರಕಾರ ಹೇಳುವದು ಉತ್ತಮ ಪಕ್ಷ.

ಮತ್ತು ಇನ್ನೊಂದು ಪ್ರಕಾರ– ಪೃಥಿವ್ಯಾದಿ ಮಹತ್ತತ್ವಕ್ಕೆ ೨೩ ತತ್ವಗಳು. ಬುದ್ಧಿ ತತ್ವಸಹಿತ ಚತುರ್ವಿಂಶತಿ ತತ್ವಗಳಿಗೆ ಅಧಿಪತಿಗಳು ವಾಯುದೇವರು. ಇಂಥ ಮಹಿಮೋಪೇತನಾದ ಶ್ರೀ ಮಾರುತನ ನಿಜಪತಿಯಾದ ಹೇ ಜನನಿಯೇ

ಸತತ ಹರಿಯಲಿ ಗುರುಗಳಲಿ ಸದ್ರತಿ=ಸರ್ವದಾ ಶ್ರೀಹರಿ ಪಾದದಲ್ಲಿ, ಶ್ರೀಹರಿ
ಯೇ ಸರ್ವೋತ್ತಮನೆಂಬ ಜ್ಞಾನದಿಂದ, ಪರಮರತಿಯಿಂದ ಕೊಂಡಾಡುವಹಾಗೆ
"ಗುರುಗಳಲಿ= ಶ್ರೀ ಭಾರತೀ ಪತಿಮುಖ್ಯಪ್ರಾಣಾತ್ಮಕ ಶ್ರೀಮದ್ಧನುಮದ್ಭೀಮ
ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯಾದಿ ಅನೇಕ ವಾಯು ಅವತಾರ
ರೂಪವಾದ ಗುರುಗಳವರ ಪಾದ ಪಂಕಜದಲ್ಲಿ- ಸದ್ರತಿಯ ಪಾಲಿಸು=ಶ್ರೀಹರಿ
ಗುರುಗಳವರ ಮಾಹಾತ್ಮೆ ಜ್ಞಾನಪೂರ್ವಕ ಸಮೀಚೀನವಾದ ರತಿಯನ್ನು,
ಅನುಗ್ರಹ ಮಾಡು. ಹೇ ವಿದ್ಯುನ್ನಾಮಕೇ ! ಹೇ ತಾಯೆ, "ಭಾಗವತ ಭಾರತ
ಪುರಾಣ ರಹಸ್ಯತತ್ವಗಳರುಪು ಪ್ರಕರುಣದಲಿ=ಶ್ರೀಮನ್ ಮಹಾಭಾಗವತದಲ್ಲಿ
ಉಕ್ತವಾದಂಥ ಪರಮತತ್ವ-ರಹಸ್ಯವಾದಂಥ ಪ್ರಮೇಯ ಭಾಗಗಳ, ಶ್ರೀ ಮಹಾ
ಭಾರತದಲ್ಲಿ ಶ್ರೀ ವೇದವ್ಯಾಸದೇವರ ಮುಖಕಮಲದಿಂದ ಮಹಾಪ್ರಮೇಯ
ಭಾಗಗಳನ್ನೂ ಉಕ್ತವಾದಂಥ ಅಮೃತಕರವಾದ ವಚನಗಳನ್ನೂ, ಪುರಾಣಗ
ಳಲ್ಲಿ ಕೆಲವು ರಹಸ್ಯವಾದ ತತ್ವಭಾಗದ ಮಹಾಪ್ರಮೇಯಗಳನ್ನೂ , ಅರುಪು=
ಶ್ರೀ ಮದ್ಗುರುವರ ಅಂತರ್ಗತಳಾಗಿ, ತತ್ವರಹಸ್ಯಗಳ ಶ್ರವಣ ಮಾಡಿಸಿ ಮಮ
ಹೃದಯಾಂತರ್ಯಾಮಿಯಾಗಿ ಪ್ರೇರಿಸಿ, ಮನನ ಮಾಡಿಸು. ಹೇ ಭಕ್ತ್ಯಭಿ
ಮಾನಿ ಶ್ರೀ ಭಾರತೀದೇವಿಯರೆ! ಕರುಣದಲಿ=ಪರಮಾನುಗ್ರಹದಿಂದ, ಪರ
ಮೋತ್ತಮವಾದ ತತ್ವರಹಸ್ಯಗಳ, ಪ್ರೇರಣೆ ಮಾಡಿ ತಿಳಿಸು. ಗಾಯತ್ರಿ
ನಾಮಕಳಾದ ಮಜ್ಜನನಿಯಾದಂಥ ಶ್ರೀ ಭಾರತಿದೇವಿಯರನ್ನು, ಈ ಪ್ರಕಾರ
ಶ್ರೀ ಮದ್ಗುರುವರ ಶ್ರೀ ಜಗನ್ನಾಥದಾಸರಾಯ ಮಹಾನುಭಾವರು ಶ್ರೀ ಭಾರ
ತೀದೇವಿಯರ ಸ್ತೋತ್ರ ಮಾಡಿದ ವಿಧಾನದಂತೆ, ಶ್ರೀ ಹರಿಭಕ್ತರು,
ಶ್ರೀ ಭಾರತೀದೇವಿಯರ ಮಾಹಾತ್ಮೆ ವರ್ಣನೆ ಮಾಡಿದರೆ, ಶ್ರೀ ರಮಾ
ಕಾಂತ ಆದಿನಾರಾಯಣನ ಪದಕಮಲದಲ್ಲಿ ಶ್ರೀ ಗುರುಗಳವರ ಚರಣಾರ
ವಿಂದಗಳಲ್ಲಿ, ರತಿ=ಮಹಾವಿಶ್ವಾಸದಿಂದ, ಆದರ ಪುರಸ್ಸರ ಸ್ವಾಮಿಯನ್ನು
ಕೊಂಡಾಡುವಂಥ ಜ್ಞಾನಿಗಳಿಗೆ ಭಕ್ತಿಪ್ರದರಾಗಿ, ಇಹಪರದಲ್ಲಿ ಆನಂದ ಉನ್ನಹ
ಮಾಡಿ, ಶ್ರೀ ಭಾರತೀದೇವಿಯರು ಮುಕ್ತಿಮಾರ್ಗ ಪ್ರದರ್ಶಕರಾಗುವರು. ||೬||

**ಪದ್ಯ ೭**– ವೇದಪೀಠ= ವೇದಕ್ಕೆ ಪ್ರಣವ ಮೊದಲು; ಪ್ರಣವದಿಂದಲೇ
ಸಕಲ ವೇದ, ಶಾಸ್ತ್ರಗಳ ಉತ್ಪತ್ತಿ. ಪ್ರಣವ ಪ್ರತಿಪಾದ್ಯ ಶ್ರೀ ನಾರಾಯ
ಣಾತ್ಮಕ ವೇದ ವ್ಯಾಸದೇವರು, ಭಾರತ ಭಾಗವತ ಶ್ರುತಿ ಸ್ಮೃತಿಗಳಿಗೆ ಶ್ರೀ



ಬಾದರಾಯಣರಿಂದಲೇ ಅಭಿವ್ಯಕ್ತಿ ವೇದಗಳಿಗೆ ಮೂಲಸ್ಥಾನ ಶ್ರೀವೇದವ್ಯಾಸ
ದೇವರು. ವೇದಾದಿಗಳಿಗೆ ಆಧಾರರೂಪರಾಗಿದ್ದಾರೆ. ಕಾರಣ ವೇದಪೀಠ
ರೆಂದು ವೇದ ವ್ಯಾಸದೇವರು ಕರೆಸಿಕೊಳ್ಳುತ್ತಾರೆ. ವಿರಿಂಚಿ=ಬ್ರಹ್ಮದೇವರು
ಭವ=ರುದ್ರದೇವರು, ಶಕ್ರಾದಿಸುರವಿಜ್ಞಾನದಾಯಕ=ದೇವೇಂದ್ರನೇ ಮೊದ
ಲಾದ ಸಮಸ್ತ ದೇವತೆಗಳಿಗೆ ತರತಮಾನುಸಾರ ವಿ=ವಿಶೇಷವಾದ ಜ್ಞಾನ
ಪ್ರದಾಯಕರು. ಮೋದ ಚಿನ್ಮಯಗಾತ್ರ= ಜ್ಞಾನಾನಂದಮಯ ಶರೀರವುಳ್ಳಂಥ
ಸ್ವಾಮಿ. (ಲೋಕ) ಪರಮಪವಿತ್ರ= ಸಕಲ ಪದಾರ್ಥಗಳು ಅಪವಿತ್ರವಾದವು,
ಹೇ ಬಾದರಾಯಣರೆ ! ನಿಮ್ಮ ಸ್ಮರಣೆಯಿಂದ ಸಕಲವೂ ಪವಿತ್ರವಾಗುತ್ತದೆ.
ಸಮಸ್ತ ಕರ್ಮಗಳು ಪೂರ್ಣವಾಗುತ್ತವೆ. ಪವಿತ್ರಕ್ಕೆ ಪವಿತ್ರತಮವಾದ
ವಸ್ತು, ಶ್ರೀ ಬಾದರಾಯಣದೇವರೇ ಗುರುಗಳು. ಪ್ರಮಾಣ=ಅಪವಿತ್ರಃ ಪವಿ
ತ್ರೋವಾ ಸರ್ವಾವಸ್ಥಾಂಗತೋಪಿವಾ । ಯಃ ಸ್ಮರೇತ್ ಪುಂಡರೀಕಾಕ್ಷಂ
ಸಬಾಹ್ಯಾಭ್ಯಾಂತರಃಶುಚಿಃ ||೧||·ಯಸ್ಯ ಸ್ಮೃತ್ಯಾಚನಾಮೋಕ್ತ್ಯಾತಪಃ ಸಂಧ್ಯಾ
ಕ್ರಿಯಾದಿಷು । ನ್ಯೂನಂ ಸಂಪೂರ್ಣತಾಂಯಾತಿ" || ಶ್ರೀ ರಮಾವಲ್ಲಭ ನಾರಾ
ಯಣಸ್ಮರಣೆಯಿಂದ ಸಕಲವೂ ಪವಿತ್ರವೆನಿಸುತ್ತವೆ. ಶ್ರೀ ನಾರಾಣನ ವಿಸ್ಮ
ರಣೆಯೇ ಮೈಲಿಗೆ, ಅಪವಿತ್ರವೆನಿಸುತ್ತದೆ. ವೇದವ್ಯಾಸದೇವರು ಪರಮ ಪವಿತ್ರ
ಕೇವಲೋತ್ತಮವಾದ ಪವಿತ್ರರು. ಸುಚರಿತ್ರ= ಸಮೀಚೀನವಾದ ಚರಿತ್ರೆ
ವುಳ್ಳಂಥ ಸ್ವಾಮಿ. ಭೇದ ಭೇದವಿಹೀನ= ಪರಮಾತ್ಮ ಅಚ್ಛೇದ್ಯ ಅಭೇದ್ಯ,
ಶ್ರೀ ನಾರಾಯಣನ ರೂಪಗಳಿಗೆ ಗುಣಗಳಗೆ, ಅಭೇದ=ಭೇದರಹಿತನಾದ
ಸ್ವಾಮಿ. ಕುಟಿಲಾಂತಾದಿ ಮಧ್ಯವಿದೂರ= ನಿಷ್ಕುಟಿಲ=ಕಪಟ ರಹಿತ, ಆದಿ
ಮಧ್ಯ-ಅಂತ್ಯ ಇಲ್ಲದವ. ಈ ಮೂರರಿಂದಲೂ ದೂರ ಅಗೋಚರ. ಆದಾನಾದಿ
ಕಾರಣ=ಆದಿಗೆ ಮೊದಲು ಪ್ರಣವಕ್ಕೆ ಕಾರಣ, ಶ್ರೀ ಆದಿನಾರಾಯಣ, ಆದಾ
ನಾದಿಕಾರಣ= ಶ್ರೀರಮಾ ಬ್ರಹ್ಮಾದಿಗಳಿಗೆ ಮೂಲದೇವತೆ ಶ್ರೀ ನಾರಾಯಣ.
ಪ್ರಣವ ಪ್ರತಿಪಾದ್ಯ ಆದಿ ಮೊದಲಿಗೆ ಕಾರಣ, ಶ್ರೀಪತಿ ಅನಾದಿ. ಆದಿಗೆ ಪುರಾ
ತನ, ತತ್ಪೂರ್ವಕ್ಕೆ ಕಾರಣೀಭೂತರೆಂದೂ, ಆದಾನಾದಿಕಾರಣವೆಂದರೇನು ?
ಆದಾನ ಎಂದರೆ ತೊಗೊಂಬೋಣ, ಅಂದರೆ ಚರಾಚರ ಜಗತ್ತು ಉದರದಲ್ಲಿ
ತೆಗೆದುಕೊಂಡು ಇಟ್ಟುಕೊಳ್ಳೋಣ, ಇಂಥ ಆದಾನ, ಆದಿ-ಪದದಿಂದ ಸೃಷ್ಟಿ
ಸ್ಥಿತಿಲಯ, ಯಾವತ್ತಕ್ಕೂ ಕಾರಣ, ಮುಖ್ಯ ಮೂಲ ಕಾರಣರೆಂತಲೂ ಅರ್ಥ.

ಬಾದರಾಯಣರೇ! ಪಾಹಿ ಸತ್ರಾಣ= ಸಮಸ್ತಜೀವ ಜಡಬ್ರಹ್ಮಾಂಡ ಪಿಂಡಾಂಡ ಜಗತ್ತಿಗೆ ಸಮೀಚೀನವಾದ ತ್ರಾಣರಾದ ವೇದವ್ಯಾಸದೇವರೆ! ಪಾಹಿ=ರಕ್ಷಿಸರಿ.

**ಪದ್ಯ ೮** ಕ್ಷಿತಿಯೊಳಗೆ=ಭೂಮಿಯ ಮೇಲೆ, ಮಣಿಮಂತ ಮೊದಲಾದ ದುರಾತ್ಮರು= ಮಣಿಮಂತನೆ ಮೊದಲಾದ ದೈತ್ಯಾಧಮರಾದ ದುರ್ಮನವುಳ್ಳ ತಮೋಧಿಕಾರಿಗಳು,ಒಂದಧಿಕವಿಂಶತಿಕುಭಾಷ್ಯವರಚಿಸಿ=ಇಪ್ಪತ್ತೊಂದುಕುಮತ ಕುತ್ಸಿತವಾದ,ಈಶನೇ ನಾನೆಂಬೋಅದ್ವೈತಪರವಾದ ಕುಭಾಷ್ಯಗಳ ರಚಿಸಲು, ನಡುಮನೆಯೆಂಬ ಬ್ರಾಹ್ಮಣನಾ=ಮಧ್ಯತಾಳಾ ಮಠದಲ್ಲಿ ವಾಸ ಮಾಡಿದ ಮಧ್ಯಗೇಹರೆಂಬೋ ಭೂಸುರರ, ಸತಿಯ ಜಠರದೊಳವತರಿಸಿ=ಬ್ರಾಹ್ಮಣ ಪತ್ನಿಯ ಉದರದಲ್ಲಿ, ಶ್ರೀ ಭಾರತಿರಮಣ=ಮುಖ್ಯ ಪ್ರಾಣದೇವರು ಅವತಾರ ಮಾಡಿ, ಮಧ್ವಾಭಿಧಾನದಿ=ಶ್ರೀಮಧ್ವರಾಯರೆಂಬೋನಾಮ ಉಳ್ಳವರಾಗಿ, ಚತುರದಶಲೋಕದೊಳು= ಹದಿನಾಲ್ಕು ಲೋಕದೊಳಗೆ, ಮೆರೆದ ಅಪ್ರತಿಮ ಗೊಂದಿಸುವೆ. ಶ್ರೀಮದಾನಂದ ತೀರ್ಥ ಭಗವತ್ಪಾದಾಚಾರ್ಯ ಗುರುಗಳವರು. ಶ್ರೀಹರಿ ಸರ್ವೋತ್ತಮ, ತಾರತಮ್ಯ ಪಂಚಭೇದ ಸತ್ಯವೆಂದು, ಡಂಗುರ ಹೊಯಿಸಿ, ಮಧ್ವಮತ ಸಿದ್ಧಾಂತಗೈಸಿ ಮೆರದಂಥ, ಅಪ್ರತಿಮ ಶ್ರೀಗುರುಗಳು. ಸಮಾನರಹಿತರಾದ ಶ್ರೀಮಧ್ವರಾಯರ ಮುನಿಗಳ ಪದಕಮಲಕ್ಕೆ ವಂದನೆ ಮಾಡುವೆ.

ಇಲ್ಲಿ ಪೂರ್ವಪಕ್ಷ– ಶ್ರೀ ವೇದವ್ಯಾಸದೇವರು ಸರ್ವೋತ್ತಮದೇವತೆ, ಶ್ರೀ ಮದಾನಂದ ತೀರ್ಥರು ಜೀವೋತ್ತಮರು; ಜಗದ್ಗುರುಗಳು. ಶ್ರೀ ಹರಿಗುರುಗಳಿಗೆ ಸರಸ್ವತೀ ಭಾರತೀ ದೇವಿಯರು ಕಡಿಮೆ. ಸರಸ್ವತೀ ಭಾರತೀದೇವಿಯ ಸೋತ್ರ ಮಾಡಿದ ನಂತರ, ಶ್ರೀ ವೇದ ವ್ಯಾಸರ. ಶ್ರೀಮದಾನಂದ ತೀರ್ಥಾರ್ಯರ ಸ್ತೋತ್ರಮಾಡಿದರೆ, ತಾರತಮ್ಯ ಹ್ರಾಸವಾಗುತ್ತದೆಂಬೋ ಶಂಕಾಬಂದರೆ,ಗುರು ಮಂತ್ರದಲ್ಲಿ ವಂದನ ಮಾಡಿದ ಪ್ರಕಾರ, ದ್ವಾದಶ ನಮಸ್ಕಾರ ಕ್ರಮದಂತೆ ಶ್ರೀ ಗುರು ಜಗನ್ನಾಥದಾಸರಾಯರು, ಶ್ರೀ ಹರಿಕಥಾಮೃತಸಾರ ಮಹಾಗ್ರಂಥದಲ್ಲಿ ವಂದನ ಮಾಡಿದ್ದಾರೆ. ಪರಮಹಸ್ಯವಾದ ಬಿಂಬೋಪಾಸನಾ ಆರಂಭಕ್ಕೆ ಏಕಾದಶ ಗುರುಗಳಿಗೆ ವಂದನ ಮಾಡುವ ಕ್ರಮ. ಶ್ರೀ ಮದ್ಗುರುವರ್ಯ ಕುಂಟೋಜಿ ದಾಸಾರ್ಯರು ಉಪದೇಶ ತಿಳಿದು, ಗುರುವರ್ಯರ ಚರಣ ಕಮಲಗಳಿಗೆ ಅಭಿವಂದಿಸುವೆನು.



**ಪದ್ಯ ೯** ಪಂಚ ಭೇದಾತ್ಮಕ ಪ್ರಪಂಚಕೆ= ಐದುವಿಧ ಭೇದವುಳ್ಳದ್ದಾದ ಜಗತ್ಪ್ರಪಂಚವನ್ನು, ೧ ಜೀವ ಜೀವರಿಗೆ ಭೇದ, ೨ ಜಡಜಡಗಳಿಗೆ ಭೇದ, ೩ ಜೀವ ಜಡಕ್ಕೆ ಭೇದ, ೪ ಜೀವ ಪರಮಾತ್ಮಗೆ ಭೇದ, ೫ ಜಡ ಪರಮಾತ್ಮಗೆ ಭೇದ, ಈ ಪ್ರಕಾರ ಪಂಚಭೇದ ಯುಕ್ತವಾದ ಸಕಲ ಲೋಕಗಳ ವಿವರಿಸಿದರು. ಪಂಚರೂಪಾತ್ಮಕನೆ ದೈವಕ=ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ. ವಾಸುದೇವ, ನಾರಾಯಣ ಪಂಚರೂಪಾತ್ಮ ಶ್ರೀ ಆದಿನಾರಾಯಣನೆ, ಸರ್ವೋತ್ತಮ=ಸಕಲ ಜಗತ್ತಿಗೆ ಕಾರಣನೆಂದು ಸ್ಥಾಪನೆ ಮಾಡಿದರು. ಪಂಚಮುಖ=ಮೊದಲಿಗೆ ಐದು ಮುಖವುಳ್ಳ ಬ್ರಹ್ಮದೇವರು. ಅಥವಾ ಪಂಚಮುಖ ಶ್ರೀಮುಖ್ಯ ಪ್ರಾಣದೇವರು. ದ್ವಾಪರಯುಗದಲ್ಲಿ ಶ್ರೀ ಭೀಮಸೇನ ದೇವರಾಗಿ ಅವತಾರಮಾಡಿ ದುಃಶಾಸನನವಧೆಯ ಕಾಲಕ್ಕೆ,ಪಂಚಾನನವುಳ್ಳಂಥ ಶ್ರೀಪ್ರಾಣದೇವರು ಅಥವಾ ಮೂಲದಲ್ಲಿಯೇ ಪಂಚಮುಖ, ಹನುಮತ್–ನರಸಿಂಹ, ವರಾಹ, ಗರುಡ ಹಯವದನ, ಹೀಗೆ ಪಂಚಮುಖವುಳ್ಳ ಪ್ರಾಣದೇವರು. ಮಹಾರುದ್ರ, ಶಕ್ರ=ಇಂದ್ರಾದಿ ದೇವತಗಳು, ಶ್ರೀಹರಿಗೆ ಕಿಂಕರರು=ಶ್ರೀ ಆದಿನಾರಾಯಣಗೆ, ಬ್ರಹ್ಮ ವಾಯು ರುದ್ರೇಂದ್ರಾದಿಗಳು ಸೇವಾನು ಸೇವಕರು. ಈ ಪ್ರಕಾರ ಶ್ರೀ ಹರಿಸರ್ವೋತ್ತಮ ತಾರತಮ್ಯ ಜ್ಞಾನ, ಪಂಚಭೇದ ವಿವರ, ಸಂಪ್ರದಾಯ ಪೂರ್ವಕ, ತನ್ನ ಶಿಷ್ಯರಾದ ಪಂಚವಿಧ ಜೀವರಿಗೆ ತರತಮಾನುಸಾರ ಉಪದೇಶ ಮಾಡಿದಂಥ ಶ್ರೀ ಮದಾನಂದತೀರ್ಥಗುರುಗಳು. ಪಂಚವಿಂಶತಿ ತತ್ವ ತರತಮ ಪಂಚಿಕೆಗಳನು ಪೇಳ್ದ= ೧ ಅವ್ಯಕ್ತತತ್ವ. ೨ ಮಹತತ್ವ ೩ ಅಹಂಕಾರ ೪ ಮನಸ್ಸು, ೫ ಪಂಚಜ್ಞಾನೇಂದ್ರಿಯ, ಶ್ರವಣ, ನಯನ, ಘ್ರಾಣ,ತ್ವಕು, ರಸ, ೫ ಪಂಚಕರ್ಮೇಂದ್ರಿಯಗಳು, ವಾಕ್–ಪಾಣಿ–ಪಾದ–ಗುದ ಉಪಸ್ಥ, ೫ ಪಂಚತನ್ಮಾತ್ರಾಗಳು, ಗಂಧ,-ರಸ-ರೂಪ-ಸ್ಪರುಶ-ಶಬ್ದ. ೫ಪಂಚಭೂತ-ಪೃಥಿವ್ಯಾಪ-ತೇಜ-ವಾಯು,ಆಕಾಶ. ಅವ್ಯಕ್ತಾದಿ ಪೃಥ್ವಿವರೆಗೆ ೨೪ ತತ್ವ ಅಪರತತ್ವ. ಪರತತ್ವ ಶ್ರೀ ಆದಿನಾರಾಯಣ. ಹೀಗೆ ೨೫ ತತ್ವ ತರತಮ ಸೂಚಿಸಿದಂಥ, ಭಾವಿ ವಿರಿಂಚಿಯೆನಿಪ=ಮುಂದಿನ ಕಲ್ಪಕ್ಕೆ ಬ್ರಹ್ಮಪಟ್ಟಕ್ಕೆ ಅಧಿಕಾರಿಗಳಾದ ಭಾವಿ ಬ್ರಹ್ಮರೆಂದೆನಿಸಿಕೊಂಬುವಂಥ, ಆನಂದತೀರ್ಥರ ಶ್ರೀ ಮದ್ಗುರುವರ ಶ್ರೀಮದಾನಂದ ತೀರ್ಥಾರ್ಯರ, ನೆನೆವೆನನುದಿನದಿ= ಪ್ರತಿ ಪ್ರತಿ ದಿವಸಗಳಲ್ಲಿ ಶ್ರೀಮನ್ನಾರಾಯಣನ ಅನುಗ್ರಹಕ್ಕೆ ಪೂರ್ಣಪಾತ್ರರಾದ ಶ್ರೀಮದಾ

ಚಾರ್ಯರ ಪದಪದ್ಮಗಳನ್ನು ಜ್ಞಾನಭಕ್ತಿ ಪುರಸ್ಸರ ಕೊಂಡಾಡುವೆನು. ಈ
ಪ್ರಕಾರ ಶ್ರೀ ಜಗನ್ನಾಥದಾಸರಾಯ ಗುರುಗಳವರು, ಶ್ರೀಗುರು ಮಧ್ವರಾಯರ
ಮಾಹಾತ್ಮ್ಯ ಎರಡು ಪದ್ಯಗಳಿಂದ ಕೊಂಡಾಡಿ, ಅನಂತರ ಮಹಾರುದ್ರ ದೇವರ
ಸ್ತೋತ್ರ ಮಾಡುತ್ತಾರೆ.

**ಪದ್ಯ ೧೦** ವಾಮದೇವ= ಧವಳಭಸಿತಾಂಗ ಒಳ್ಳೇಶುಭ್ರವಾದ ಸುಂದರ
ದೇಹವುಳ್ಳ **ಹೇ** ಮಹಾದೇವರೆ! ವಿರಿಂಚಿತನಯ=ಶ್ರೀನಾರಾಯಣನ ನಾಭಿಕಮ
ಲೋದ್ಭವರಾದ ಚತುರ್ಮುಖ ಬ್ರಹ್ಮದೇವರ ಪುತ್ರರಾದ ಮಹಾರುದ್ರದೇವರೇ!
ಉಮಾಮನೋಹರ=ಉಮಾ=ಪಾರ್ವತೀದೇವಿಯರ ಮನಸ್ಸು ಸ್ವೀಕಾರಮಾಡಿ
ದಂಥ ಗುರುಗಳೆ ! ಉಮಾಮನೋಹರ=ಉಮಾದೇವಿಯರ ಮನೋಭಿಮಾನಿ
ಗಳಾಗಿ ಉಮಾದೇವಿಯರ ಮನಸ್ಸಿಗೆ ಆನಂದಪ್ರದರಾದಂಥ, ಉಗ್ರ=ಮಹಾ
ರುದ್ರರೂಪಿ. ಧೂರ್ಜಟಿ= ವ್ಯೋಮಕೇಶ–ಜಟಾವುಳ್ಳ ವೈರಾಗ್ಯಶಾಲಿಯೇ,
ಸಾಮಜಾಜಿನ ವಸನಭೂಷಣ,=ಗಜಚರ್ಮಾಂಬರದಿಂದ ಭೂಷಣನಾಗಿ
ಒಪ್ಪುವ ಮಹಾರುದ್ರದೇವರೆ! ಸುಮನಸೋತ್ತಂಸ=ಸುಮನಸರು=ದೇವತೆಗಳಿಗೆ
ಸ್ವತ್ತಮರೆನಿಸಿಕೊಂಬುವಂಥವರು. ಕಾಮಹರ=ಮನ್ಮಥನ ಸಂಹರಿಸಿದಂಥ,
ಅಥವಾ ಕಾಮಹರ=ಇಚ್ಛಾರಹಿತರಾಗಿ ಕಾಮಾಪೇಕ್ಷೆ ದಹಿಸಿ, ನಿಷ್ಕಾಮ
ವಾಗಿ ಶ್ರೀ ಲಕ್ಷ್ಮೀಕಾಂತ ಶ್ರೀ ನರಸಿಂಹೋಪಾಸಕರಾದ ಅಹಂಕಾರಾಧಿ
ಪತಿಯೇ, ಕೈಲಾಸಮಂದಿರ= ಪರಮೋತ್ತಮವಾವ ಮಂಗಳತರವಾದ,
ಕೈಲಾಸವೇ ಮನೆಯುಳ್ಳಂಥ ಶ್ರೀಮಹಾದೇವರೆ, ಸೋಮ ಸೂರ್ಯಾನಳ
ವಿಲೋಚನ=ಸೋಮ=ಚಂದ್ರ ವಾಮಭಾಗ ನೇತ್ರ, ಸೂರ್ಯ=ದಕ್ಷಿಣ ಭಾಗ
ನೇತ್ರ, ಅನಳ=ಫಣೆಯಲ್ಲಿ ಅಗ್ನಿನೇತ್ರ, ವಿಲೋಚನ= ಈ ಪ್ರಕಾರ ಜ್ಞಾನ
ಪ್ರಕಾಶವಾದ, ತ್ರಿನೇತ್ರಗಳಿಂದ ಒಪ್ಪುವಂಥ ಪಾರ್ವತೀಪತೇ, ಕಾಮಿತ=ಪ್ರದ
ಭಕ್ತರು ಬೇಡಿದಂಥ ಅಭೀಷ್ಟೆಯನ್ನು ಪೂರೈಸಿಕೊಡುವಂಥ ಮಹಾದೇವರೇ !
ಕರುಣಿಸೆಮಗೆ ಸದಾಸುಮಂಗಳವ=ಸರ್ವದಾ ಸಮೀಚೀನವಾದ, ಹರಿಸರ್ವೋ
ತ್ತಮ ತಾರತಮ್ಯ ಪಂಚಭೇದವೆಂಬೋ ಮಂಗಳತರ ಜ್ಞಾನವನ್ನು , ನಮಗೆ
ಅನುಗ್ರಹ ಮಾಡಬೇಕು. ಪಾರ್ವತೀಪತೇ ಮಮಕಾರ ಅಹಂಕಾರವನ್ನು ದೂರ
ಮಾಡಿ, ಶ್ರೀಹರಿ ಗುರುಗಳವರ ಮಾಹಾತ್ಮ್ಯ ಕೊಂಡಾಡುವದಕ್ಕೆ ಜ್ಞಾನ ಭಕ್ತಿ
ಕೊಟ್ಟು, ವಿಷಯ ವೈರಾಗ್ಯ ಪ್ರದರಾಗಿ, ಭವಾಖ್ಯ ಸಂಸಾರ ಸಮುದ್ರ ದಾಟಿಸಿ



ಉದ್ಧಾರ ಮಾಡಬೇಕು. ಹೇ ವೈರಾಗ್ಯಾಧಿಪತೆ ! ಹೇ ಗಂಗಾಧರ, ಫಣಿಭೂಷ
ಣನೆ, ಚಂದ್ರಮೌಳಿಯೆ! ಅಹಂಕಾರ ಮಮಕಾರಾದಿಗಳ ದೂರಗೈಸಿ, ಸಜ್ಜನರ
ಸಿರಿ ಚರಣದಲ್ಲೆ ನನ್ನ ಮನಸ್ಸು ಎರಗಿಸಿ ಭಕ್ತಿಪ್ರದರಾಗಿರಿ. ಮನೋಭಿಮಾನಿ
ಗಳಾದ ಮಹಾರುದ್ರದೇವರೇ ನಿಮಗೆ ನಮೋನಮಃ ||

**ಪದ್ಯ ೧೧**–ಇನ್ನು ಮಹಾರುದ್ರದೇವರ ಮಾಹಾತ್ಮ್ಯ ಏನು? ಅವರಸಾಧನ
ಹೇಗೆಂಬುದನ್ನು ಈ ಪದ್ಯದಿಂದ ಶ್ರೀಗುರು ಜಗನ್ನಾಥ ದಾಸರಾಯ ಗುರುವರರು
ಕೊಂಡಾಡುತ್ತಾರೆ. ಕೃತ್ತಿವಾಸನೆ=ಮೃಗಚರ್ಮವನ್ನು ಧರಿಸಿದ ಮಹಾರುದ್ರ
ದೇವರೆ! ಹಿಂದೆ ನೀ ನಾಲ್ವತ್ತು ಕಲ್ಪ=ಪೂರ್ವ ಬ್ರಹ್ಮಕಲ್ಪದಲ್ಲಿ ಶ್ರೀಹರಿ ಗುರು
ಗಳ ಅನುಗ್ರಹಸಂಪಾದಿಸೋಗೋಸುಗ, ನಾಲ್ವತ್ತು ಕಲ್ಪ ಸಮೀರನಲಿ ಶಿಷ್ಯತ್ವ
ವಹಿಸಿ=ಪವಮಾನರಾಯ ಜಗದ್ಗುರುಗಳಲ್ಲಿ ೪೦ ಬ್ರಹ್ಮದಿನ ಕಲ್ಪಗಳಲ್ಲಿ
ಶುಶ್ರೂಷಾಮಾಡಿ,ಅಖಿಳಾಗಮಾರ್ಥಗಳೋದಿ=ಅನಂತವೇದ ಶ್ರುತಿಸ್ಮೃತ್ಯರ್ಥ
ಗಳ ಭಕ್ತಿ ಪರಸ್ಸರ ಶ್ರವಣ ಮಾಡಿ, ಅನಂತರ, ಜಲಧಿಯೊಳು ಹತ್ತು ಕಲ್ಪತಪ
ಗೈದು= ೧೦ ಮನುಕಲ್ಪಗಳಲ್ಲಿ ದಶಕಲ್ಪ ಲವಣೋದಧಿಯಲ್ಲಿ ಉಗ್ರತಪಸ್ಸು
ಶ್ರೀ ಲಕ್ಷ್ಮೀಕಾಂತ ಶ್ರೀ ನೃಸಿಂಹದೇವರ ಪ್ರೀತ್ಯರ್ಥಮಾಡಿ, ಆದಿತ್ಯರೊಳಗುತ್ತ
ಮನೆನೆಸಿ= ಇಂದ್ರಾದಿ ದೇವತೆಗಳಿಗೆ, ಶ್ರೇಷ್ಠನೆನಿಸಿ, ಪುರುಷೋತ್ತಮನ=
ವಕ್ಷಸ್ಥಳ ನಿವಾಸಿಯಾದ ಅಕ್ಷರಳಾದ ಶ್ರೀರಮಾದೇವಿಗೆ, ಕ್ಷರರಾದ ಬ್ರಹ್ಮಾದಿ
ಗಳಿಗೆ, -ಕ್ಷರಾಕ್ಷರ ಪುರುಷರಗಳಿಗೆ ಸರ್ವೋತ್ತಮನಾದ, ಶ್ರೀರಮಾಕಾಂತ ಶ್ರೀ
ಲಕ್ಷ್ಮೀನೃಸಿಂಹದೇವರ ಶಯ್ಯಾಕ್ಕೆ ಸೇವಾರೂಪವಾಗಿ, ಪರಿಯಂಕ ಸೇವಾ
ಮಾಡಿ, ಶೇಷಪದದಿಂದ ಮುಕ್ತರಾಗುವ, ಶ್ರೀಪಾರ್ವತಿ ಪತಿ–ಮಹರುದ್ರದೇವರೆ
ತವಪಾದಾಂಬುಜಗಳಿಗೆ ಅನಂತದಂಡ ಪ್ರಣಾಮಗಳು.

**ಪದ್ಯ ೧೨**– ನಮೋಸ್ತು ತಾತ್ವಿಕಾ ದೇವಾಃ ವಿಷ್ಣು ಭಕ್ತಿ ಪರಾಯಣಾಃ
ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವಏವಹಿ || ಸಕಲ ತತ್ವಾಭಿ
ಮಾನಿ ದೇವತೆಗಳಿಗೆ ನಮೋನಮಃ | "ದೇವ ಋಷಿ ಪಿತೃಪ ನರ, ಪಂಚವಿಧ
ಮುಕ್ತಿಯೋಗ್ಯರಾದವರಿಗೆ ನಮಿಸುತ್ತಾರೆ.ಪಾಕಶಾಸನ ಮುಖ್ಯ ಸಕಲ ದಿವೌಕ
ಸರಿ ಗಭಿನಮಿಪೆ=ದೇವೇಂದ್ರನೇ ಮೊದಲಾದಂಥ ದೇವತೆಗಳಿಗೆ ಪರಮಭಕ್ತಿ
ಯಿಂದ ವಂದನೆ ಮಾಡುವೆ.ಏಕೋಭಾವದಿಂದ ಮನಃಪೂರ್ವಕ ಋಷಿಗಳಿಗೊಂ
ದಿಸುವೆ. ಪಿತೃಗಳಿಗೆ ನಮನ ಮಾಡುವೆ. ಗಂಧರ್ವರಿಗೆ ವಂದಿಸುವೆ. ಷೋಡಶ

ಮಹಾರಾಜರಿಗೆ ನಮೋನಮಃ. ಆ ಕಮಲನಾಭಾದಿ ಯತಿಗಳನೀಕಕಾನಮಿಪೆ
ಶ್ರೀ ಮದ್ಗುರುವರ ಶ್ರೀಮದ್ ಭಗವತ್ಪಾದಾಚಾರ್ಯರ ಸ್ತೋತ್ರ ಪೂರ್ವದಲ್ಲಿ
ಮಾಡಿದಗೋಸುಗ, ಇಲ್ಲಿ "ಶ್ರೀ ಮಧ್ವಂ ಪದ್ಮನಾಭಂ ನರಹರಿ ಮುನಿಪಂ
ಮಾಧವಾಕ್ಷೋಭ್ಯ ತೀರ್ಥಂ" ಈ ಸಂಪ್ರದಾಯ ಪೂರ್ವಕ ವಂದನ ಮಾಡಿರು
ವರು. ಶ್ರೀ ಮಧ್ವರಾಯರ ತರುವಾಯ, ಯಾವ ಪದ್ಮನಾಭ ತೀರ್ಥ
ಶ್ರೀ ಪಾದಂಗಳು ಮೊದಲಾದ ಯತಿಗಳ ಸಮೂಹಗಳಿಗೆ ನಮಿಸುವೆನು. ಇದ
ರಿಂದ ಎಲ್ಲ ಗುರು ಪರಂಪರೆಯ ಯತಿಗಳಿಗೆ ನಮಿಸಿದಂತಾಯಿತು. "ಬಿಡದೆ
ರಮಾಕಳತ್ರನ ದಾಸವರ್ಗಕೆ ನಮಿಪೆನನವರತ=ಶ್ರೀರಮಾದೇವಿಯರ ಸರ್ವಾಂ
ಗಗಳಿಗೆ ನಿಯಾಮಕನಾದ ಶ್ರೀ ಆದಿನಾರಾಯಣ ಶ್ರೀ ಹರಿದಾಸ ಸಮೂ
ಹಕ್ಕೆ ಉದ್ಧಾರ ಮಾಡಿರೆಂದು, ನಿತ್ಯನಿತ್ಯದಲ್ಲಿ ಸರ್ವದಾ ವಂದನ ಮಾಡುವೆ.
ಸಮಸ್ತ ಭಗವದ್ಭಕ್ತರುಗಳ ಸಮೂಹಗಳಿಗೆ ನಮೋನಮಃ ನಮೋ ನಮಃ
ಅನಂತ ದಂಡ ಪ್ರಣಾಮಗಳು. || ೨ ||

" ಪೃಥ್ವೀಮಂಡಲ ಮಧ್ಯಸ್ಥಾಃ ಪೂರ್ಣಬೋಧಮತಾನುಗಾಃ
ವೈಷ್ಣವಾಃ ವಿಷ್ಣು ಹೃದಯಾಸ್ತಾನ್ನಮಸ್ಯೇ ಗುರೂನ್ಮಮ || ೧ ||

**ಪದ್ಯ ೧೩**– ಪರಿಮಳವು ಸುಮನದೊಳಗೆ = ಮಲ್ಲೀಕಾಪುಷ್ಪ ಕೇತಕೀ
ಕಮಲ ಏವ ಮಾದಿ ಸುಮನ=ಹೂಗಳೊಳಗೆ, ಸುವಾಸನೆ ಅರವಿಂದ ಸೌರಭ
ಇದ್ದಂತೆ, ಅನಳನು ಅರಣಿಯೊಳಗಿಪ್ಪಂತೆ=ಕಾಷ್ಟ ನಿರ್ಮಿತವಾದ ಅರಣಿಪಾತ್ರೆ
ಯಲ್ಲಿ ಅಗ್ನಿ ಇದ್ದಂತೆ, ಪುಷ್ಪಗಳಲ್ಲಿ ಸುವಾಸನೆ ಮೊದಲಾದ ಮಕರಂದ ವ್ಯಕ್ತ
ವಾಗಿ ಯಾವ ಪ್ರಕಾರ ಆಚ್ಛಾದನವಾಗಿರುತ್ತದೋ,ಕಾಷ್ಠದಲ್ಲಿ ಅಗ್ನಿ, ವ್ಯಕ್ತಾವ್ಯ
ಕ್ತದಿಂದ ಆಚ್ಛಾದಿತವಾಗಿ ಹೇಗೆ ಇರುತ್ತದೋ, ಆ ಪ್ರಕಾರ ದಾಮೋದರ
ನಾಮಕ ಆದಿನಾರಾಯಣ ಬ್ರಹ್ಮರುದ್ರೇಂದ್ರಾದಿಗಳಲ್ಲಿ ವ್ಯಕ್ತರೂಪನಾಗಿ ಸುಮ
ನದಲ್ಲಿ ಮಕರಂದದಂತೆ ತೋರುತ್ತಾನೆ. ಮನದಲಿ ತೋರಿ ತೋರದಲೆ=ಬ್ರಹ್ಮಾ
ದಿಗಳ ಮನೋಂತರ್ಗತ ಪರಮಾತ್ಮ ಅವರವರ ಜ್ಞಾನಕ್ಕೆ ಯೋಗ್ಯತಾನು
ಸಾರ, ಜ್ಞಾನ ದೃಷ್ಟಿಗೆ ತೋರಿ ಗೋಚರನಾಗುವ. ಯೋಗ್ಯತಾ ಮೀರಿ
ನೋಡಲು ಅನಂತಾನಂತ ರೂಪಗಳಿಂದ ಅಗೋಚರ. ತತ್ವಾಭಿಮಾನಿದೇವತೆ
ಗಳು ಸದಾ ಸಾಮಾನ್ಯಾ ಪರೋಕ್ಷಿಗಳಲ್ಲಿ ವ್ಯಕ್ತನಾಗಿ ತೋರುತ್ತಾನೆ. ಇನ್ನು
ಅಲೌಕಿಕ ಕರ್ಮಜ ದೇವತೆಗಳು ಮೊದಲಾದವರಲ್ಲಿ, ಶ್ರೀ ಹರಿ ತೋರದಲೇ



ಇರುವನು. ಹೇಗಂದರೆ, ಕಾಷ್ಠವಾದ ಅರಣಿ ಪಾತ್ರೆ ಮಥನ ಮಾಡಲು,
ಅಗ್ನಿ ಪ್ರಕಾಶಮಾನನಾಗಿ ವ್ಯಕ್ತವಾಗುವಂತೆ, ಸಾಧನ ಸಂಪನ್ನರಾದ ಅತಾತ್ವಿ
ಕರಿಗೆ ಕಾಷ್ಟಮಥನ ಸಾಧನದಂತೆ ತಾರತಮ್ಯಾನುಸಾರ ಅವರ ಜ್ಞಾನಕ್ಕೆ
ಗೋಚರನಾಗುವ. ಜ್ಞಾನಕ್ಕೆ ಗೋಚರ ಅಜ್ಞಾನಕ್ಕೆ ಅಗೋಚರನಾಗಿ ವ್ಯಕ್ತಾ
ವ್ಯಕ್ತನಾಗಿ, ಸ್ವಾಮಿ ವ್ಯಾಪ್ತನಾಗಿ ನಿರ್ಲಿಪ್ತನಾಗಿ ಬ್ರಹ್ಮಾದಿಗಳಿಗೆ ತೋರುತ್ತ,
ಸಾಧನ ಸಂಪನ್ನರಾದ ಇತರರಿಗೆ ತೋರದಹಾಗೆ ಶ್ರೀಹರಿ ವ್ಯಾಪಾರ ಮಾಡುತ್ತ
ಇರುವಂಥ ಶ್ರೀ ಜಗನ್ನಾಥ ವಿಠಲನು. ಬ್ರಹ್ಮಾದಿ ದೇವತೆಗಳಲ್ಲಿದ್ದ ಪರಮಾತ್ಮ
ಗೋಚರನಾಗಬೇಕಾದರೆ, ಮಲ್ಲಿಕಾ ಕೇತಕೀ ಪುಷ್ಪಾದಿಗಳಲ್ಲಿ, ವಾಯು
ಸಂಚಾರದಿಂದ ಅರವಿಂದದ ಸುವಾಸನೆ ಪಸರಿಸಿ, ಘ್ರಾಣೇಂದ್ರಿಯಕ್ಕೆ ಹೇಗೆ
ಗೋಚರವಾಗುತ್ತದೋ, ಆಪ್ರಕಾರ, ಹಾಗೆ ಅರಣಿ ಪಾತ್ರೆಯಲ್ಲಿ ಅಗ್ನಿ ಪ್ರಕಾಶ
ದಿಂದ ಅವ್ಯಕ್ತವಾಗಿ ಇರುತ್ತದೆಯೋ, ಕಾಷ್ಟದಿಂದ ಮಥನ ಮಾಡಿದರೆ ಅಗ್ನಿ
ಪ್ರಕಾಶಮಾನವಾಗಿ ನಯನೇಂದ್ರಿಕ್ಕೆ ಹೇಗೆ ಗೋಚರವಾಗುತ್ತದೋ, ಅದರಂತೆ
ಜ್ಞಾನಿಗಳ ಪರಿಮುಖದಿಂದ, ಬ್ರಹ್ಮಾದಿ ದೇವತೆಗಳಲ್ಲಿ ಬ್ರಹ್ಮಾಂಡದಲ್ಲಿ ವ್ಯಾಪ್ತ
ನಾದಂಥ ಶ್ರೀ ರಮಾಕಾಂತ, ನಾರಾಯಣನ ಕಥಾಶ್ರವಣದಿಂದ ಮನನಮಾಡಿ
ನಿದಿಧ್ಯಾಸನಕ್ಕೆ ತಂದು, ಶ್ರೀ ಹರಿಗುರುಗಳವರ ಅನುಗ್ರಹದಿಂದ ಜ್ಞಾನ ದೃಷ್ಟಿ
ಯಿಂದ ಶ್ರೀ ಪರಮಾತ್ಮ ವ್ಯಾಪ್ತನಾಗಿ ಮಾಡುವ ವಿಹಾರ ನೋಡಿದರೆ,
ಯೋಗ್ಯತಾನುಸಾರ ತೋರಿ ತೋರದಲೆ, ಕಂಡು ಕಾಣದ ಹಾಗೆ ಇರುತಿಹ;
ವ್ಯಾಪ್ತನಾಗಿಹ ಜಗನ್ನಾಥ, ಜಗತ್ಯಕ್ಕೆ=ಹದಿನಾಲ್ಕು ಲೋಕಕ್ಕೆ, ನಾಥನಾದ=
ಒಡೆಯ ಜಗತ್ಪತಿ ಸ್ವಾಮಿ, ಶ್ರೀ ಫಂಡರಪುರ ನಿವಾಸಿ, ಪುಂಡಲೀಕ ವರದ
ಶ್ರೀ ರುಕ್ಮಿಣೀಪತಿ ಗರುಡ ವಾಹನ ಪಾಂಡುರಂಗ ವಿಠಲನ, ಕರುಣ ಪಡೆವ=
ಅನುಗ್ರಹವನ್ನು ಸಂಪಾದಿಸುವಂಥ, ಮುಮುಕ್ಷು ಜೀವರ=ಮೋಕ್ಷಾಧಿಕಾರಿ
ಗಳಾದ ಮಹಾಜ್ಞಾನಿಗಳ ಪರಮ ಭಾಗವತರನ, ಉತ್ತಮರಾದ ಕೇವಲ
ಭಗವದ್ಭಕ್ತರನ, ಕೊಂಡಾಡುವದು. ಪ್ರತಿದಿನದಿ=ನಿತ್ಯ ನಿತ್ಯ ದಿವಸಗಳಲ್ಲಿ ಶ್ರೀ
ಹರಿದಾಸರ ಪಾದಸ್ಮರಣೆ ಮಾಡುತ್ತ ಸೋತ್ರ ಮಾಡುವದು· ||೧೦||

ಶ್ರೀಮದಾಶುಕುವಿಕುಲ ತಿಲಕದ ಭಗವನ್ನಿಷ್ಟಪರ ಶ್ರೀಮದ್ವೆಂಕಟಾ
ಚಲನಿವಾಸ ಶ್ರೀರಮಣ ಪಾದಾರವಿಂದಾರ್ಚಕರು, ಶ್ರೀಮನ್ನರಪಂಚಾನನಾತ್ಮ

ಸಂಭವರು, ಶ್ರೀಮಜ್ಞಾನ ಭಕ್ತಿ ವೈರಾಗ್ಯಶಾಲಿಗಳು, ಮದ್ಗುರುವರರು ಶ್ರೀಮದ್ರಂಗವೊಲಿದ ಶ್ರೀಗುರು ಜಗನ್ನಾಥದಾಸರಾಯ ಮಹಾನುಭಾವ ಶ್ರೀಗುರುಗಳವರು ವಿರಚಿಸಿದ ಶ್ರೀಮದ್ಧರಿಕಥಾಮೃತಸಾರ ಮಂಗಳಾಚರಣ ಪೀಠಿಕಾ ಸಂಧಿ ತರತಮ ಪಂಚಭೇದಾತ್ಮಕವಾದ ಪ್ರಥಮಸಂಧಿ ವ್ಯಾಖ್ಯಾನವು ಸಮಾಪ್ತ॥ ಮಂಗಳಮಸ್ತು ॥ ಶ್ರೀಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು



# ಶ್ರೀ ದ್ರೌಪದೀಪತೀಶ ವಿಠಲರ ಟೀಕಾ

## ಮೊಥಲನೆಯ ಸಂಧಿ

**೧ ನೇ ಪದ್ಯ**– ಶ್ರೀರಮಣಿಕರಕಮಲ ಪೂಜಿತ, ನೀರಜಭವಾಂಡ=ನೀರೇ ಜಾಯಾತೇ ಇತಿ ನೀರಜಂ, ತತ್ರ ಭವತೀತಿ ನೀರಜಭವಃ, ನೀರಜ; ಭವಸ್ಯ ಅಂಡಃ ನೀರಜ ಭವಾಂಡಃ ॥ ಪದ್ಮನಾಭ ಮೂರ್ತಿ ನಾಭಿಕಮಲದಶೆಯಿಂದ ಬ್ರಹ್ಮರಾಯನ ಉತ್ಪತ್ತಿ; ಆ ಬ್ರಹ್ಮನ ಶರೀರವೇ ಬ್ರಹ್ಮಾಂಡ.

**೨ ನೇ ಪದ್ಯ**– ನಿಗಮತತಿಗಳತಿಕ್ರಮಿಸಿ=ಅನಂತವೇದಗಳು ಶ್ರೀಲಕ್ಷ್ಮೀದೇವಿಯರಿಗೆ ಏಕದೇಶವಲ್ಲ. ತಮ್ಮ ಸ್ವರೂಪಾತ್ಮಕ ವೇದದಿಂದ ಉಪಾಸನೆ ಮಾಡುತ್ತಾಳೆ. ಅಧ್ಯಾತ್ಮಕಾರರು ಹೇಳಿದ್ದಾರೆ.

**೩ ನೇ ಪದ್ಯ**– ನಿರುಪಮಾನಂದಾತ್ಮ=ಬ್ರಹ್ಮನಕಿಂತಲೂ ಲಕ್ಷ್ಮೀ ಅಧಿಕ, ಆಕೆಗಿಂತಲೂ ಪರಮಾತ್ಮ ಅಧಿಕಾಧಿಕ, ಇದು ಹೇಗೆ ಕೂಡೀತು? ಗರುಡ ಶೇಷ ೧೦೦ ಆನಂದ ಸರಸ್ವರತೀ ಭಾರತಿಯರಿಗೆ ಒಂದಾನಂದ ಇವರ ಶತಾನಂದ ಬ್ರಹ್ಮಗೆ ಒಂದಾನಂದ; ಈ ಕ್ರಮದಿಂದ ಹೆಚ್ಚಿಸಿದರೆ ಗರುಡಶೇಷರು ಅರಿಯದರಿಂದ ನಿರುಪಮಾನಂದಾತ್ಮಕನೆಂದು ಕರೆಸುತ್ತಾನೆ.

**೪ ನೇ ಪದ್ಯ**– "ಆರು ಮೂರೆರಡೊಂದು" ಮೂರು ವಿಧ ಜೀವರೊಳಗೆ ಉಪಾಸನೆ ಮಾಡುತ್ತಾನೆ. ಮುಕ್ತಿಯೋಗ್ಯರೊಳಗೆ ಉಪಾಸನೆ ಮಾಡುತ್ತಾನೆ. ಮುಕ್ತಿಯೋಗ್ಯರೊಳಗೆ ದಾಸೋಹಂ, ತಮೋಯೋಗ್ಯರಲ್ಲಿ ಸೋಹಂ,ನಿತ್ಯ ಸಂಸಾರಿಯಲ್ಲಿ ಭೂಸ್ವಾಹಾ, ಅವರಂತೆ ಉಪಾಸನೆ ಮಾಡಿ ಫಲ ಕೊಡುತ್ತಾನೆ.

**೫ ನೇ ಪದ್ಯ**– "ಚತುರವದನನ ರಾಣಿ"

**೬ ನೇ ಪದ್ಯ**– "ಕೃತಿರಮಣ ಪ್ರದ್ಯುಮ್ನ"=ಚತುರವಿಂಶತಿ ತತ್ವಪತಿ ದೇವತೆಗಳಿಗೆ ಗುರುವೆನಿಸುತಿಹ

೨೪ ಚತುರವಿಂಶತಿ ತತ್ವ ವಿವರ

| | | | |
|---|---|---|---|
| ಜ್ಞಾನೇಂದ್ರಿಯ | ೫ | ಅಹಂಕಾರತತ್ವ | ೧ = ಗರುಡಶೇಷ |
| ಕರ್ಮೇಂದ್ರಿಯ | ೫ | ಮಾನಸತತ್ವ | ೧ = ಸ್ಕಂದೇಂದ್ರರು |
| ಪಂಚಭೂತ | ೫ | ಬುದ್ಧಿತತ್ವ | ೧ = ಭಾರತಿ |
| ತನ್ಮಾತ್ರಾ | ೫ | ವಿಜ್ಞಾನತತ್ವ | ೪ = ವಾಯುದೇವರು |

೨೦+೪ ಹೀಗೆ ಒಟ್ಟು (೨೪)-ಅವಾಂತರಾಭಿಮಾನಿಯು ಗರುಡ

**೭ ನೇ ಪದ್ಯ**– " ವೇದಪೀಠ "

**೮ ನೇ ಪದ್ಯ**– ಕ್ಷಿತಿಯೊಳಗೆ.

**೯ ನೇ ಪದ್ಯ**– "ಪಂಚಭೇದಾತ್ಮಕ ಪ್ರಪಂಚಕೆ ಪಂಚರೂಪಾತ್ಮಕನೆ ದೈವಕ"= ಜೀವ-ಜಡ-ಈಶ ಈ ಮೂರರಿಂದ ಪಂಚಭೇದ

ಜೀವ = ಅಧ್ಯಾತ್ಮ

ಜಡ = ಅಧಿಭೂತ

ಪರಮಾತ್ಮ = ಅಧಿದೈವಕ = ಜೀವಜಡಕ್ಕೆ ಈಶ ಅಧಿ ದೈವನಾದ ಕಾರಣ ಪರಮಾತ್ಮ ಅಧಿ ದೈವನೆಂದು ಕರೆಸುತ್ತಾನೆ.

ಪಂಚ ರೂಪಾತ್ಮಕನೆಂದರೆ

ಪಂಚ ವಿಂಶತಿ ತತ್ವತರತಮ ಹೀಗೆ ಒಟ್ಟು ೨೫ ತತ್ವ

| | | | |
|---|---|---|---|
| ಪೃಥ್ವಿ—ಅನಿರುದ್ಧ | = ದೇವ | ೧ ಮಹತತ್ವ | ಭೂತ ೫ |
| ಅಪ್ಪು—ಪ್ರದ್ಯುಮ್ನ | = ಋಷಿ | ೧ ಅವ್ಯಕ್ತ | ಮಾತ್ರ ೫ |
| ತೇಜ—ಸಂಕರ್ಷಣ | = ಪಿತೃ | ೧ ಅಹಂಕಾರ | |
| ವಾಯ—ವಾಸುದೇವ | = ಮಾನವ | ೧ ಮನಸತತ್ವ | ಕರ್ಮೇಂದ್ರಿಯ ೫ |
| ಆಕಾಶ—ನಾರಾಯಣ | = ಮಾನವ | ೧ ಬುದ್ಧಿತತ್ವ | ಜ್ಞಾನೇಂದ್ರಿಯ ೫ |

**೧೦ ನೇ ಪದ್ಯ**– "ವಾಮದೇವ ವಿರಂಚಿತನಯ"

ಸೋಮ ಸೂರ್ಯಾನಳ ವಿಲೋಚನ.

ಸೋಮ - ಸೂರ್ಯ ಅಗ್ನಿ ನೇತ್ರವುಳ್ಳಂಥಾತ.

೧ ೧ ೧

೧೧–ಕೃತ್ತಿವಾಸನೆ

**೧೨ ನೇ ಪದ್ಯ**– ಪಾಕಶಾಸನ

**೧೩ ನೇ ಪದ್ಯ**– ಪರಿಮಳವು.

॥ ಮೊದಲನೆಯಸಂಧಿ ಸಂಪೂರ್ಣ. ಶ್ರೀದ್ರೌಪದೀಪತೀಶ ವಿಠಲಾರ್ಪಣಮಸ್ತು ॥

॥ ಶ್ರೀಗುರುರಾಜೋ ವಿಜಯತೇ ॥



ಜಂಬುಖಂಡಿ

# ಶ್ರೀ ವಾದಿರಾಜಾಚಾರ್ಯರು

(ಇಭವರದ ವಿಠಲರಾಂಕಿತರು)

ಪದ ರಾಗ–ಪೂರ್ವಿ ತಾಳ–ರೂಪಕ

ಕಂಡು ಬಹಳ ಧನ್ಯನಾದೆನೊ ॥ ಸಿರಿ ಮಂಗಳಾತ್ಮರ ॥ ಪಲ್ಲ ॥
ಕಂಡು ಬಹಳ ಧನ್ಯನಾದೆ ಪುಂಡರೀಕಾಕ್ಷ ತೋಂಡರ ಪಾದ !
ಪುಂಡರೀಕ ವೀಕ್ಷಣ ಮಾತ್ರ ಘತುಂಡಗೈಸಿ ಪೊರೆವರನ್ನ ॥ ಅ.ಪಲ್ಲ ॥
ಆ ಸುಕೃತ ಜಂಬುಖಂಡಿ ಶ್ರೀ ನಿವಾಸಾರ್ಯಾಬ್ಧಿ ಸಂಭವ ।
ಕೋವಿದಾಗ್ರಣಿಯು ಆದ ಶ್ರೀ ವಾದಿರಾಜಾರ್ಯರನ್ನ ॥ ೧ ॥
ಭೂತದಯಾಶೀಲ ಶಮದಮೋಪೇತರಾಗಿ ಪೃಥ್ವಿಯೊಳು ಶ್ರೀ ।
ನಾಥನೊಲಿಮೆಯನ್ನು ಪಡೆದುಖ್ಯಾತಭುವನ ಪಾವನ ಮಾಳ್ಪರಾ ॥ ೨ ॥
**ಶ್ರೀಶಪ್ರಾಣೇಶ ವಿಠಲ** ಹೃದಯಾಕಾಶದಲ್ಲಿ ಸಿರಿಯು ಸಹಿತ ।
ವಾಸವಾಗಿತೋರಿ (ರ್ದು) ಪೊಳೆವ ಭಾಸುರಕೀರ್ತಿಲಿಮೆರವರನ್ನ ॥ ೩ ॥

ಶ್ರೀಹಯಗ್ರೀವೋವಿಜಯತೇ ॥ ಶ್ರೀಮದಾನಂದ ತೀರ್ಥಭಗವತ್ಪಾದಾಚಾರ್ಯ ಗುರುಭ್ಯೋನಮಃ ॥ ಶ್ರೀಗುರು ರಾಜೋವಿಜಯತೇ । ಶ್ರೀಮಜ್ಜಗನ್ನಾಥದಾಸ ಗುರುಭ್ಯೋನಮಃ । ಹರಿಃ ಓಂ

**ಶ್ರೀ ಜಂಬುಖಂಡಿ ಆಚಾರ್ಯರ ಭಾವಸೂಚನ**

ಪದ್ಮಾವತೀ ಪ್ರಿಯಂ ದೇವಂ ಪದ್ಮಜಾದ್ಯಭಿವಂದಿತಂ ॥
ಜ್ಞಾನಾನಂದಾದಿನಿಕರಂ ನೌಮ್ಯಹಂ ಸೃತಿಮುಕ್ತಯೇ ॥ ೧ ॥
ಶ್ರೀಮದಾನಂದ ತೀರ್ಥಾರ್ಯಾನ್ ವಾದಿರಾಜ ಗುರೂಂಸ್ತಥಾ ॥
ಜಗನ್ನಾಥ ಗುರೂನ್ ದಿವ್ಯ ಕಥಾಮೃತ ನಿಷೇವಕಾನ್ ॥ ೨ ॥
ವಿದ್ಯಾಸಮುದ್ರಸತ್ತೀರ್ಥಾನ್ ವಿದ್ಯಾದಾನ್ ಪ್ರಣಮಾಮ್ಯಹಂ ॥
ವಾದಿರಾಜಾಭಿಧೋಹಂ ವೈ ವಾದಿರಾಜಕೃಪಾಬಲಾತ್ ॥ ೩ ॥
ಹರಿಕಥಾ(ಸುರಕಥಾ)ಮೃತಸಾರಸ್ಯ ವ್ಯಾಖ್ಯಾಂ ಕುರ್ವೇ ಯಥಾಮತಿ॥
ದಯಾಂ ಕುರ್ವಂತು ವಿದ್ವಾಂಸೋ ಜಗನ್ನಾಥದಯಾಶ್ರಯಾಃ ॥ ೪ ॥

ಇಹ ಖಲು ಶ್ರೀ ಮಜ್ಜಗನ್ನಾಥದಾಸವರ್ಯಃ ಸ್ವಯಮಾನಂದತೀರ್ಥ ಶಾಸ್ತ್ರಾಂಬೋಧಿಸುಮಗ್ನೋಪಿ, ಸಕಲಾಲ್ಪ ಪ್ರಜ್ಞದೀನ ಜನ ದಯಾಳುಃ ಸಕಲ ವೇದೋಪನಿಷತ್ಪುರಾಣಾದಿ ಪ್ರತಿಪಾದಿತ ಶ್ರೀ ಮದ್ರಮಾಕಾಂತಗುಣ ಗಣಾನ್ ಪ್ರತಿಪಿಪಾದಯಿಷುಃ ಅಸಾರ ಸಂಸಾರಣ್ಯಪಾವಕ ಸಂತಪ್ತಾನ್ ಸಕಲಸುಸ್ತ್ರೀಪ್ರಭೃತಿಜನಾನ್ ಹರಿಕಥಾಮೃತೇನ ಸ್ನಪಯನ್ ಶ್ರೀ ಹರಿಕಥಾ



ಮೃತಸಾರಾಖ್ಯಗ್ರಂಥಂಪದರೂಪೇಣಚಿಕೀರ್ಷುಃ**"ಓಂವಿಕಲ್ಪೋವಿಶಿಷ್ಟಫಲತ್ವಾತ್ಓಂ"**ಸ್ವಯೋಗ್ಯಶ್ರೀಹರೇರೂಪೋಪಾಸನಾನಂತರಂಸಾಮಾನ್ಯರೂಪೋಪಾಸನಂ ವಿಕಲ್ಪೇನ ಕಾರ್ಯಂ ವಿಶಿಷ್ಟ ಮೋಕ್ಷ ಫಲಾರ್ಥಂ!ಅತಃ ಮುಕ್ತ್ಯರ್ಥಮಾತ್ಮಯೋಗ್ಯಂ ಹಿ ಕಾರ್ಯಮೇವಹ್ಯುಪಾಸನಂ ॥ "ನೃಸಿಂಹಾದಿಕಮನ್ಯಚ್ಚ ದುರಿತಾದಿನಿವೃತ್ತಯೇ ॥ ಉಪಾಸತೇ ಯಥಾಯೋಗ್ಯಂ ನವಾ ಫಲವಿಭೇದತಃ ಇತ್ಯುಪಾಸನಾಪಾದೀಯೈಕೋನಚತ್ವಾರಿಂಶದಧಿಕರಣೋಕ್ತ ಬ್ರಹ್ಮತರ್ಕೋಕ್ತಿಂ ಹೃದಿ ನಿಧಾಯ ಸೋಪಾಸ್ಯಂ ಶ್ರೀ ನರಹರಿಮಂತರಾಯನಿವೃತ್ತಿಪೂರ್ವಕ ಪರಿಸಮಾಪ್ತ್ಯಾದ್ಯರ್ಥಂಪ್ರಣಮನ್‌ಚಿಕೀರ್ಷಿತಂ ಪ್ರತಿಜಾನೀತೇ-"ಹರಿಕಥೇತಿ"

"ಹರಿಕಥಾಮೃತಸಾರಾವತಾರಿಕಾ ಮಂಜೂಷಾಯಾಂ ಕಮಲಾಪತಿ ದಾಸವರ್ಯೈಃ

ಶ್ರೀ ಮಜ್ಜಗನ್ನಾಥ ಗುರುರಾಡಾಮಹಾಲವಬೋಧ ತೀರ್ಥರ ।
ಪ್ರೇಮಯುತರಾದಾಗ್ಯು ಕರುಣದಿ ದೀನಜನಗಳನ ॥
ನೇಮದಿಂದುದ್ಧರಿಸಲೋಸುಗ । ಈ ಮಹಾದ್ಭುತಕಾವ್ಯರಚನಕೆ ।
ಭೀಮನರಹರಿರೂಪಗಭಿನಮಿಸಿದರು ಸುಸ್ತವದಿ ॥ ೧ ॥ ಇತಿ

ಆಸ್ಯ ಅಪಭ್ರಂಶಭಾಷೋಪೇತಸ್ಯ ಪ್ರಾಮಾಣ್ಯಮಸ್ಮತ್‌ಕೃತ ಗುರುರಾಜ ಋಜುತ್ವ ವಿರೋಧಿಪರಿಮರ್ದನ ಗುರು ಸ್ತೋತ್ರವಿವೃತಿಶೋಧನಯೋಃ ಸಮ್ಯಕ್‌ಪ್ರಪಂಚಿತಂ॥ ತತ್ರೈವಾನು ಸಂಧೇಯಮ್ " । ಗುರುರಾಜ ಪ್ರಭೃತಿಗಳು ವೈಕುಂಠವರ್ಣನಗುಂಡಕ್ರಿಯಾದಿ ಪ್ರಾಕೃತ ಪ್ರಬಂಧಗಳನ್ನುರಚಿಸಿದ ಪ್ರಯುಕ್ತ, ನಾವು ಸ್ವಪ್ರತಿಭೆಯಿಂದೆ ಮಾಡುತ್ತೇವೆಂಬ ಅಭಿಮಾನ ಖಂಡನಾರ್ಥ ಅಂದರು.

ಗುರುಗಳ ಕರುಣೇತಿ, ಆಪನಿತು=ಆಜ್ಞಾಸ್ವೀಕರಿಸಿ, ಇದು ಮಂಗಳಸಂಧಿ ಆದ ಪ್ರಯುಕ್ತ ನಮನರೂಪ ಮಂಗಳ ಮಾಡುತ್ತಾರೆ.

**೧ನೇ ಪದ್ಯ**– ಶ್ರೀರಮಣೇತಿ॥ ಬ್ರಹ್ಮೇತಿ=ಬ್ರಹ್ಮನಾಯು ಸರಸ್ವತೀಶೇಷ ಗರುಡರುದ್ರೇಂದ್ರಾದಿಗಳಿಂದ ಸ್ತುತಇತ್ಯರ್ಥಃ॥ನೀರಜೇತಿ=ನೀರಜಭವ=ಕಮಲ ಸಂಭವ, ತಸ್ಯ ಅಂಡ ಬ್ರಹ್ಮಾಂಡ ಇತ್ಯರ್ಥಃ ॥ ನಮಿಪೆ-ನಮನ ಮಾಡುತ್ತೇನೆ. ಎಮಗೆ=ನಮಗೆ, ಕರುಣಿಪುದು=ಕರುಣಿಸಿ ಅಂತಕಃರುಣ ಮಾಡುವದು.

**೨ನೇ ಪದ್ಯ**– ಮೊದಲನೇ ಪದ್ಯದಲ್ಲಿ ಶ್ರೀ ಹರಿಯನ್ನು ರಮಾಸಾಹಿತ್ಯದಿಂದ ವಂದಿಸಿದರು. ಭಕ್ತ್ಯತಿಶಯದಿಂದ ಮಂಗಳ ದೇವತೆಯನ್ನು ಪುನಃ ಪ್ರಾರ್ಥಿಸುತ್ತಾರೆ. "ಜಗದುದರನತಿ ವಿಮಲ" ಜಗದಿತಿ ‖ ಕ್ರೀಯಾವಿಶೇಷೇತಿ । ತ್ರಿವಿಕ್ರಮತ್ವಾದಯಃ। ತ್ರಿವಿಕ್ರಮ ಶಬ್ದಾರ್ಥವಾದ ಮೂರುಪಾದ ವಿಕ್ಷೇಪ ರೂಪ ಕ್ರಿಯಾ ಎಂತ ತಾತ್ಪರ್ಯ

ಮಿಗೆ=ಉತ್ಕೃಷ್ಟವಾಗಿ, ಪೊಗಳಿ=ಹೊಗಳಿ, ತ್ರಿಗುಣಮಾನಿ=ಸತ್ವರಜಸ್ತಮೋಗುಣಾತ್ಮಕ ಜಡ ಪ್ರಕೃತ್ಯಭಿಮಾನಿ, ಸಂತೈಸಲಿ=ರಕ್ಷಿಸಲಿ. ಉಕ್ತಂಚ ಸತ್ತತ್ವ ರತ್ನಮಾಲಾಯಾಮಿಂದಿರಾ ಪ್ರಕರಣೇ ‖ "ಕ್ಷಣಸ್ಯಾನಂತಭಾಗಾನಾಮೇಕೈಕಸ್ಯಾಂಶಕೇಪಿಚ‖ವಿಷ್ಣೋರ್ಗುಣಾನನಂತಾಶ್ಚ ದ್ರಷ್ಟುಕಾಮಾಪಿ ಸಾಸ್ಫುಟಂ‖ ಕ್ಷಣೇಕ್ಷಣೇ ನವನವಸುವಿಶೇಷೋಪಲಂಭತಃ ‖ ತತ್ತತ್ಕಾಲೇಗಾಹಮಾನಾ ಕೌತೂಹಲ ಮಹಾರ್ಣವೇ ‖ ೨ ‖ ಪರಮಾನಂದ ಸಂಧೋಹಸಾಂದ್ರಾ ಧ್ಯಾಯತಿ ತತ್ಪುನಃ‖ಪುನರಾಶ್ಚರ್ಯಯುಕ್ತಾ ಸಾ ಪುನರಾಶ್ಚರ್ಯದರ್ಶನಾತ್‖೩‖ ವಿಷ್ಣೋರ್ಗುಣಾನನಂತಾಶ್ಚ ನ ಜಾನಾತಿ ತಥಾಪಿತ್ವಿತಿ" ‖ ಅನಂತಗುಣಗಳಲಿ ಒಂದೊಂದು ಅಂಶದಲ್ಲೆ, ಶ್ರೀಮುಕುಂದನ ಗುಣಮಣಿಗಳನ್ನೆಣಿಸುತಿರಲು, ಕ್ಷಣೇ ಕ್ಷಣೇನೂತನನೂತನ ವಿಶೇಷಗಳ ಕಂಡು,ಕೌತೂಹಲ ಸಮುದ್ರದಲಿ ಮುಳುಗಿ ಪರಮಾನಂದಬಟ್ಟು,ಮಹಾಶ್ಚರ್ಯ ಪಡದರೂ ತಿಳಿಯದೇ ಶ್ರೀ ಮಹಾಲಕ್ಷ್ಮೀ ದೇವಿಯರು ಆನಂದ ಸಮುದ್ರದಲ್ಲಿ ಮುಳುಗಿಹರು.

**೩ನೇ ಪದ್ಯ**– ನಿರುಪಮಾನಂದಾತ್ಮಭವನಿರ್ಜರಸಭಾಸಂಸೇವ್ಯ ‖

ಈಗ್ಗೆ ಜಗದ್ಗುರುಗಳಾದ ಚತುರ್ಮುಖ ಬ್ರಹ್ಮದೇವನನ್ನು ಅಭೀಷ್ಟ ಪ್ರಾರ್ಥಿಸುತ್ತಾರೆ. ನಿರುಪಮೇತಿ ‖ ನಿರುಪಮಾನಂದಾತ್ಮಾ = ಅಸದೃಶ ಆನಂದಾರೂಪ ಶ್ರೀಹರಿ, ನಿರ್ಜರ=ದೇವತೆಗಳ, ಅಮರಾನಿರ್ಜರಾ ದೇವಾಃ ಎಂತ ಅಭಿಧಾನ‖ ವಾಣೀಮುಖ ಸರೋಜ ಇನ=ಸರಸ್ವತೀ ಮುಖಪದ್ಮಕ್ಕೆ ಸೂರ್ಯ ಆನಂದಕರ ಯೆಂತ ಅರ್ಥ.ಶಶಾಂಕದಳಶೇಖರ........ಜಗದೇಕಗುರು.ಸಜ್ಜನಸಮುದಾನುಕ್ಕುಪದೇಷ್ಟೃ, "ಅಸಜ್ಜನೋಪದೇಶ ಮಾನಸ್ತೇನೇಭ್ಯ" ಎಂಬಾಮ್ನಾಯನಿಬದ್ಧವಾದ ಪ್ರಯುಕ್ತ, ಜಗತ್ಬದ್ಧ ಸರ್ವಸುಜನಪರ. ಅಭಿವಂದಿಸುವೆ=ನಮಸ್ಕರಿಸುವೆ, ಪಾಲಿಸದು=ಕೊಡುವದು, ಸನ್ಮತಿಯ=ಸುಬುದ್ಧಿಯಾ ‖ ೩ ‖



**೪ನೇ ಪದ್ಯ**– ಆರುಮೂರೆರಡೊಂದು ಸಾವಿರ=ಈಗ್ಗೆ ಗುರುರೇವ ಹರಿಃ ಸಾಕ್ಷಾದ್ಗುರುವಂತರ್ಯಾಮಿಹರಿಂ (ಭಜೇತ್)ಹರೇತ್‖ಗುರುದ್ವಾರಾಪ್ರಸನ್ನಃಸನ್ ಭರತೇಂದಿರಮಾಪತಿಃ‖ಅಪ್ಯಚ್ಯು (ರ್ಚ)ತೋಗುರುಃದ್ವಾರಾಪ್ರಸಾದಕೃದಹಂತ್ವಿತಿ । ಯಂತ ಶ್ರೀಮದ್ವೃಂದಾವನಾಖ್ಯಾನಭಾರತನಿರ್ಣಯಾನುಸಾರ ವಾಯುದೇವರನ್ನಪ್ರಾರ್ಥಿಸುತ್ತಾರೆ.ಆರುಮೂರೇತಿ=ಆರು ಮೂರು,ಹದಿನೆಂಟು,ಎರಡೊಂದು=ಮೂರು, ಒಟ್ಟು ಇಪ್ಪತ್ತೊಂದು ಸಾವಿರದಾ, ಮೂರೆರಡುಶತ=ಆರುನೂರು, ಶ್ವಾಸಜಪಗಳು, ಮೂರು ವಿಧ ಸಾತ್ವಿಕರಾಜಸ-ತಾಮಸಭೇದದಿಂದ. ಅಬ್ಜಜ=ಬ್ರಹ್ಮ. ಎಮ್ಮ=ನಮ್ಮನ್ನು. ‖ ೪ ‖

**೫ನೇ ಪದ್ಯ**– ಈಗ್ಗೆ ಸ್ವಮುಖಮಂದಿರದಲ್ಲಿದಲ್ಲಿ ಸಕಲ ವಾಙ್ಮನೋ ದೇವತಾ ಸರಸ್ವತಿ ಸನ್ನಿಧಾನ ಕಾರಣ ಹೇಳುತ್ತ ಪ್ರಾರ್ಥಿಸುತ್ತಾರೆ.

"ಚತುರವದನನರಾಣಿ ಅತಿರೋಹಿತ ವಿಮಲವಿಜ್ಞಾನಿ ‖ ಅತಿರೋಹಿತ= ಪ್ರಳಯದಲ್ಲ್ಯೂ ಆಚ್ಛಾದನ ಇಲ್ಲದೇ ಇದ್ದದ್ದು. ಸ್ತುತಿಪುದಕೆ,=ಸ್ತೋತ್ರ ಮಾಡಲಿಕ್ಕೆ, ನೆಲಸು=ನಿಂದಿರು ‖ ೫ ‖

**೬ನೇ ಪದ್ಯ**– ಈಗ್ಗೆ ದಾಸರು ಶ್ರೀಭಾರತೀದೇವಿಯರನ್ನು ವಿಜ್ಞಾನಯಾಚನಾ ಮಾಡುತ್ತಾರೆ.

"ಕೃತಿರಮಣ ಪ್ರದ್ಯುಮ್ನನಂದನೆ"

ಕೃತಿನಾಮಕರಮಾಧಿಪ ಶ್ರೀಪ್ರದ್ಯುಮ್ನ. ತದುತ್ಪನ್ನಾಭಾರತೀ‖ಉಕ್ತಂಚ ನಿರ್ಣಯೇ ತೃತೀಯಾಧ್ಯಾಯೇ‖ವಾಸುದೇವಾದಿ ಸೃಷ್ಟಿಕ್ರಮ ಕಥನಪ್ರಸ್ತಾವೇ ಪ್ರದ್ಯುಮ್ನತಃಶ್ಚಾಥಕೃತೌಸ್ತ್ರಿಯೌದ್ವೇ।ಪ್ರಜಜ್ಞತುರಿತ್ರಿ।ಪ್ರಮೇಯಮಾಲಾಯಃಂಚ ತತ್ಪ್ರದ್ಯುಮ್ನರೂಪೇಣ ಕೃತ್ಯಾಂ ಗಾಯತ್ರೀ ಸಾವಿತ್ರೀ-ಸರಸ್ವತೀರೂಪತ್ರಿಗೂಪಾತ್ಮಕ ಪ್ರಧಾನಸಂಜ್ಞಕ ಗಾಯತ್ರೀ-ಶ್ರದ್ಧಾನಾಮಕ ಭಾರತೀರೂಪ ಕನ್ಯಾ ಚತುಷ್ಟಯೋತ್ಪಾದಕಾಯನಮಃ ಇತಿ ‖ ನಿಜೇತಿ=ಅವಾಂತರಭಾರ್ಯಾಭೂತ ರಾಜಪುತ್ರೀ ವ್ಯವಚ್ಛೇದಾರ್ಥ ಹೇಳಿದರು. ಆರೂಪತಿಳಿಸು ‖

**೭ನೇ ಪದ್ಯ**– ಈಗ್ಗೆ ಶ್ರೀ ಕೃಷ್ಣದ್ವೈಪಾಯನಾಚಾರ್ಯರನ್ನು ಕ್ಷೇಮ ಪ್ರಾರ್ಥಿಸುತ್ತಾರೆ. "ವೇದಪೀಠವಿರಂಚಿ" ಪ್ರಥಮಪದ್ಯೋತ್ತರದಲ್ಲಿ ಶ್ರೀನಾರಾಯಣ ಅವತಾರರಾದ ವೇದವ್ಯಾಸದೇವರನ್ನು ಪ್ರಾರ್ಥಿಸುವದು ಬಿಟ್ಟು ಅಂತ್ಯದಲ್ಲ್ಯಾಕ ಪ್ರಾರ್ಥಿಸಿದರೆಂದರೆ, ಇದೇಪ್ರಶ್ನ ಶ್ರೀಕೃಷ್ಣದೇವರನ್ನ ಗರುಡದೇವರು

ನಾರಾಯಣಂ ನಮಸ್ಕೃತ್ಯಎಂಬ ಪದ್ಯದಲ್ಲಿ ಮಾಡಲು "ವ್ಯಾಸಸ್ತು ಕಶ್ಚನಋಷಿಃ ಪುರಾಣೇ ತಾಮಸೇ ಸ್ಮೃತಃ। ಇತಿ ಜ್ಞಾನಾವಲಂಬೇನ ದೈತ್ಯಾನುಗಾಃ ಸದಾ॥ ಪ್ರವಿಶಂತು ಹ್ಯಂಧತಮಃ ಇತಿಹ್ಯಂತೇ ನಮಸ್ಕೃತಂ ॥ ಎಂತ ಗಾರುಡ ಬ್ರಹ್ಮ ಕಾಂಡದಲ್ಲಿ ಐದನೇ ಅಧ್ಯಾಯದಲ್ಲಿ ಸಮಾಧಾನ ಹೇಳಿದರು. ಶ್ರೀಹರಿಮತಾನುಸಾರಿಗಳಾದ ದಾಸರಾಜರು ಹಾಂಗೆ ಹೇಳಿದರು. ವೇದಪೀಠ=ವೇದವ್ಯಕ್ತೀಕರಿಸಿದ ಪ್ರಯುಕ್ತ ಪೀಠವಾದಾಮ್ನಾಯವರ್ಗ, ಮೋದಚಿನ್ಮಯಗಾತ್ರ= ಆನಂದ ಜ್ಞಾನಮಯ ಸಚ್ಚಿದಾನಂದ ದೇಹ. ಭೇದೇತಿ. ಭೂಮಿಷ್ಠ ಕಲಿಪ್ರಭೃತಿ ದುರ್ಜನವಾಕ್‌ಶರತಾಡಿತನಾದರೂ, ಖೇದ=ಬುದ್ಧಿವೈಕಲ್ಯ,ವಿಷಾದ = ಶೋಕ, ಕುಟಿಲ=ವಕ್ರತಾ, ಅಂತ=ದೇಹವಿಯೋಗ, ಆದಿಗಳು= ಜನನಾ, ಮಧ್ಯಅಂದರೆ, ಬಾಲ್ಯ, ಕೌಮಾರ, ಕೈಶೋರ, ಪೌಗಂಡಾದ್ಯವಸ್ಥಾ ಇವುಗಳಿಂದವರ್ಜಿತ ॥ ಆದಾನ = ಸಮ್ಯ ಜ್ಞಾನಃ ವೈರಾಗ್ಯಾದಿದಾನ, ಆದಿ=ಅದನ. ಸತ್ರಾಣ=ಸಜ್ಜನ ರಕ್ಷಕ ॥ ೭ ॥

**೮ನೇಪದ್ಯ**- ಈಗ್ಗೆಆನಂದತೀರ್ಥರನ್ನು ನಮನ ವ್ಯಾಜೇನಸ್ತುತಿಸುತ್ತಾರೆ. " ಕ್ಷಿತಿಯೊಳಗೆ ಮಣಿಮಂತ " ಕ್ಷಿತೀತಿ । ಮಣಿಮಂತೇತಿ। ಅಂಘ್ರಿತಲೋದ್ಭವ ಸಂಕರಾದಿಗಳು । " ಉಕ್ತಂಚ ಪ್ರಥಮ ಸರ್ಗೇ ಸುಮಧ್ವ ವಿಜಯೇ॥ "ಸಸಂಕರಾಖ್ಯೋಂಘ್ರಿತಲೇಷು ಜಜ್ಞೇಇತಿ ॥ ನಡುಮನೆ=ಮಧ್ಯಗೇಹ,ಸತೀ, ವೇಗ(ದ) ವತೀ । ಉಕ್ತಂಚ ಪಂಚರಾತ್ರಾಗಮೇ ಋಕ್ ಸಂಹಿತಾಯಾಂ ॥ "ವೇಗ (ದ) ವತ್ಯಾಖ್ಯ ಭಾರ್ಯಾಯಾಂ ತಸ್ಮಾಜ್ಜಾತೋ ಭವೇತ್ಪ್ರಭುರಿತಿ ॥ ಅಪ್ರತಿಮ= ಅಸದೃಶ ॥ ೮ ॥

**೯ನೇ ಪದ್ಯ**- ಇನ್ನುಮೇಲೆ ದಾಸವರ್ಯರು ತಮ್ಮ ಸತ್ಕಾವ್ಯವು ಶಿಷ್ಟ ಜನ ಸಮ್ಮತವೆಂದು ಪೇಳುವದಕ್ಕೆ ತಂತ್ರಸಾರಾದಿ ಮೂಲತ್ವ ಹೇಳುತ್ತ, ಶ್ರೀ ಪೂರ್ಣ ಪ್ರಜ್ಞರನ್ನು ಸ್ಮರಿಸುತ್ತಾರೆ. " ಪಂಚಭೇದಾತ್ಮಕ ಪ್ರಪಂಚಕೆ॥ ಪಂಚಭೇದಾತ್ಮಕ= ಜೀವೇಶ್ವರಭೇದಾದಿ ಐದು ಭೇದ ಸ್ವರೂಪ ಪ್ರಪಂಚಕೆ । ಉಕ್ತಮನುವ್ಯಾಕೃತೌ । ಪ್ರಪಂಚೋ ಭೇದ ಪಂಚಕ ಇತಿ ॥ ಪಂಚರೂಪ ವಾಸುದೇವೋಪೇತಾನಿರುದ್ಧಾದಿಗಳು. ಪಂಚಮುಖ = ಮಹಾದೇವ ಪಂಚವಿಂಶತಿ= ಪೃಥಿವ್ಯಪ್‌ತೇ ಜೋ ವಾಯ್ವಾಕಾಶ ೫. ರೂಪ-ರಸ-ಗಂಧ-ಸ್ಪರಿಶ-ಶಬ್ದ-೧೦. ಸಂಕಲ್ಪ ವಿಕಲ್ಪರೂಪ ಮನಸ್ಸು, ನಿಶ್ಚಯರೂಪ ಬುದ್ಧಿ,



ಅಸ್ವರೂಪೇ ಸ್ವರೂಪಮತಿರೂಪಾಹಂಕಾರ, ನಿರಂತರ ಸ್ಮರಣಾತ್ಮಕ ಚಿತ್ತ, ೧೪. ವಾಕ್-ಪಾಣಿ ಪಾದಪಾಯೂಪಸ್ಥಾರೂಪ ಕರ್ಮೇಂದ್ರಿಯ ೧೯, ಚಕ್ಷುಸ್ತ್ವಘ್ರಾಣರಸನ ಶ್ರೋತ್ರಗಳು ಜ್ಞಾನೇಂದ್ರಿಯ ೨೪, ಪ್ರಕೃತಿ(೧) ಒಟ್ಟು ೨೫ ॥ ಉಕ್ತಂಚ ತೃತೀಯ ಸ್ಕಂಧೇ । ಮಾತರಂ ದೇವಹೂತಿಂ ಪ್ರತಿ ಶ್ರೀ ಸಿದ್ಧಾಚಾರ್ಯಾಭಿಷ್ಟುತ ಶ್ರೀ ಕಪಿಲ ದೇವೇನ॥ ಪಂಚಭಿಃ ಪಂಚಭಿಃ ಬ್ರಹ್ಮ ಚತುರ್ಭಿಃ ದಶಭಿಃಸ್ತಥಾ॥ ಏತಚ್ಚತುರ್ವಿಂವಶತಿಕಂ ಗಣಂ ಪ್ರಾಧಾನಿಕಂ ವಿದುರಿತಿ ॥ ಪಂಚಿಕೆಗಳು= ತತ್ವಸಮುದಾಯಗಳು, ಪೇಳಿದ=ತಂತ್ರ ಸಾರದಲ್ಲಿ ಹೇಳಿದ, ಆನಂದ ತೀರ್ಥರ, ನೆನೆವೆನು ಅನದಿನದಿ. ॥ ೯ ॥

**೧೦ ನೇ ಪದ್ಯ**- ಆರೋಗ್ಯಂ ಭಾಸ್ಕರಾದಿಚ್ಛೇದ್ಭೂತಿಮಿಚ್ಛೇದ್ಧುತಾಶನಾತ್ ॥ ಮಹೇಶಾತ್ತು ಜ್ಞಾನಮಿಚ್ಛೇನ್ಮೋಕ್ಷ ಮಿಚ್ಛೇಜ್ಜನಾರ್ದನಾತ್॥ ಈ ಭಾಗವತ ಅಭಿಪ್ರಾಯ ಮನಸ್ಸಿನಲ್ಲಿಟ್ಟು, ಜ್ಞಾನದಾನ ಪ್ರಯೋಜಕರಾದ, ಲೋಕಶಂಕರ, ಶಂಕರನನ್ನು ಮಂಗಳ ಪ್ರಾರ್ಥಿಸುತ್ತಾರೆ.

" ವಾಮದೇವೇತಿ ॥ ಸಾಮಜಾಜಿನ=ಗಜಚರ್ಮ, ಸುಮನಸೋತ್ತಂಸ= ದೇವಶ್ರೇಷ್ಠ, ಸೋಮಸೂರ್ಯಾನಳ ವಿಲೋಚನ= ಅತಿಶಯ ಕಾಂತಿಯುತ ನೇತ್ರತ್ರಯ ॥ ೧೦ ॥

೧೧ **ನೇ ಪದ್ಯ**- ಮತ್ತೂ ಶ್ರೀ ಚಂದ್ರಲಲಾಮಾ(ಭೂಷಣಾ)ನುಗ್ರಹ ಕಾಮರಾದ ದಾಸರು ಪುನಃ ಚಂದ್ರಮೌಳಿಯನ್ನು ಪ್ರಾರ್ಥಿಸುತ್ತಾರೆ. " ಕೃತ್ತಿವಾಸನೆ ಹಿಂದೆ ನೀನಾಲ್ವತ್ತುಕಲ್ಪ " ಕೃತ್ತಿ= ಚರ್ಮ, ನಾಲ್ವತ್ತುಕಲ್ಪ= ಚತುರ್ಯುಗ ಸಹಸ್ರಾಣಿ ಬ್ರಹ್ಮಣೋದಿನ ಮುಚ್ಯತೇ ॥ " ಎಂಬ ಮಾನಾನುಸಾರ, ನಾಲ್ವತ್ತು ಚತುರ್ಮುಖನ ದಿನ ಕಲ್ಪ ವಾಯುವೇವರಲ್ಲಿ, ಯದ್ಯಪಿ ಕರ್ಮ ಕ್ಷಯಪಾದಾನುಭಾಷ್ಯದಲ್ಲಿಯ " ಲಿಂಗಾಲ್ಲಾತವ್ಯತ " ಇತ್ಯಾದಿನಾ, ಪಂಚ ಸಪ್ತತಿ ಹಾಯನ ಪರ್ಯಂತ ಲಾತವ್ಯರಲ್ಲೇ ಹರಪದ ಯೋಗ್ಯ ಉಗ್ರತಪಾಖ್ಯರು ಅಧ್ಯಯನ ಮಾಡಿದರಂತೆ ಅದೆ. ಆದರೂ ಮೊದಲ ಲಾತವ್ಯರಲ್ಲೇ ಅನಂತ ಸಮೀರರಲ್ಲೇ ಅಂತ ಅನಬೇಕು. ಹತ್ತು ಕಲ್ಪೇತಿ= ಉಕ್ತ ಮನು ಭಾಷ್ಯೆ (ಅನುವ್ಯಾಖ್ಯಾನೇ) ಜ್ಞಾನ ಪಾದೇ॥"ದಶಕಲ್ಪಂತಪಶ್ಚೀರ್ಣಂ ರುದ್ರೇಣ ಲವಣಾಣವೇ । ತ್ಯಕ್ತ್ವಾ ಸುಖಾನಿ ಸರ್ವಾಣಿ ಕಷ್ಟೇನ ಲವಣಾಂಭಸೀತಿ ॥ ಉಪಾಸಿತವ್ಯ ಏವಾರ್ಥೆ ಧೃತಚಿತ್ತಃ,ದಶಮನ್ವಂತರಾಣಿ ಯಸ್ಮಿನ್ ಕಾಲೇ ಸ

ತಥೋಕ್ತಃ=ಹತ್ತು ಮನುಕಲ್ಪಗಳಲ್ಲಿ ಲವಣಾರ್ಣವದಲ್ಲಿ ತಪಸ್ಸಗೈದು; ಪುರುಷೇತಿ–ರುದ್ರಸ್ಯ ಶೇಷಪದೇನ್ನೈವ ಮುಕ್ತಿಃ।ಉಕ್ತಂಚ ನ್ಯಾಯಸುಧಾಯಾದು ಪತ್ಯೇ। ರುದ್ರಸ್ಯ ಶೇಷತ್ವಾನಂತರಮೇವ ಮುಕ್ತೇಃಕ್ಲಪ್ತತ್ವಾದಿತಿ ॥ ೧೧ ॥

೧೨ **ನೇ ಪದ್ಯ**– "ಶ್ರೀ ಮದಾನಂದ ತೀರ್ಥಾರ್ಯ ಮತಮಾಚಂದ್ರ ತಾರಕಂ । ಆಸೇತೋರಾಹಿಮಾದ್ರೇಶ್ಚ ಸಮೀಚೀನಂ ಪ್ರವರ್ತತಾಂ" ॥ ಎಂಬ ಮಾರ್ಗಪಾದ ಸುಧಾ ಯಾದುಪತ್ಯಾನುಸಾರ, ಸಂಪ್ರದಾಯ ಪ್ರವರ್ತಕಾನುಗ್ರಾಹಕರಾದ ಗುರುಗಳನ್ನು ಅಭಿನಮಿಸುತ್ತಾರೆ. "ಪಾಕಶಾಸನ ಮುಖ್ಯ ಸಕಲ ದಿವೌಕ ಸರಿಗಭಿನಮಿಪೆ" ಪಾಕಶಾಸನೇತಿ=ಇಂ ದ್ರಃ, ಕಮಲನಾಭ=ಪದ್ಮನಾಭ,ಬಿಡದೇ ರಮಾಕಳತ್ರನ ದಾಸ ವರ್ಗಕೆ,ನಮಿಪೆ=ನಮಿಸುವೆನು॥೧೨॥

೧೩ **ನೇ ಪದ್ಯ**–"ಪರಿಮಳವು ಸುಮನದೊಳಗನಳನು." ಪರಿಮಳೇತಿ॥ ಈ ನಿದರ್ಶನಗಳು ಶ್ರೀಹರಿ ಅಪ್ರಕಟಅಜ್ಞ ಲೋಕಕ್ಕೆ ಎಂಬಲ್ಲೆ, ಸಜ್ಜನರನ್ನು ಜ್ಞಾಪಿಸುತ್ತಾರೆ. ಕರುಣೇತಿ ॥ ೧೩ ॥

ಇತಿ ಶ್ರೀ ಮತ್ಕವಿಕುಲ ತಿಲಕ ವಿದ್ವದ್ದಾಸ ಧುರ್ಯಾಮೃತಾಬ್ಧೀಂದು ಜಗನ್ನಾಥದಾಸರಾಜವಿರಚಿತ ಶ್ರೀ ಮದ್ಧರಿಕಥಾಮೃತಸಾರಸ್ಯ ಭಾವ ಸೂಚನೇ ‡ ಹಾನಗಲ್ಲು, ಜಮುಖಂಡೀ ಶ್ರೀನಿವಾಸಾರ್ಯ ಸೂನು ವಿರಚಿತೇ ಮಂಗಳ ಸಂಧಿಃ ಸಮಾಪ್ತಃ ॥



‡ ಹಾನಗಲ್ಲು ಎಂದು ಕೆಲವುಕಡೆ ಇರುತ್ತದೆ.

॥ ಹರಿಃ ಓಂ ॥

– ಶ್ರೀಗುರು ರಾಜೋವಿಜಯತೇ –

# ಶ್ರೀಹರಿ ಕಥಾಮೃತಸಾರ ಟೀಕಾ
# ಶ್ರೀ ವ್ಯಾಸ ದಾಸ ಸಿದ್ಧಾಂತ ಕೌಮುದೀ

## ಶ್ರೀ ಜಂಬುಖಂಡಿ ಶ್ರೀ ವಾದಿರಾಜಾಚಾರ್ಯ ಪ್ರಣೀತಾ

### ಮಂಗಲಾಚರಣ ಶ್ಲೋಕಾಃ

ಶ್ರೀಮದ್ಗುರು ಹೃದಯಾಂಭೋಜ ಮಂದಿರ ಶ್ರೀ ಮತ್ಸಮೀರ ತತ್ಪದಾರ್ಹ ಶ್ರೀಗುರುರಾಜಶಯಾರ್ಚಿತ ಶ್ರೀ ಮದ್ಗಂಧರ್ವಕಂಧರ ಭೂತರಾಜಾದಿ ಸಂಸೇವಿತ ಮಾಂ ಪಾಹಿ ॥ ಉಭೌಗುರುತ್ತಮೌ ರಕ್ಷಂ ತಾಂ ॥

ಪದ್ಮೋದ್ಭವಾಪತಿಂ ನಾಭಿಸಂಭೂತಾಯ ತ್ರಯೀಪ್ರದಂ ॥
ಸಮೀರ ಗುರುರಾಜೇಂದ್ರ ವಂದಿತಂ ನೌಮಿ ಮೇ ಪ್ರಿಯಂ ॥೧॥
ಲಕ್ಷ್ಮೀಮಕ್ಷರ ಪಾದಾಬ್ಜ ಷಟ್ಪದಾಂ ಮಮ ಸೌಖ್ಯದಾಂ ॥
ಗುರುರಾಜನುತಾ ಮಂಬಾ ಮರ್ಥಯೇ ಜ್ಞಾನದಾಯಿನೀಮ್ ॥೨॥
ನಾಭಿತಾಮರಸೋದ್ಭೂತಮಮರಾಸುರ ವಂದಿತಮ್ ॥
ಮುಖ್ಯೈರ್ವಿದ್ಯಾಃ ಸ್ವಂಜಂತಂ ತ ಮೀಡೇ ಮಧುಹತೇಃ(ಹೃತಃ) ಸುತಮ್ ॥೩॥
ಮತಿಮಂತಂ ಹನೂಮಂತಂ ಭೀಮಂ ಭೈಷ್ಮೀಪತಿ ಪ್ರಿಯಂ ॥
ಮಧ್ವಂ ಧ್ವಸ್ತಗುಣ(ಂ) ವ್ಯಾಸ ಮುರಹಂತುಃ ಪ್ರಿಯಂ ಭಜೇ ॥೪॥
ಸರಸ್ವತ್ಯೈ ಕೃತೋನ್ನತ್ಯೈ ರತಿಮತ್ಯೈ ಹರೇಃ ಪದೇ ॥
ಮನೋಜ್ಞ ಮೂರ್ತ್ಯೈ ಭಾರತ್ಯೈ ಮಯಿಭೂತ್ಯೈ ನಮೋನಮಃ ॥೫॥
ಖಂಡೇಂದು ಗಂಗಾರಾಜಚ್ಛ್ರೀ ಮಸ್ತಂ ಶ್ರೀರಾಮಕಿಂಕರಂ ॥
ಶಂಕರಂ ಪಾರ್ವತೀನಾಥಂ ತತ್ಪದಾರ್ಹಂ ಶ್ರಯೇ ಮುದೇ ॥೬॥
ವೃಂದಾರಕಾಣಾಂ ಭವ್ಯಾನಾಂ ವೃಂದಂ ವೃಂದಾವನೇ ಗತಂ ॥
ಯಾಚೇ ಧೀ ನಿರ್ಮಲಂ ಸೋದಾಪುರವಾಸಸುಸೇವಕಂ ॥೭॥

ಪುರಂದರೇಣ ಚಿತ್ತೇನ ಪಾಲಿತಾನ್ ಸುಪುರಂದರಾತ್ ॥
ವರ್ಣಯಂತೋ ನಯಂ(ನ) ದೇಶ ಕಾಲಂ ಕಾಲ ನಿರೀಕ್ಷಣಾತ್ ॥೮॥
ಪುರಂದರಾಖ್ಯ ಸದ್ದಾಸ ಪ್ರಮುಖಾನರ್ಥಯೇಽನಿಶಮ್
ಚಿಪ್ಪಗಿರ್ಯಧಿಪಾನ್ ಶಿಷ್ಯತ್ರಿತಯಂ ಮಾಪತೇಃ ಪ್ರಿಯಮ್ ॥೯॥
ಹರೇಃಕಥಾಸುಧಾಸಾರೇ ಚಂಚರೀಕಾಃ ಮರುತ್ಪ್ರಿಯಾಃ ॥
ಜಗದೀಶಸ್ಯ ದಾಸಾ ಯೇ ಪ್ರೇಕ್ಷಾಂ ಮಹ್ಯಂ ದಿಶಂತು ತೇ ೧೦॥॥
ಶ್ರೀಮಧ್ವಶುದ್ಧರಾದ್ಧಾಂತ ಭೂಮೀನ್(ಮಿ) ಶ್ರೀ ಕೃಷ್ಣಸೇವಕಾನ್ ॥
ವಿದ್ಯಾಧೀಶ ಮುನೀನ್ ಸತ್ಯ ಪರಾಕ್ರಮಗುರೂನ್ ಭಜೇ ॥೧೧॥
ದೇವಮಾನುಷ ವಿತ್ತಸ್ಯ ವರ್ಧಕಾನ್ ಪಿತೃಶೇಖರಾನ್ ॥
ಶ್ರೀನಿವಾಸಾಹ್ವಯಾನ್ನತ್ವಾ ಸೋದೇಡ್ ಜಾತೋಹಮಲ್ಪಕಃ ॥೧೮॥
ವಾದೀ ಮಧ್ವಸುಪದ್ಯಸ್ಥ ವೀಣೇವ ಕರುಣಾಲವಾತ್ ॥
ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀಮಾತನೋವ್ಯಲಂ ॥೧೩॥

## ಕನ್ನಡಾರ್ಥ

ಚತುರ್ಮುಖನಿಗೆ ವೇದವಿದ್ಯಾಪ್ರದನೂ,ಶ್ರೀವಾಯು ಹಾಗು ಗುರುರಾಜರಿಂದ ನಮಸ್ಕೃತನೂ, ನನಗೆ ಪ್ರಿಯತಮನೂ ಆದ ಶ್ರೀ ರಮಾಪತಿಯನ್ನು ನಮಸ್ಕರಿಸುತ್ತೇನೆ. ॥ಶ್ಲೋ. ೧॥

ಅಚ್ಯುತನ ಅಡಿದಾವರೆಗಳಲ್ಲಿ ಅಳಿಯಂತಿರುವ, ನಮ್ಮೆಲ್ಲರಿಗೂ ಸುಖಜ್ಞಾನಗಳನ್ನೀಯುವ, ಗುರುರಾಜ ಶ್ರೀ ವಾದಿರಾಜರಿಂದ ಅಭಿವಂದಿತಳಾದ ಶ್ರೀ ಮಹಾಲಕ್ಷ್ಮಿಯನ್ನು ಪ್ರಾರ್ಥಿಸುತ್ತೇನೆ. ॥ ಶ್ಲೋ ೨ ॥

ಪರಮಾತ್ಮನ ನಾಭಿಕಮಲದಿಂದ ಉತ್ಪನ್ನರಾದ- ದೇವದಾನವಾದಿ ಸರ್ವರಿಂದ ಸಮಸ್ಕೃತರಾದ- ನಾಲ್ಕು ಮುಖಗಳಿಂದ ವಿದ್ಯೆಗಳನ್ನು ಉಪದೇಶಿಸುತ್ತಿರುವ ಹಾಗೂ ಮಧುಸೂಧನನ(ನಾರಾಯಣನ) ಪುತ್ರರಾದ ಚತುರ್ಮುಖ ಬ್ರಹ್ಮದೇವರನ್ನು ಸ್ತುತಿಸುತ್ತೇನೆ. ॥ಶ್ಲೋ. ೩॥

ಜ್ಞಾನವಂತನಾದ ಶ್ರೀ ಹನುಮಂತನನ್ನೂ, ರುಕ್ಮಿಣೀವಲ್ಲಭ ಶ್ರೀಕೃಷ್ಣನ ಪಿಯತಮ ಭಕ್ತನಾದ ಭೀಮಸೇನನನ್ನೂ, ನಿರ್ದೋಷರಾದ ಶ್ರೀವೇದವ್ಯಾಸರ ಪ್ರಿಯಶಿಷ್ಯರಾದ ಶ್ರೀ ಮಧ್ವಮುನಿಗಳನ್ನೂ ಭಜಿಸುತ್ತೇನೆ. ॥ಶ್ಲೋ. ೪ ॥



ಹರಿಪಾದದಲ್ಲಿ ಭಕ್ತಿಸಂಪನ್ನಳಾದ, ( ಉನ್ನತಿಯನ್ನು ಹೊಂದಿರುವ ) ಜಗತ್ತಿನ ಉನ್ನತಿಯನ್ನು ಮಾಡಿರುವ, ನಮ್ಮ ಐಶ್ವರ್ಯವನ್ನು ಅನುಗ್ರಹಿಸುವ ಮನೋಹರ ಮೂರುತಿಯಾದ ಸರಸ್ವತೀ ಹಾಗೂ ಭಾರತೀ ದೇವಿಯವರಿಗೆ ಮತ್ತೂ ಮತ್ತೂ ನಮಸ್ಕರಿಸುತ್ತೇನೆ. ॥ ಶ್ಲೋ. ೫ ॥

ಅರ್ಧಚಂದ್ರ- ಹಾಗೂ ಭಾಗೀರಥಿಯನ್ನು ಮಸ್ತಕದಲ್ಲಿ ಭೂಷಿಸಿಕೊಂಡಿರುವ, ರಾಮಸೇವಕನಾದ, ಪಾರ್ವತೀಪತಿ ರುದ್ರ ( ಮಹಾದೇವ ) ದೇವನನ್ನೂ, ಅವನ ಪದಕ್ಕೆ ಬರುವವನನ್ನೂ ಸುಖಕ್ಕಾಗಿ ನಮಸ್ಕರಿಸುತ್ತೇವೆ. ॥ ಶ್ಲೋ. ೬ ॥

ಸೋದಾಪುರವಾಸಿ ಶ್ರೀಗುರುರಾಜರ ಸೇವಕರಾದ, ವೃಂದಾವನದಲ್ಲಿ ಸನ್ನಿಹಿತರಾಗಿರುವ, ನಿರ್ಮಲಮತಿಗಳಾದ ದೇವತೆಗಳ ಸ್ತೊಮವನ್ನು ನಮಸ್ಕರಿಸಿ ಬೇಡಿಕೊಳ್ಳುತ್ತೇನೆ. ॥ ಶ್ಲೋ. ೭ ॥

ಮನಸ್ಸಿಗೆ ಅವಾಂತರಾಭಿಮಾನಿಗಳಾಗಿರುವ ಇಂದ್ರನಿಂದ ಅನುಗ್ರಹೀತರಾಗಿ, ಐಶ್ವರ್ಯಾದಿ ಗುಣವಂತನಾದ ಪರಮಾತ್ಮನನ್ನುಉಪಾಸಿಸಿ, ದೇಶಕಾಲೋಚಿತವಾದ ಧರ್ಮಗಳನ್ನು ಆಚರಿಸುತ್ತಲೂ, ಉಪದೇಶಿಸುತ್ತಲೂ, ಕಾಲವನ್ನು ಸಾರ್ಥಕಗೊಳಿಸುತ್ತಿರುವ ಪುರಂದರ ದಾಸರೇ ಮುಂತಾಗಿರುವ ಸದ್ದಾಸರನ್ನೂ, ಚಿಪ್ಪಗಿರಿಯ ದಾಸರನ್ನೂ, ( ಶ್ರೀ ವಿಜಯರಾಯರನ್ನು ) ಹರಿಸುಪ್ರೀತಿ ಪಾತ್ರರಾದ ಅವರ ಮೂವರು ಶಿಷ್ಯರನ್ನೂ ಯಾವಾಗಲೂ ಬೇಡಿಕೊಳ್ಳುವೆ ॥೮-೯॥

ಹರಿಕಥಾಮೃತ ಸಾರದಲ್ಲಿ ತುಂಬಿಗಳಂತೆ ಆಸಕ್ತರೂ, ಮಾರುತನ ಪ್ರಿಯ ಭಕ್ತರೂ, ಹರಿಯದಾಸರೂ, ಆದ ಭಗವದ್ಭಕ್ತರೆಲ್ಲರೂ ನನಗೆ ಉತ್ತಮ ಜ್ಞಾನವನ್ನು ಕೊಡಲಿ ॥ ೧೦ ॥

ಪರಿಶುದ್ಧ ಮಧ್ವ ಸಿದ್ದಾಂತಕ್ಕೆ ( ಆಶ್ರಯದಾತರಾದ ) ಖನಿಯಂತಿರುವ ಶ್ರೀ ಕೃಷ್ಣಸೇವಕರಾದ ಶ್ರೀ ವಿದ್ಯಾಧೀಶರನ್ನೂ, ಶ್ರೀ ಸತ್ಯಪರಾಕ್ರಮ ತೀರ್ಥರನ್ನೂ ನಮಸ್ಕರಿಸುವೆನು ॥ ೧೧ ॥

ದೈವ ಹಾಗೂ ಮಾನುಷ ಸಂಪತ್ತುಗಳನ್ನು ಬೆಳೆಯಿಸಿಕೊಟ್ಟಿರುವ ಶ್ರೀನಿವಾಸಾಚಾರ್ಯ(ರೆಂಬ) ನಾಮಕರಾದ ಪೂಜ್ಯ ತಂದೆಯವರನ್ನು ನಮಸ್ಕರಿಸಿ, ಸೋದಾಪುರಾಧೀಶರ ಕರುಣೆಯಿಂದ ಜನಿಸಿದ, ಈ ಅಲ್ಪ ಮತಿಯು ನಾನು ಶ್ರೀ ಮಧ್ವಗುರುರಾಜರ ಕರುಣೆಯಿಂದ ಅವರ ಮಧುರ ಪದ್ಯವನ್ನುಅನುಸರಿಸುವ

ವೀಣೆಯಂತೆ ನುಡಿಯುತ್ತ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ" ಎಂಬ ಹರಿಕಥಾಮೃತಸಾರ ಟೀಕೆಯನ್ನು ವಿರಚಿಸುತ್ತೇನೆ ‖ ಶ್ಲೋ. ೧೨-೧೩ ‖

ಇಹ ಖಲು ಸದ್ವೈವ ಶ್ರೀ ಪೂರ್ಣಬೋಧ ಸಚ್ಛಾಸ್ತ್ರ ಸಮಭ್ಯಾಸ ದಕ್ಷಾಃ ಪಕ್ಷಿಧ್ವಜ ಭಟಾಃ † ತಾಪತ್ರಯಾಭಿನಿಷ್ಟಪ್ತಂ ಸದ್ವೃಂದಂ ರಮಾ ಕಮಿತೃಸು ಕಥಾಮೃತೇನ ಸ್ನಪಯಂತೋ (ಅ) ಪಟು ಪ್ರಾಜ್ಞೋಪಾಸ್ತಯಃ "ಕಲಿ ದುಃ ಸಹವಾಸೋತ್ಥಾಂತರಾಯಹತ್ಯೈ ತ್ಯಕ್ತಾತ್ವಾರ್ತನಾಂ ನೃಕೇಸರಿಶುಭೋ ಪಾಸ್ತಿಂ ಆತಿಷ್ಠಂತೇ" ಇತಿ ಶ್ರೀಗುರ್ವರ್ಥ ದೀಪಿಕಾಂ, "ಅವಿಘ್ನತ್ವಾವಿರೋಧೀ ಧೌ ಚ‡ "(ಅನು ವ್ಯಾ. ೩-೩ ಶ್ಲೋ ೬೫) ಇತಿ ಅನುವ್ಯಾಕೃತಿಂ, "ನಚಶುದ್ಧ ಮೋಕ್ಷ ಸಾಧನ ವೈರೂಪ್ಯಾತ್ ಮೋಕ್ಷ ಸಾಧನತ್ವೇನೋಪದಿಷ್ಟಂ ವಿನಾ ವಿಷ್ಣಾವೇವೋಪಾಸನಾಂತರಸ್ಯ ಅಕರ್ತವ್ಯತಾ" ಇತಿ ಪೂರ್ವಪಕ್ಷನ್ಯಾಯ ಮನುವಾದ್ಯ, "ಅವಿಘ್ನತಾ ಸಾಧನತ್ವಾತ್" ಇತಿ ಸೈದ್ಧಾಂತಲಿಂಗಂ ನ್ಯಾಯ ವಿವರಣಗಂ ಏಕೋನಚತ್ವಾರಿಂಶನ್ನಯಂ ಸಭಾಷ್ಯಂ, ವಿಘ್ನ ಹಾನಿಸ್ತು

† ಇತಃಪರಂ "ಭವಾಟವೀದಾವದಗ್ಧ ವ್ಯಾಯಾರ್ಥಾ (ನ) ಜ್ಞ ಮಧಿಕಾರಾಪೇತ ಯೋಷಾದಿ ವಿನಯ ಧೀಯೋಗ್ಯ ವಿನಯಾತನಯಾದ್ಯನಾಸ್ಕಂದಿತ ವಿನಯ ಭೂಷಿತ ಭೂಷಿತತ್ವಾದಿ ಬಾಹ್ಯಲಿಂಗ ಪ್ರದರ್ಶಕಂ ಛಾತ್ರವೃಂದಂ ದೀನ ಸುಕೃತ ಜನ್ಯೈಃ ಕಕ್ಷಂ ಆಶುಶುಕ್ಷಣಿರಿವಾ ದೀಪ್ತ ವರ್ಷಾದೋಷಾ ಫಲ್ಗು ಕೀಟಾಯಿತ ಪ್ರಜ್ಞಾ ಶಾಲಿಸದ್ವೃಂದಂ ತಾಪತ್ರಯಾಭಿನಿಷ್ಟಪ್ತಂ ಸ್ವಸ್ತಟಿನೀ ಹೃನ್ಮಗ್ನೋನ್ಮತ್ತ ತಪ್ತಸ್ತಂಬೇರಮವತ್ ರಮಾ ಕಮಿತೃಸುಕಥಾಮೃತೇನ ಸ್ನಪಯಂತಃ" ಇತ್ಯಪಿ ಅಧಿಕಃ ಪಾಠಃ ದರೀದೃಶ್ಯತೇ ಕಸ್ಮಿಂಶ್ಚಿತ್ ಪುಸ್ತಕೇ ‖

‡ ವಿಘ್ನಗಳ ಪರಿಹಾರವಾಗುವದೂ, ವಿರೋಧವೂ ಬಾರದಿರುವದು.

ಅಂದರೆ ವಿಘ್ನಗಳ ಪರಿಹಾರವಾಗುವದರಿಂದ ಬಿಂಬೋಪಾಸನೆಗೆ ವಿರೋಧ ಬರುವದಿಲ್ಲ; ಮತ್ತಷ್ಟು ಅನುಕೂಲವಾಗುವದು, ಆದುದರಿಂದ ಬಿಂಬರೂಪವಾಗ ದಿದ್ದರೂ ನರಸಿಂಹಾದಿ ರೂಪಗಳ ಉಪಾಸನೆಯನ್ನು ಮಾಡಬಹುದು" ಎಂದು ತಾತ್ಪರ್ಯ.

* ಬಿಂಬೋಪಾಸನೆಯನ್ನು ಬಿಟ್ಟು, ನರಸಿಂಹಾದಿ ರೂಪಗಳನ್ನು ಉಪಾಸನೆ ಮಾಡುತ್ತ ಕುಳಿತರೆ ವಿಘ್ನಬರುತ್ತದೆ, ಅದರಿಂದ ಮೋಕ್ಷಸಾಧನಕ್ಕೂ ತಡೆಯಾಗುತ್ತದೆ; ಆದುದರಿಂದ ಬಿಂಬರೂಪದ ಹೊರತಾಗಿ ಮಿಕ್ಕ ಭಗವದ್ರೂಪಗಳನ್ನು ಉಪಾಸಿಸತಕ್ಕದ್ದಲ್ಲ." ಎಂದು ಪೂರ್ವಪಕ್ಷಯುಕ್ತಿ. ನರಸಿಂಹಾದಿ ರೂಪಗಳ ಉಪಾಸನೆಯಿಂದ ಎಲ್ಲ ವಿಘ್ನಗಳು ದೂರವಾಗುತ್ತವೆ. ಮತ್ತು ಬಿಂಬೋಪಾಸನೆಯು ನಿರ್ವಿಘ್ನವಾಗಿ ನಡೆಯುತ್ತದೆ; ಆದುದರಿಂದ ಬಿಂಬರೂಪವಾಗದಿದ್ದರೂ ದುರಿತ ಪರಿಹಾರ ಮುಂತಾದ ಪ್ರಯೋಜನೆಗಾಗಿ ನೃಸಿಂಹಾದಿ ಮಿಕ್ಕ ಭಗವದ್ರೂಪಗಳನ್ನೂ ಉಪಾಸಿಸ ಬೇಕು." ಎಂದು ಸಿದ್ಧಾಂತಯುಕ್ತಿ.



ತದ್ಯುಗೇ ‖ ಅವತೀರ್ಣಹರೇರ್ಮೂರ್ತ್ಯಾ ತತ್ಪೂರ್ವಯುಗಜೇನ ಚ‖ ನೃಸಿಂಹ ಮೂರ್ತ್ಯಾಚ ತಥಾ ಯಾಂ ಚಾನ್ಯಾಂ ಪ್ರದಿಶೇದ್ಗುರುಃ" ಇತಿ ಏಕಾದಶ ಭಾಗ ವತ ಪಂಚಮಾಧ್ಯಾಯ ತಾತ್ಪರ್ಯಗಂ ಸ್ವಾಭ್ಯಾವ್ಯವಚನಂ ಚ ಹೃದಿ ಸಮೂಹ್ಯ, ಅತಿವಿದಗ್ಧಾಃ ದಾಸಾಗ್ರ್ಯಾಃ ದೀನ ಪ್ರಜಾನುಜಿಘೃಕ್ಷಯಾ ಶ್ರೀ ಮದ್ಧರಿ ಕಥಾಮೃತಸಾರಾಹ್ವಂ ಊನಪಂಚದಶಪದ್ಯಸಹಸ್ರಪದಾತ್ಮಕಂ,(೯೮೫)ಬೃಹತೀ ಸಹಸ್ರಾರ್ಣಸೂಚಿತಗುಹ್ಯಾರ್ಥಕಂ ಹಸ್ರೈರಪಿ ಆದರೇಣ ಅಹರಹಃ ಪಠ್ಯ ಮಾನ ವಿಷ್ಣುಸಹಸ್ರನಾಮಕಗಕತಿಪಯನಾಮ ಸಂಯುಕ್ತಂ ಉಕ್ತ ಪ್ರಣಾಡ್ಯಾ ಅಲವಧೀತೀರ್ಥರಾಜವಾರಿರುಹಾಮೃತಸಾರಂ ಪ್ರಬಂಧಂ ಕುರ್ವಂತಃ ಸಂತಃ ಅಹಂತೋಜ್ಝಿತಾಃ ಪ್ರಾಗ್ಭವೀಯ ತ್ರಿವಿಕ್ರಮ ಚಾರು ಚರಣ ಪರಿಸರಣ ಧುರೀಣ ಗುರುರಾಜ ಪೂಜ್ಯಪಾದ ದಯಯೈಧಿತಾಃ ಮಾನ ವೀಶಾಃ (ಶ್ರೀ ಜಗನ್ನಾಥ ದಾಸಾಃ) ಸಂಪ್ರತಿ ನಿಷ್ಪ್ರತ್ಯೂಹ ಸಮಾಪ್ತಿ ಪ್ರಚಯಾ ಕಾಂಕ್ಷಿಣಃ ಶಿಷ್ಟಾಚಾರ ಪರಂಪರಾಪ್ರಾಪ್ತಂ (ಅನುಮಿತಂ,) ಜಂಭನಂದಿನೀ ತನೂಜಾಹ್ಲಾದಕೃನ್ನರಹರಿಸ್ತುತಿರೂಪಂ ಮಂಗಲಂ ವಿಧಾಯ, ವಿನೇಯಶಿಕ್ಷಾಯೈ ತಾವನ್ನಿ[illegible]ಂತಿ, ಚ ಆದೌ ತದುಪೋದ್ಘಾತತಯಾ ಸ್ವಗುರೂನ್ ಸ್ಮರಂತಿ— "ಹರೀತಿ" ‖

ಆಪನಿತು=ತಿಳಿದು. ಪರಮತ್ವಂ ಚ ವಿಷಯಾವ್ಯಾಪೃತಚಿತ್ತತ್ವಂ। ತಾನ್ ಪ್ರತ್ಯೇವಾಭಿ(ವಾ)ವದನಮುಚಿತಂ ‖ ಆದರೇತಿ‖ ಆದರೋ ಭಜನಂ ಭಕ್ತಿರಿತ್ಯಭಿಧಾನಮ್। ಸ್ವೋಪಾಸ್ಯಂ ಹಯಾಸ್ಯಂ ವಂದತೇ"ಶ್ರೀತಿ"‖ ೧ ಕ್ಲೇಶೋಧಿಕತರಸ್ತೇಷಾಂ,ಯೇತುವಿಷ್ಣುಮವಜ್ಞಾಯ ಶ್ರಿಯಮೇವ ಹ್ಯುಪಾಸತೇಇತಿಚೋಕ್ತೇಃ ಸಕಲವಾಕ್‌ಚೇತೋಽಧಿ ದೇವತಾತ್ವೇನಾವಶ್ಯಕತ್ವಾಚ್ಚ ಉಪಸರ್ಜನತಯಾ ವಂದನಮ್‖ ಯದ್ವಾ "ಕಾಮತೋ ೨ ವಿಧಿರುದ್ರಾದೀತ್ಯುಕ್ತೇಃ ಅನೇನ ಪ್ರಕಾ

೧ ಯಾರು ವಿಷ್ಣುವಿನನ್ನು ತಿರಸ್ಕರಿಸಿ, ಅವ್ಯಕ್ತ ತತ್ವಾಭಿಮಾನಿಯಾದ ಶ್ರೀರಮಾ ದೇವಿಯವರನ್ನೇ ಉಪಾಸಿಸುತ್ತಾರೋ ಅವರಿಗೆ ಅತ್ಯಂತ ಅಧಿಕವಾದಕ್ಲೇಶವಾಗುತ್ತದೆ.

೨ "ಕಾಮತೋ ವಿಧಿರುದ್ರಾದಿ ಪದದಾತ್ರ್ಯಾಃ ಸ್ವಯಂ ಶ್ರಿಯಃ ‖ ಎಂಬ ಅನುವ್ಯಾಖ್ಯಾನದಲ್ಲಿ ಅಂಭೃಣೀಸೂಕ್ತಾರ್ಥಕವನ್ನು ವಿವರಿಸುತ್ತ, ಬ್ರಹ್ಮ-ರುದ್ರ-ಇಂದ್ರ ಇತ್ಯಾದಿ ಪದವಿಗಳನ್ನು ಸ್ವತಃ ಇಂದಿರಾದೇವಿಯೊಬ್ಬಳೇ ಕೊಡುತ್ತಾಳೆ, ಎಂದು ಹೇಳಿರುತ್ತಾರೆ. ಆದುದರಿಂದಲೂ ಶ್ರೀ ದೇವಿಯವರಿಗೆ ವಿಶಿಷ್ಟತೆ ಇರುವುದಾಗಿ ತಿಳಿಯಬೇಕು.

ರೇಣ ವಿಶಿಷ್ಟತಾ। "ವೇದಾಹಂ" "ಇಯದ್" ಇತಿ ಚ ತ್ರಯಿೂಸೂತ್ರಾಭ್ಯಾಂ ಜೀವೇಶತಯಾವಧೃತಪದ್ಮಜೇನ ನುತತ್ವಸ್ಯ "ತದನು ಪದ್ಮ ಭವೋಽಮುಮ ಸ್ತೌತ್ ॥ " ತೇನಸ್ತುತಃ ಸಭಗವಾನ್ । ತದಾಸತ್ವಮಾಪುಃ " ಇತಿ ವಚನೇನ(ನ್ಯೈಃ)ಬ್ರಹ್ಮೇತ್ಯಪಿಚವಿಶಿಷ್ಟತಾಮಾಚಷ್ಟೇ॥ಉತ್ತರತ್ರಬಹುಶಃಸುರತರ ತಮಭಾವಸೂಚನಾದಧಿಕೃತತಾ ಚ ॥

ನೀರಜ ಭವಾಂಡಂ=ಬ್ರಹ್ಮಾಂಡಂ।ವಿಶೇಷಣದ್ವಯೇನಾಸ್ಮಾದಾದಿ ವರ್ಗಸ್ಯೈವಂ ಸಾಧನಸಂಪಾದಕತ್ವೇನ ಸತ್ತಾದಾತಾ, ಸುಖದಾತೇತಿ ಸೂಚನಾಚ್ಚೇಷ್ಟತ್ವಂ ಚೋಕ್ತಂ ॥ ಸೋಢ್ವಾಽತ್ಮೀಯಾಂಹಃ ಪದಾ ಪೇಷತಿ ಸ್ವಯಮ ವಿನಾಶೀತ್ಯಾಹ ॥

ನಾರಸಿಂಹೇತಿ ॥ ನಮಿಪೆ = ನಮಸ್ಕರಿಸುವೆ. ಕರುಣಿಪುದು= ದಯ ಮಾಡೋದು. ಯಮಗೆ=ನಮಗೆ, ಮಂಗಳವಾ=ಮಂಗಳವನ್ನು,ವಿಸ್ತೃತಿಭಿಯಾ ಪೂರ್ವಪದಾದಿವೃತ್ತಿ ರ್ವ್ಯಾಕರಣರೀತ್ಯಾ ನ ಕ್ರಿಯತೇ ॥ ೧ ॥

### ಕನ್ನಡಾರ್ಥ

ಸರ್ವದಾ ಮಧ್ವಶಾಸ್ತ್ರಾಭ್ಯಾಸ ನಿರತರೂ,ಹರಿಯ ಸೇವಕರೂ, ಮೂರು ತಾಪಗಳಿಂದ ಬಳಲುವ ಸಜ್ಜನರನ್ನು ರಮಾಪತಿ (ಹರಿ) ಯ ಕಥಾಮೃತದಿಂದ (ಸ್ನಾನಮಾಡಿಸುವವರೂ) ಸಿಂಪಡಿಸುವವರೂ, ಪ್ರಾಜ್ಞೋಪಾಸನೆ ( ಬಿಂಬ ) ಯಲ್ಲಿ ನಿಷ್ಣಾತರೂ, ಮಹಾಜ್ಞಾನಿಗಳೂ, ನಿರ್ಮಲ ಸ್ವಭಾವದವರೂ ಹಿಂದಿನ ಜನ್ಮದಲ್ಲಿ ತ್ರಿವಿಕ್ರಮ ಮೂರುತಿಯ ಮನೋಹರ ಪಾದಾರಾಧನೆಯಲ್ಲಿ ಧುರೀಣರೂ, ವಾದಿರಾಜ ಗುರುರಾಜರ ದಯೆಯಿಂದ ಪೋಷಿತರೂ ಆದ ಶ್ರೀಮಾನವೀ ಜಗನ್ನಾಥದಾಸಾರ್ಯರು, (ದಾಸಶ್ರೇಷ್ಠರೂ) ದೀನ ಜನರನ್ನು ಉದ್ಧರಿಸುವ ಇಚ್ಛೆಯಿಂದ, ಆನಂದ ತೀರ್ಥರ ಶಾಸ್ತ್ರದ ಪರಮಸಾರ ರೂಪವಾದ,ಬೃಹತೀ ಸಹಸ್ರ ಮಂತ್ರಗಳಲ್ಲಿ ಅಡಗಿದ ರಹಸ್ಯಾರ್ಥಗಳಿಂದ(ಕೂಡಿರುವ)ಲೂ,ಎಲ್ಲರಿಂದ ಪ್ರತಿದಿವಸದಲ್ಲಿ ಪಠಿಸಲ್ಪಡುವ ಹಲವಾರು ವಿಷ್ಣುಸಹಸ್ರ ನಾಮ ( ಗಳಲ್ಲಿಯ ಕೆಲವು ನಾಮಗಳಿಂದ ) ಗಳಿಂದಲೂ ಕೂಡಿರುವ, ೯೮೫ ಪದ್ಯಗಳುಳ್ಳ, ಶ್ರೀ ಹರಿಕಥಾಮೃತಸಾರವೆಂಬ ಪ್ರಬಂಧವನ್ನು ವಿರಚಿಸುವವರಾಗಿ, " ಕಲಿದುಃಸಹ ವಾಸದಿಂದ ಬರುವ ವಿಘ್ನಗಳನ್ನು ಕಳೆದುಕೊಳ್ಳಲು ಉಳಿದವುಗಳನ್ನು ಬಿಟ್ಟು ನೃಸಿಂಹನ ಉಪಾಸನೆಯನ್ನು ಮಾಡುತ್ತಾರೆ. " ಎಂಬ ಅರ್ಥದ " ಗುರ್ವರ್ಥ ದೀಪಿಕೆಯನ್ನೂ , "ಅವಿಘ್ನತ್ವಾವಿರೋಧೌಚ " ಎಂಬ( ಅ.೩ಪಾ.೩ಶ್ಲೋ.೬೫)



ಅನು ವ್ಯಾಖ್ಯಾನವನ್ನೂ, " ನಚ " ಎಂದು ಮೂಲದಲ್ಲಿ ಹೇಳಿರುವ ನ್ಯಾಯವಿವರಣ ಭಾಷ್ಯಗಳ ಪೂರ್ವೋತ್ತರಪಕ್ಷಯುಕ್ತಿಗಳನ್ನೂ,ಭಾಗವತದ ಸ್ಕ. ೧೧. ಅ. ೫. "ವಿಘ್ನಹಾನಿಸ್ತು" ಎಂದು ಮುಂತಾಗಿರುವ ವಚನಗಳನ್ನೂ, ಹೃದಯದಲ್ಲಿಟ್ಟುಕೊಂಡು, ಅದರ ಅನುಸಾರವಾಗಿ, ಪ್ರಕೃತಕ್ಕೆ ನಿರ್ವಿಘ್ನ ಪರಿಸಮಾಪ್ತಿ ಹಾಗೂ ಪಾಠ ಪ್ರವಚನಾಭಿವೃದ್ಧಿಗಳನ್ನು ಅಪೇಕ್ಷಿಸುತ್ತ, ಶಿಷ್ಟಾಚಾರ ಪರಂಪರೆಯಲ್ಲಿ ಅನುಷ್ಠಿತವಾಗಿರುವ ಪ್ರಹ್ಲಾದಾಹ್ಲಾದಕ ನೃಸಿಂಹ ಸ್ತುತಿರೂಪವಾದ ಮಂಗಲವನ್ನು ಮಾಡಿ, ಶಿಷ್ಯರಿಗೆ ಬೋಧಿಸುವದಕ್ಕೆ ಗ್ರಂಥಾದಿಭಾಗದಲ್ಲಿ ಅದನ್ನು ನಿಬಂಧಿಸುತ್ತಾರೆ. (ಸೇರಿಸುತ್ತಾರೆ)ಅದರಲ್ಲೂ ಮೊದಲು ಉಪೋದ್ಘಾತ ರೂಪವಾಗಿ ತಮ್ಮ ಗುರುಗಳನ್ನು "ಹರಿ" ಎಂಬ ಪಲ್ಲವಿಯಿಂದ ಸ್ಮರಿಸುತ್ತಾರೆ.

**ಆಪನಿತು**= ತಿಳಿದು. ಪರಮ=ಅನ್ಯ ವಿಷಯಗಳಲ್ಲಿ ಹೋಗದ ಚಿತ್ತದಿಂದ ಕೂಡಿದ. ಇಂಥ ಭಗವದ್ಭಕ್ತರನ್ನು ಕುರಿತು ಪ್ರಾರ್ಥಿಸುವದು ಉಚಿತವು. ಆದರ=ಭಕ್ತಿ.

ತಮ್ಮ ಉಪಾಸ್ಯ ಮೂರುತಿ ನರಸಿಂಹನನ್ನು ವಂದಿಸುತ್ತಾರೆ:- "ಶ್ರೀರಮಣಿ" ಎಂಬ ಪದ್ಯದಿಂದ. "ಕ್ಲೇಶೋಧಿಕ" ಇತ್ಯಾದಿ ಪ್ರಮಾಣವಚನದಂತೆ ಮುಖ್ಯವಾಗಿ ಅವಳನ್ನೇ ವಂದಿಸದೆ, ಸಕಲ ವಾಙ್ಮನೋ ನಿಯಾಮಕಳಾದುದರಿಂದ ಅತ್ಯಾವಶ್ಯಕವಾದ ನಮಸ್ಕಾರವು ರಮಾದೇವಿಯವರಿಗೆ ಭಗವಂತನ ಪತ್ನಿಯೆಂದು ವಿಶೇಷಣಭಾವದಿಂದ (ಪರಂಪರೆಯಿಂದ)ಮಾಡಲ್ಪಟ್ಟಿದೆ. ಅಥವಾ"ಕಾಮತೋ"ಎಂಬ ಅನುವ್ಯಾಖ್ಯಾನಾನುಸಾರವಾಗಿ ವಿಶಿಷ್ಟತೆಯೂ ಇರುವದು."ವೇದಾಹಂ-"ಇಯತ್"ಎಂಬವೇದ ಸೂತ್ರಗಳಿಂದಲೂ,"ತದನು" ಎಂಬ ವಚನಗಳಿಂದ "ಜೀವೇಶನೆಂದು ನಿಶ್ಚಿತನಾದ ಚತುರ್ಮುಖನಿಂದ ಸ್ತುತನು" ಎಂದು ಸಿದ್ಧವಾಗಿರುವದರಿಂದಲೂ, ಬ್ರಹ್ಮ ಎನ್ನುವುದರಿಂದಲೂ, ವಿಶಿಷ್ಟತೆಯು ಹೇಳಲ್ಪಡುತ್ತದೆ. ಮುಂದೆ ದೇವತರತಮಭಾವವು (ತಾರತಮ್ಯವು) ಸೂಚಿತವಾಗಿರುವದರಿಂದಲೂ,ಅಧಿಕೃತತ್ವವು, ವ್ಯಕ್ತವಾಗುತ್ತದೆ ನೀರಜಭವಾಂಡ=ಬ್ರಹ್ಮಾಂಡ."ಉದಯಸ್ಥಿತಿ ಕಾರಣ"ವೆಂಬ ಎರಡುವಿಶೇಷಣಗಳಿಂದ,ನಮ್ಮೆಲ್ಲಸಾಧಕರಿಗೆ ಹೀಗೆ ಸಾಧನಗಳನ್ನು ಒದಗಿಸಿಕೊಡುವದರಿಂದ, "ಸತ್ತಾಪ್ರದ ಸುಖಪ್ರದ " ಎಂದು ಸೂಚಿತವಾಗುಗುತ್ತದೆ. ಇದರಿಂದ " ಇಷ್ಟತ್ವ"ವೂ ಹೇಳಲ್ಪಟ್ಟಿತು. ಸ್ವತಃ ನಾಶವಿಲ್ಲದವನಾದುದರಿಂದ ತನ್ನವರದೋಷಗಳನ್ನು ಕಳೆದು, ಗತಿಕೊಡು

ವವನು; ಎಂದು ಹೇಳುತ್ತಾರೆ "ನಾರಸಿಂಹ" ಎಂದು. ನಮಿಪೆ=ನಮಸ್ಕರಿಸುವೆ. ಕರುಣಿಪುದು=ದಯಾ ಮಾಡುವದು. ಎಮಗೆ=ನಮಗೆ, ಮಂಗಳವ=ಮಂಗಲ ವನ್ನು.ವಿಸ್ತಾರವಾಗುವದರಿಂದ ಪೂರ್ವದ ಪದಗಳ ವೃತ್ತಿ–ವಿಗ್ರಹ ಮುಂತಾದವು ಗಳನ್ನು ವ್ಯಾಕರಣ ರೀತಿಯಿಂದ ತೋರಿಸುವದಿಲ್ಲ ||೧||

### ವ್ಯಾಸದಾಸ ಸಿದ್ಧಾಂತ ಕೌಮುದೀ

‡ " ಮ ಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ ಯಃ ಪ್ರಾಣೀತಿ ಯ ಈಂ ಶೃಣೋತ್ಯುಕ್ತಂ ಇತಿ ಅಂಭೃಣ್ಯಾ ಅಖಿಲಕೃತೇಃಆತ್ಮನಿಘ್ನತೋಕ್ತೇಃ ಪರ ಮಾದರೇಣೇಶಜಾಯಾಮಾತ್ಮರಕ್ಷಣ ಮರ್ಥಯಂತಿಃ– "ಜಗದಿತಿ" ||

ಜಗದುದರಃ = "ಬ್ರಹ್ಮಾಂಡೋದರಃ || " ರೂಪಗಳನ್ನು || ಸಕಲ ವೇದಗಳ ಹಾದಿಗಳ ನಾಲೋಚನದೀತಿ ವೈಕುಂಠ ವರ್ಣನೋಕ್ತೇಃ|| ಆಲೋ ಚನದಿ ಇತಿ ತೃತೀಯಾ | ತತಿಃ ಸಮೂಹಃ|"ಅತಿಕ್ರಮಿಸಿ"ತದನುಕ್ತಾನಿತ್ಯರ್ಥಃ| ಕ್ರಿಯಾವಿಶೇಷಾಃತ್ರಿವಿಕ್ರಮತ್ವಾ ದಯಃ " ಬ್ರ ಹ್ಮ ಣ ಸ್ತ್ವಂ ಶ ರೂ ಪೇ ಷು ಭಾರತ್ಯಾಃ ಜ್ಞಾನ ವರ್ಜನಂ | ಇತಿ ತಾತ್ಪರ್ಯೋಕ್ತೇಃ ಈಶ್ವರೇಚ್ಛ ಯೈವೇತದ್ಘಟನೀಯಂ ನ ದುಷ್ಕೃತೇರಿತಿ ಛಲಾರ್ಯುಕ್ತೇಃ||ನೂತನಂ ತತ್ರತತ್ರ ವಾಜಿ ವಕ್ತ್ರ ಮಹಿದಾಸ ಮುಖ ಮುಖೋಪದೇಶಾಭಿವ್ಯಕ್ತಸ್ಫುರಣಂ ಶ್ರಿಯಃ 'ಶ್ರಿಯೋಪಿಚೇತ್ಯತ್ರ' * ಚ ಟೀಕಾಯಾಂ ಉರೀಕೃತಮತೋ ನೂತನೇ

---

‡ ಯಃ ಯಾವನು ಅನ್ನಂ=ಆಹಾರವನ್ನು ಅತ್ತಿ=ತಿನ್ನುತ್ತಾನೋ, ಸಃ=ಅವನು ಮಯಾ ಈಂ =ನನ್ನಿಂದಲೇ (ನನ್ನ ಅಧೀನವಾಗಿಯೇ) ತಿನ್ನುತ್ತಾನೆ. ಯ ಃ ವಿಪಶ್ಯತಿ= ಯಾವನುನೋಡುತ್ತಾನೆಯೋ, ಅವನೂ ನನ್ನಿಂದಲೇ ನೋಡುತ್ತಾನೆ. ಯಃಪ್ರಾಣಿತಿ= ಯಾವನು ಶ್ವಾಸೋಚ್ಛ್ವಾಸ ಮುಂತಾದ ಚೇಷ್ಟೆಗಳನ್ನು ಮಾಡುತ್ತಾನೊ ಅವನೂ ನನ್ನಿಂದಲೇ ಮಾಡುತ್ತಾನೆ. ಯಃ ಉಕ್ತಂ ಶೃಣೋತಿ=ಯಾವನು ಹೆರವರು ಹೇಳಿದ್ದನ್ನು ಕೇಳುತ್ತಾನೋ, ಅವನೂ, ನನ್ನಿಂದಲೇ ಕೇಳುತ್ತಾನೆ. ಎಂದು ಅಂಭ್ರಣೀ ಸೂಕ್ತ ಋಕ್ಕಿನ ಅರ್ಥ.

* ಯಸ್ಮಾದ್ ಬ್ರಹ್ಮೇಂದ್ರ ರುದ್ರಾಃನಾಂ ದೇವತಾನಾಂ"ಶ್ರೀಯೋಪಿಚ" ಜ್ಞಾನ ಸ್ಫೂರ್ತಿಃ ನಮಸ್ತಸ್ಮೈ ಹರಯೇ ಗುರುವೇ ನಮಃ| ಈ ಶ್ಲೋಕದಲ್ಲಿ ಶ್ರೀ ಮದಾ ಚಾರ್ಯರು ಬ್ರಹ್ಮರುದ್ರ ಇಂದ್ರಾದಿ ದೇವತೆಗಳಿಗೆ " ಲಕ್ಷ್ಮೀದೇವಿಯವರಿಗೂ " ಸಹ ಜ್ಞಾನಸ್ಫೂರ್ತಿಯು ಯಾರಿಂದ ಆಗುವದೋ ಅಂಥ ಗುರುವೆನಿಸಿದ ಹರಿಗೆ ನಮಸ್ಕಾರ ವಿರಲಿ " ಎಂದು ಅಪ್ಪಣೆ ಕೊಡಿಸಿದ್ದಾರೆ. "ಶ್ರೀಯೋಪಿಚ" ಎಂಬ ಪದಕ್ಕೆ ವ್ಯಾಖ್ಯಾ ನಿಸುವಾಗ ಟೀಕಾಕಾರರು " ಅನೇಕಾವತಾರ ರೂಪಗಳಿಂದಾಗುವ ಉಪದೇಶದಿಂದ ಸ್ಫೂರ್ತಿಯು ಅಭಿವ್ಯಕ್ತವಾಗುವದು ಎಂದು ತಿಳಿಸಿರುತ್ತಾರೆ ಎಂದು ಭಾವ.



ತ್ಯುಕ್ತಂ || ಬಗೆ ಬಗೆಯ || ನವೀನ ನವೀನ | ಮಿಗೆ ಮತ್ತದಿಂ ತೃತೀಯಾ || ಪೊಗಳಿ=ಹೊಗಳಿ, ಹಿಗ್ಗುವಾ= ಹರ್ಷಪಡುವಾ " ಪುನರಾಶ್ಚರ್ಯ ಯುಕ್ತಾ ಸಾ ಪುನರಾಶ್ಚರ್ಯ ದರ್ಶನಾತ್ || ಪಶ್ಯಂತೀ ಸಂತತಂ ಸಾ ನವನವಸುವಿ ಶೇಷೋಪಲಂಭನೇತಿ " ಬ್ರಹ್ಮಾದೀನಾಮಾಗಂತುಕಲಾಭಃ | "ರಮಾಯಾಃ ಜ್ಞಾತ (ನ) ಗುಣಕ್ರಿಯಾವಿಶೇಷಪ್ರಭಾ ಉಪದೇಶಾಯತ್ತೇತಿ " ತತ್ವರತ್ನ ಮಾಲಾವಿಷ್ಣುಸ್ತುತ್ಯುಕ್ತೇಃ|"ಲಕ್ಷ್ಮೀಸಾ ಜಡಮಾಯಾಯಾಃದೇವತೇತಿ"ಗೀತಾ ತಾತ್ಪರ್ಯಂ ಹೃದ್ಯಾಧಾಯ ಅವಾದಿ ತ್ರಿಗುಣೇತಿ || ಅನುದಿನವು=ಪ್ರತಿದಿನಂ ಸಂತೈಸಲಿ=ರಕ್ಷಿಸಲಿ || ೨ ||

### ಕನ್ನಡಾರ್ಥ

" ಮಯಾಸೋ ಅನ್ನಮತ್ತಿ " ಎಂಬ ಅಂಭೃಣೀ ಸೂಕ್ತದಲ್ಲಿ "ಎಲ್ಲರೂ ಮಾಡುವ ವ್ಯಾಪಾರಗಳು (ತನ್ನ) ರಮಾಧೀನ"ವೆಂದು ಹೇಳಿದ ಪರಮಾತ್ಮನ ಪತ್ನಿಯಾದ ರಮಾದೇವಿಯನ್ನುಪರಮಾದರದಿಂದ ಪ್ರಾರ್ಥಿಸಿ, ತಮ್ಮ ಸಂರಕ್ಷಣ ವನ್ನು ಬೇಡಿಕೊಳ್ಳುತ್ತಾರೆ ದಾಸವರ್ಯರು.

ಜಗದುದರ=ವೈಕುಂಠ ವರ್ಣನದಲ್ಲಿ ಹೇಳಿದಂತೆ ಬ್ರಹ್ಮಾಂಡೋದರ ನೆಂದರ್ಥ. "ಆಲೋಚನದಿ" ಎಂಬುದು ತೃತೀಯಾ ವಿಭಕ್ತಿಯಲ್ಲಿ ಇರು ವದು. "ಆಲೋಚನೆಯಿಂದ" ಎಂದು ಅರ್ಥ ಮಾಡಬೇಕು. ತತಿ=ಸಮೂಹ ಅತಿಕ್ರಮಿಸಿ, ಎಂಬಲ್ಲಿ ವೇದಗಳನ್ನು ಮೀರಿಸಿ-ವೇದಗಳಲ್ಲಿ ಹೇಳಲ್ಪಡದಂಥ(ವು) ಗುಣಗಳನ್ನು" ಎಂದು ಭಾವವು. ಕ್ರಿಯಾವಿಶೇಷಗಳ=ಪರಮಾತ್ಮನು ಮಾಡಿ ತೋರಿಸಿದ ತ್ರಿವಿಕ್ರಮಾವತಾರ ಮುಂತಾದವುಗಳು; ಇವುಗಳಲ್ಲಿಯೂ,ನೂತನ= ಹೊಸದನ್ನು–ಎಂದರೆ ಹಯಗ್ರೀವ ಮಹಿದಾಸ ಮುಂತಾದ ರೂಪಗಳ ಉಪ ದೇಶಗಳಿಂದ ನೂತನವಾದ ಜ್ಞಾನಸ್ಫೂರ್ತಿಯನ್ನು" ಎಂದು ಅಭಿಪ್ರಾಯ.

ಬಗೆಬಗೆಯ=ನವೀನ-ನವೀನ.

ಮಿಗೆ ಮತ್ತದಿಂ-ಇದು ತೃತೀಯಾ ವಿಭಕ್ತಿ.

ಪೊಗಳಿ=ಹೊಗಳಿ, ಹಿಗ್ಗುವ=ಹರುಷಪಡುತ್ತಿರುವ.

"ಪುನರಾಶ್ಚರ್ಯಯುಕ್ತಾಸಾ" ಎಂಬ ಪ್ರಮಾಣ ವಚನಗಳಿಗೆ ಅನುಸಾರ ವಾಗಿ ಬ್ರಹ್ಮಾದಿಗಳಿಗೆ ಆಗಂತುಕದ( ಹೊಸದಾಗಿ ಬರುವದರ)ಲಾಭವಾಗುತ್ತದೆ.

ಶ್ರೀ ರಮಾದೇವಿಯರಿಗೆ ಜ್ಞಾತ (ಪೂರ್ವದಲ್ಲಿ ತಿಳಿಯಲ್ಪಟ್ಟ) ಗುಣ ಕ್ರಿಯಾ ವಿಶೇಷಗಳ ಬಗ್ಗೆ ವಿಶೇಷ ಸ್ಫೂರ್ತಿಯು ಭಗವಂತನ ಹಿಂದೆ ಹೇಳಿದಂತಹ ಉಪದೇಶದಿಂದ ಅಭಿವ್ಯಕ್ತವಾಗುವದು." ಎಂದು ಸತ್ತತ್ವ ರತ್ನ ಮಾಲೆಯಲ್ಲಿ ವಿಷ್ಣು ಸ್ತುತಿ ಪ್ರಕರಣದಲ್ಲಿ ಉಕ್ತವಾಗಿದೆ. "ಲಕ್ಷ್ಮೀದೇವಿಯು ಜಡಪ್ರಕೃತಿಯ ದೇವತೆ" ಎಂಬ ಗೀತಾ ತಾತ್ಪರ್ಯ ವಚನವನ್ನು ಹೃದಯದಲ್ಲಿಟ್ಟುಕೊಂಡು "ತ್ರಿಗುಣ" ಎಂಬುದಾಗಿ ಹೇಳಿದ್ದಾರೆ. ಅನುದಿನವು= ಪ್ರತಿದಿನದಲ್ಲಿ, ಸಂತೈಸಲಿ= ಸಂರಕ್ಷಿಸಲಿ. ॥ ೨ ॥

## ವ್ಯಾಸದಾಸ ಸಿದ್ಧಾಂತ ಕೌಮುದೀ

ಗುರುಃ ಬ್ರಹ್ಮೇತಿ ಶ್ರುತಿ ಗೀತಾತಾತ್ಪರ್ಯರೀತ್ಯಾ ಅಜಃಧಿಯಮಾಶಾಸ್ತೇ ಮಹಾನುಭಾವಃ ।

ನಿರುಪಮೇತಿ = ಅಸದೃಶಾನಂದರೂಪಃ, ತದ್ಭವ=ತತ್ಸುತ! ನಿರ್ಜರ=ದೇವ । ಋಜ್ವತಿ । ಬ್ರಹ್ಮತ್ವ ಯೋಗ್ಯಾನಾಂ ಋಜುತ್ವಸ್ಯ"ಬ್ರಹ್ಮತ್ವಯೋಗ್ಯಾಃ" ಇತ್ಯತ್ರೋಕ್ತೇಃ ಋಜುಪುಂಗವತ್ವಂ ಬ್ರಹ್ಮಣಃ ಸ್ಪಷ್ಟಂ । ಸತ್ವೇತಿ=ಬಲಜ್ಞಾನ ಮೇಲನವಾನ್ । ಯದ್ವಾ ವಾಣ್ಯಾಃ ಅಪಿ ವರಸತ್ವ ಮೂರ್ತಿಃ । "ಸತ್ವ ಸತ್ವ ಮಹಾಸತ್ವ ಸೂಕ್ಷ್ಮಸತ್ವಶ್ಚತುರ್ಮುಖಃ ಇತಿ " ಗೀತಾತಾತ್ಪರ್ಯೇ । ಸತ್ವ ಶಬ್ದೇನ ಸಾತ್ವಿಕಾಃ ಗ್ರಾಹ್ಯಾಃ। ತತಸ್ತಾತ್ವಿಕೇಭ್ಯೋಽಪಿಸತ್ವಾಃಗರುತ್ಮದಾದಯಃ। ಮಹಾಸತ್ವಾ ಬ್ರಹ್ಮಭಾರ್ಯಾ। ಸೂಕ್ಷ್ಮಸತ್ವೋಽಜಃ ತದೇವಮೂಲೇಭಿಪ್ರೈತಿ॥ ಪೂರ್ಣಸೂಕ್ಷ್ಮಸತ್ವದೇಹ ಇತಿ ಯಾವತ್॥ ಸಾತ್ವಿಕಾಃ ಸಾತ್ವಿಕಾಃ ಸರ್ವೇ ತಾತ್ವಿಕಾಃ ಪರಿಕೀರ್ತಿತಾಃ॥ ತತ್ರಾಪಿ ಸಾತ್ವಿಕಾಃ ಶೇಷಗರುತ್ಮದ್ರುದ್ರ ತತ್ಸ್ತ್ರಿಯಃ॥ ತತೋಽಪಿ ದೇವೀ ಬ್ರಹ್ಮಾಣೀ ಬ್ರಹ್ಮಾಚೈವ ತತಃ ಸ್ವಯಮಿತಿ"ದ್ವಿತೀಯ ತಾತ್ಪರ್ಯೇ'। (ಅಧ್ಯಾಯ ೧೦) ತತ್ರಾಪಿ ಸಾತ್ವಿಕಾಃ ಪ್ರೋಕ್ತಾಃ ತಾತ್ವಿಕಾಃ ಯಾಸ್ತು ದೇವತಾಃ ॥ ತತ್ರಾಪಿ ಸಾತ್ವಿಕೋ ರುದ್ರಃ ತತ್ರಾಪಿ ಚ ಚತುರ್ಮುಖಃ ಇತಿ ತೃತೀಯ ತಾತ್ಪರ್ಯೇ ॥ ಅ. ॥ ೧೧ । ೧೫-೧೬ ಶ್ಲೋ ೨ ॥

ಮುಖಸರೋಜಂ=ತತ್ಕಮಲಂ !। ತಸ್ಯ ಇನಃ=ಸೂರ್ಯ ಇವ ತೋಷಕಃ। ಗರುಡೇತಿ॥ ದಲಃಖಂಡಃ। ಚಂದ್ರ ಶೇಖರಮುಖಾನಾಂ ಅಜೋತ್ಪತ್ತೌ ಮಾನಂ ಚ ತತೋ ಮಹತ್ತತ್ವತನುರ್ವಿರಿಂಚಿಃ ಸ್ಥೂಲಾತ್ಮನೈವಾಜನಿ ವಾಕ್ ಚ ದೇವೀ ॥



ತಸ್ಯಾ ಮಹಂಕಾರತನುಂ ಸರುದ್ರಂ ಸಸರ್ಜೇತಿ ತಾತ್ಪರ್ಯನಿರ್ಣಯಗಂ ವಚಃ ||ಅ೦||೩-೧೬|| ಮತಿಯಾ=ಮತಿಂ । ಪಾಲಿಪುದು=ಕೊಡುವುದು ||೩||

## ಕನ್ನಡಾರ್ಥ

"ಬ್ರಹ್ಮದೇವರು ಗುರುವು" ಎಂದು ಶ್ರುತಿ ಗೀತಾತಾತ್ಪರ್ಯದಲ್ಲಿ ಹೇಳಿದಂತೆ ಚತುರ್ಮುಖ ಬ್ರಹ್ಮದೇವರನ್ನು ಜ್ಞಾನಕ್ಕೋಸುಗ ಮಹಾನುಭಾವರಾದ ಜಗನ್ನಾಥದಾಸರು ಪ್ರಾರ್ಥಿಸುತ್ತಾರೆ. "ನಿರುಪಮ" ಎಂಬುದಾಗಿ.

"ನಿರುಪಮಾನಂದಾತ್ಮಭವ=ಅಸದೃಶವಾದ ಆನಂದವುಳ್ಳ ಹಾಗೂ ಅಂಥ ಪರಮಾತ್ಮನ ತನಯನೇ ! ನಿರ್ಜರ=ದೇವ.

"ಬ್ರಹ್ಮಪದವಿಗೆ ಬರುವವರು ಋಜುಗಳು" ಎಂದು,' 'ಋಜವೋನಾಮ" ಎಂಬ ಪ್ರಮಾಣದಲ್ಲಿ ಹೇಳಿರುವದರಿಂದ, ಬ್ರಹ್ಮದೇವರು ಋಜ ಶ್ರೇಷ್ಠರೆಂಬುವದು ಸ್ಪಷ್ಟವೇ ಇರುತ್ತದೆ. ಸತ್ವ (ಪ್ರಪಂಚ) ಎಂದರೆ ಬಲ ಜ್ಞಾನಗಳ ಸಮ್ಮೇಲನವುಳ್ಳವನು; ಎಂದು ಅರ್ಥ. ಅಥವಾ ಸರಸ್ವತಿಯಿಂದಲೂ ಶ್ರೇಷ್ಠವಾದ ಸತ್ವ ಶರೀರವುಳ್ಳವನು ಎಂದು ಅರ್ಥ. ಸತ್ವಸತ್ವ-ಮಹಾಸತ್ವ-ಸೂಕ್ಷ್ಮಸತ್ವ ಇವುಗಳಲ್ಲಿ ಕೊನೆಯ ಸೂಕ್ಷ್ಮಸತ್ವನು ಚತುರ್ಮುಖನು" ಎಂದು ಗೀತಾ ತಾತ್ಪರ್ಯ ಹೇಳಿರುವದು ಪ್ರಮಾಣ. ಶ್ಲೋಕದಲ್ಲಿರುವ "ಸತ್ವ"ಶಬ್ದವು ಸಾತ್ವಿಕ ಸಾತ್ವಿಕರನ್ನು ಹೇಳುವದು. ಅಂಥ ಸತ್ವರು (ಸಾತ್ವಿಕಸಾತ್ವಿಕರು) ತಾತ್ವಿಕ ದೇವತೆಗಳು, ಅವರಿಗಿಂತಲೂ ಸತ್ವಸತ್ವರು = ಹೆಚ್ಚಿನ ಸತ್ವಗುಣವುಳ್ಳವರು ಗರುಡ ಮುಂತಾದವರು; ಬ್ರಹ್ಮಪತ್ನಿಯಾದ ಸರಸ್ವತಿಯು "ಮಹಾಸತ್ವ" ಸ್ವರೂಪಳು. (ಗರುಡಾದಿಗಳಿಗಿಂತಲೂ ಹೆಚ್ಚಿನ ಸತ್ವಗುಣಳ್ಳವಳು.) ಅವಳಿಗಿಂತಲೂ ಹೆಚ್ಚಿನ ಸತ್ವಗುಣವುಳ್ಳವರು ಸೂಕ್ಷ್ಮಸತ್ವರು, ಅವರೇ ಚತುರ್ಮುಖ ಬ್ರಹ್ಮದೇವರು. ಸತ್ವಪ್ರಚುರ=ಪೂರ್ಣಸೂಕ್ಷ್ಮಸತ್ವಮಯ ಶರೀರವುಳ್ಳವರು; ಎಂದು ಅರ್ಥ.' ತತ್ವಾಭಿಮಾನಿದೇವತೆಗಳು ಸಾತ್ವಿಕಸಾತ್ವಿಕರು, (ಸತ್ವರು) ಅದರಲ್ಲಿಯೂ ಗುರುಡ ಶೇಷ ರುದ್ರರು ಹೆಚ್ಚಿನ ಸಾತ್ವಿಕರು, ಅವರಿಗಿಂತಲೂ ಹೆಚ್ಚಿನ ಸತ್ವವುಳ್ಳವಳು ಸರಸ್ವತಿ,ಅವಳಿಗೂ ಹೆಚ್ಚಿನಸಾತ್ವಿಕರು ಬ್ರಹ್ಮದೇವರು" ಎಂದು ಭಾಗವತದಲ್ಲಿ (ಸ್ಕ ೨-೧೦-೪೨-೩-೧೧-೧೫.೧೬ ) ತಾತ್ಪರ್ಯದಲ್ಲಿ ಹೇಳಲಾಗಿರುತ್ತದೆ.

ಮುಖ ಸರೋಜಇನ=ಸರೋಜದಂತಿರುವ ಮುಖಕ್ಕೆ ಸೂರ್ಯನಂತಿರುವನು. ದಲ=ಖಂಡ. ಶಶಾಂಕದಲಶೇಖರ=ಚಂದ್ರಶೇಖರ. ಬ್ರಹ್ಮದೇವರು ''ಗರುಡ ಶೇಷ ರುದ್ರರಿಗೆ ಜನಕರು" ಎನ್ನುವ ವಿಷಯದಲ್ಲಿ "ಪರಮಾತ್ಮನಿಂದ ಮಹತ್ತತ್ವಶರೀರನಾದ ಬ್ರಹ್ಮನು;ಅವನಿಂದ ದೇವೀ ಸರಸ್ವತೀ, ಅವಳಲ್ಲಿ ಅಹಂಕಾರ ಶರೀರನಾದ ರುದ್ರನನ್ನು ಹುಟ್ಟಿಸಿದನು" ಎಂಬ ಅರ್ಥದ ತಾತ್ಪರ್ಯನಿರ್ಣಯದಲ್ಲಿರುವ "ತತೋ ಮಹತ್ತತ್ವತನುಃ" ಎಂಬ ಶ್ಲೋಕವು ಪ್ರಮಾಣವಾಗಿರುತ್ತದೆ. ತಾತ್ಪರ್ಯನಿರ್ಣಯ ಅ. ೩ ಶ್ಲೋ. ೧೬. ಮತಿಯ=ಮತಿಯನ್ನು, ಪಾಲಿಪುದು=ಕೊಡುವುದು. ॥೩॥

## ವ್ಯಾಸದಾಸ ಸಿದ್ಧಾಂತ ಕೌಮುದೀ

" ವಾಯುತ್ವೇ ಕಿಂಚಿದೂನಃ ಇತಿ ಪದಪ್ರಯುಕ್ತ ನ್ಯೂನ್ಯಂ ವಿಚಿಂತ್ಯ, ಯಾಚಿತ್ವಾ ವಿರಂಚಿಂ "ವಾಯುಶ್ಚ ತದನುಜ್ಞಯಾ " । ಇತಿ ಗತಿದಂ ವಾಯುಮಾತ್ಮತ್ರಾಣಮಭೀಪ್ಸತಿ ಆರುಇತಿ । ಆರ್ವಿತಿ ಕರ್ಮಧಾರಯಃ॥ಆರುಮೂರು=ಅಷ್ಟಾದಶ, (೧೮) ಎರಡೊಂದು (೩) ಮೂರು, ಮಿಲಿತ್ವೈಕಂಶತಿಸಹಸ್ರಂ । ಮೂರೆರಡು=ಗುಣಾಕಾರಃ ಷಟ್ (೬) ಅಬ್ಜಜೋ=ಬ್ರಹ್ಮಾ, ಸತ್ವೇತಿ=ಯಥಾಕ್ರಮಾನ್ವಯಃ। ಈವಾ=ಕೊಡುವಾ, ಎಮ್ಮಾ=ನಮ್ಮಾ , ಸಲಹು=ರಕ್ಷಿಸು ॥೪॥

## ಕನ್ನಡಾರ್ಥ

'' ವಾಯು ಪದವಿಯಲ್ಲಿ ತುಸು ಕಡಿಮೆಯೆನಿಸುವನು " ಎಂದು ಪದವೀ ನಿಮಿತ್ತವಾಗಿ ನ್ಯೂನತೆಯನ್ನು ಯೋಚಿಸಿ, ಮೊದಲು ಬ್ರಹ್ಮದೇವನನ್ನು ಪ್ರಾರ್ಥಿಸಿ, ಅನಂತರ ''ವಾಯುದೇವರು ಭಗವದನುಜ್ಞೆಯಿಂದ ಮೋಕ್ಷಕೊಡುವವರು " ಆದುದರಿಂದ ಅವರನ್ನು ತಮ್ಮ ಸಂರಕ್ಷಣೆಗಾಗಿ ದಾಸವರ್ಯರು ಬೇಡಿಕೊಳ್ಳುತ್ತಾರೆ.

ಆರುಮೂರು=ಮೂರಕ್ಕೆ ಆರರ ಗುಣಿತ=೧೮. ಎರಡೊಂದು=ಎರಡು ಮತ್ತು೧ಒಂದು. ಹೀಗೆ ಇವುಗಳ ಮೇಳನದಿಂದ ೨೧ (ಇಪ್ಪತ್ತೊಂದು)ಸಹಸ್ರ ಎಂದೂ, ಮೂರೆರಡು=ಎರಡಕ್ಕೆ ಮೂರರ ಗುಣಾಕಾರದಿಂದ ಆರು. ಹೀಗೆ ಆರನೂರು ಎಂದೂ ಶ್ವಾಸ ಮಂತ್ರದ ಜಪಸಂಖ್ಯೆ.

ಹೀಗೆ ೨೧,೬೦೦ ಶ್ವಾಸ ಜಪವನ್ನು ತ್ರಿವಿಧ ಚೇತನದಲ್ಲಿ ಬ್ರಹ್ಮಕಲ್ಪ



ಮುಗಿಯುವವರೆಗೆ ಮಾಡಿ, ಸಾತ್ವಿಕರಿಗೆ ಸುಖ, ಮಿಶ್ರರಿಗೆ ಸಂಸಾರ, ತಾಮಸರಿಗೆ ಅಪಾರ ದುಃಖಗಳನ್ನು ಕೊಡುವ ಪವಮಾನನೇ ನಮ್ಮನ್ನು ಸಂರಕ್ಷಿಸು॥೪॥

## ವ್ಯಾಸದಾಸ ಸಿದ್ಧಾಂತ ಕೌಮುದೀ

ಪಾವಕಾನಃ ಸರಸ್ವತೀತ್ಯತ್ರ ಪ್ರಸಕ್ತೇ- " ಸರಣಾತ್ ಸರ್ವಗತ್ವೇನ ಸರ್ವಜ್ಞೋ ವಾಸರೋಹರಿಃ ॥ ಸರಸಃ ಸರಸ್ವತಿತ್ವಾದ್ವಾ ತದ್ವತ್ತ್ವೇವ ಸರಸ್ವತೀ ॥ "ಹರಿಪ್ರಿಯತ್ವತೋವಾಯುಃ ಸರಸ್ವಾಂಸ್ತತ್ಪ್ರಿಯಾಥವಾ ॥ ಗುಣತ್ವೇನ ತತತ್ವಾದ್ವಾ ಭಗವಾಂಸ್ತು ಸರಸ್ವತೀ ॥ " ಸ್ತ್ರೀರೂಪ " ಇತಿಭಾಷ್ಯನಿರುಕ್ತ ಸರಸ್ವತೀಶಬ್ದ ವಾಚ್ಯಾಧಿಷ್ಠಾನಾ ॥ ಅತ ಏ ವೈ ತ ತ್ಸೂ ಕ್ತ ಕ ವಾ ಚ್ಯಾಂ ಬ್ರಹ್ಮಯೋಷಾಂ ಶೇಮುಷೀಂ ಕಾಂಕ್ಷತೇ ॥ ಚತುರೇತಿ ॥ ಬ್ರಹ್ಮಾಣೀ ಪದಸ್ಯ ಬ್ರಹ್ಮಭಾರ್ಯೇತಿ ನಾರ್ಥಃ । ತಥಾಸತಿ ಪುಂಯೋಗಾದಾಖ್ಯಾಯಾಮಿತಿ ಜೀಪಿ ಬ್ರಾಹ್ಮೀತಿ ಸ್ಯಾತ್। ಬ್ರಹ್ಮಅಣತೀತಿ ಉಕ್ತೌ ಕರ್ಮಣ್ಯಣ್ ॥ ನಜೀಪ್ ಕಿಂತು "ಟಿಡ್ಢೇ"ತಿಜೀಪ್ ॥

ಅತಿರೋಹಿತ=ಪ್ರಳಯೇಪ್ಯಲುಪ್ತಂ । ಅತಏವ ವಿಮಲಂ ದೇವಾದೀನಾಮಿತ್ಯುಕ್ತ ವಿಜ್ಞಾನಂ । "ವಾಯೋರ್ಮಮ ಪ್ರಳಯೇ ಸೃಷ್ಟಿಕಾಲೇ ತಥಾಗಾಯತ್ರ್ಯಾ ನಾಸ್ತಿ ನಾಸ್ತ್ಯೇವ ಮೋಹಃ । ಗಾಯತ್ರೀವದ್ಭಾರತೀಮ್ ಇತಿ ಗಾರುಡೇ" ॥ "ಅಂತರ್ಯಾಮಿತಯಾ ಧ್ಯೇಯಃ ಸರ್ವದೇವೇಷು" ಇತಿ ರೀತ್ಯಾ ಆಮ್ನಾಯಮಾನಿದೇವೀಸ್ತವನೇ ತದ್ಗಾನೇಕರೂಪಾಣಿ ಸ್ತುತಾನೀತ್ಯಾಶಯಾ ಬ್ರಹ್ಮಾಣೀತ್ಯುಕ್ತಿಃ ॥ ಹರಿರೂಪಾಣಿ "ನುತಿಸಿ" ಇತ್ಯನೇನ ಅನ್ವಯಃ ॥ ಅತಶ್ಚತುರವದನನ ರಾಣಿ ಇತಿಪದಾದಪುನರುಕ್ತಿಃ ॥ ತುತಿಪುದಕೆ=ಸ್ತುತಿಸಲಿಕ್ಕೆ ನೆಲಿಸು=ನಿಂದಿರಿಸು ॥ ೫ ॥

## ಕನ್ನಡಾರ್ಥ

"ಪಾವಕಾನಃ ಸರಸ್ವತೀ" ಎಂಬಲ್ಲಿ "ಸರಸ್ವತೀ" ಶಬ್ದವನ್ನು ನಿರ್ವಚನವನ್ನು ಹೀಗೆ ಮಾಡಿರುತ್ತಾರೆ.

"ಸರಣ"= ಎಲ್ಲಕಡೆಯಲ್ಲಿಯೂ ಗತಿಸುವದರಿಂದ ಅಥವಾ ಎಲ್ಲವನ್ನೂ ತಿಳಿದುಕೊಳ್ಳುವದರಿಂದ(ಸರ್ವಜ್ಞಹಾಗೂ ಸರ್ವಗತನಾದುದರಿಂದು) ಹರಿಯು ಸರಸ್ ಎನ್ನಿಸಿಕೊಳ್ಳುತ್ತಾನೆ. ಇಂಥ ಹರಿಯನ್ನು ಪ್ರೀತಿಪಡಿಸುವವನಾದುದ

ರಿಂದಲೂ, ಹರಿಗೆ ಪ್ರಿಯನಾದುದರಿಂದಲೂ ಸರಸ್ವಾನ್, ಎಂದರೆ ವಾಯುವು. ಅವನಿಗೆ ಪ್ರಿಯಳಾದುದರಿಂದ ವಾಯುಪತ್ನಿಯು "ಸರಸ್ವತೀ" ಎನ್ನಿಸಿಕೊಳ್ಳು ವಳು. ಅಥವಾ ಗುಣಗಳಿಂದ ವ್ಯಾಪಿಸಿದವನಾದುದರಿಂದ ಭಗವಾನ್ ಹರಿಯ ಸ್ತ್ರೀರೂಪವೂ "ಸರಸ್ವತೀ" ಎನ್ನಿಸಿಕೊಳುವದು." ಹೀಗೆ ಭಾಷ್ಯದಲ್ಲಿ ನಿರೂ ಪಿಸಿದಂತೆ "ಸರಸ್ವತೀ" ಎಂಬ ಶಬ್ದವಾಚ್ಯನಾದ ಹರಿಯ ಸ್ತ್ರೀರೂಪಕ್ಕೆ ಅಧಿ ಷ್ಠಾನಳಾದುದರಿಂದ ಸರಸ್ವತಿ ಸೂಕ್ತದಲ್ಲಿ ಹೇಳಲ್ಪಡುವ ( ವಾಚ್ಯಳಾದ ) ಬ್ರಹ್ಮ ಪತ್ನಿಯಾದ ಸರಸ್ವತಿಯನ್ನು ಬುದ್ಧಿಗೋಸುಗ ಪ್ರಾರ್ಥಿಸುತ್ತಾರೆ "ಚತುರ ವದನನ" ಎಂಬ ಪದ್ಯದಿಂದ

ಇಲ್ಲಿ ಇರುವ "ಬ್ರಹ್ಮಾಣೀ" ಪದಕ್ಕೆ "ಬ್ರಹ್ಮನಪತ್ನಿ" ಎಂದು ಅರ್ಥ ಹೇಳಬಾರದು. ಹಾಗೆ ಅರ್ಥಮಾಡಿದರೆ- "ಪುಂಯೋಗಾದಾಖ್ಯಾಯಾಂ" ಎಂಬ ಪಾಣಿನಿಯ (೪೧-೪೮) ವ್ಯಾಕರಣಸೂತ್ರದಂತೆ ಙೀಪ್, "ಸ್ತ್ರೀಲಿಂಗ" "ಪ್ರತ್ಯಯವು" ಬಂದು "ಬ್ರಾಹ್ಮೀ" ಎಂದು ರೂಪವಾಗುವದೇ ಹೊರತು. "ಬ್ರಹ್ಮಾಣೀ" ಎಂದು ರೂಪವಾಗುವದಿಲ್ಲವಾದುದರಿಂದ ವಿರೋಧ ಬರುತ್ತದೆ. "ಬ್ರಹ್ಮನನ್ನು ತಿಳಿಯುವವಳು" ಎಂದು ಅರ್ಥ ಮಾಡಬೇಕು. ಕರ್ಮಾರ್ಥ ದಲ್ಲಿರುವ "ಅಣ್" ಎಂಬುದು ಬ್ರಹ್ಮಶಬ್ದದ ಮುಂದೆ ಬರಲು, "ಟಿಡ್ಢಾಣಞ್" ಎಂಬ ಪಾಣಿನಿಯ ಸೂತ್ರಾನುಗುಣವಾಗಿ "ಙೀಪ್" ಎಂಬ ಸ್ತ್ರೀಲಿಂಗದ ಪ್ರತ್ಯ ಯವು ಬಂದು "ಬ್ರಹ್ಮಾಣೀ" ಎಂದು ರೂಪವು ಸಿದ್ಧವಾಗುತ್ತದೆ.

ಅತಿರೋಹಿತ= ಪ್ರಳಯದಲ್ಲಿಯೂ ಲುಪ್ತವಾಗದಿರುವ. ಆದುದರಿಂದಲೇ "ವಿಮಲವಿಜ್ಞಾನ" ಎಂಬ ವಿಶೇಷಣವು ಸಯುಕ್ತಿಕವಾಗಿ ಹೊಂದುವದು. ಇದಕ್ಕೆ " ಬ್ರಹ್ಮ ವಾಯುದೇವರಿಗೂ ಸರಸ್ವತೀದೇವಿಯವರಿಗೂ ಪ್ರಲಯ ಕಾಲದಲ್ಲಿಯೂ ಸಹ ಬುದ್ಧಿ ಮೋಹವಿಲ್ಲ. ಸರಸ್ವತಿಯಂತೆ ಭಾರತಿಯನ್ನೂ ತಿಳಿದುಕೊಳ್ಳಬೇಕು" ಎಂಬ ಅರ್ಥದ ಗರುಡ ಪುರಾಣ ವಚನವು ಪ್ರಮಾಣ.

" ಸರ್ವದೇವತೆಗಳಲ್ಲಿ ಪರಮಾತ್ಮನನ್ನು ಅಂತರ್ಯಾಮಿಯೆಂದು ಉಪಾ ಸಿಸಬೇಕು " ( ತಿಳಿಯಬೇಕು ) ಎಂದು ಹೇಳಿದಂತೆ, ವೇದಾಭಿಮಾನಿ ದೇವಿ ಯನ್ನುಸ್ತುತಿಸಿದರೆ, ಅವರಲ್ಲಿರುವ ಹಾಗೂ ವೇದಗಳಲ್ಲಿ ಹೇಳಲ್ಪಟ್ಟಅನೇಕರೂಪ ಗಳನ್ನು ಸ್ತುತಿಸಿದಂತೆ ಆಗುತ್ತದೆ " ಎಂಬ ಅಭಿಪ್ರಾಯದಿಂದ "ಬ್ರಹ್ಮಾಣೀ"



ಎಂದು ಹೇಳಿರುತ್ತಾರೆ. ವೇದೋಕ್ತವಾದ ಹರಿಯ ರೂಪಗಳನ್ನು ನುತಿಸಿ ಬೇಡುವೆ" ಎಂದು ಅನ್ವಯವನ್ನು ಹೇಳಬೇಕು. ಮತ್ತು ಇದರಿಂದ " ಚತುರ ವದನನ ರಾಣಿ-ಬ್ರಹ್ಮಾಣಿ " ಇವೆರಡು ಪದಗಳು ಪುನರುಕ್ತವಾಗುವದಿಲ್ಲ.

ತುತಿಪುದಕೆ=ಸ್ತುತಿಸಲಿಕ್ಕೆ, ನೆಲಿಸು=ನಿಂದಿರಿಸು ॥ ೫ ॥

ಅಥ ಯದನುಭಾವಾಭಾವೇ ವಾಗ್ಮ್ಯಪಿ ಮೂಕಃ, ತತ್ಸತ್ವೇ ಮೂಕೋಽಪಿ ವಾಗ್ಮೀ ಇತಿ ವ್ಯತಿರೇಕ ಸೂಚಕಮಪಿದ್ವಯಂ ಭವತೀತಿ ಸೌಧ ನಾಂದೀ ಪದ್ಯಗಾಮಿತಿಯಾದವಾರ್ಯಸರಣಿಮನುಸರನ್ " ಭಾತ್ಮ ಪರ ಮಾತ್ಮರತೇಃ ಜಗದ್ಧೃತೇಃ ವಾ ಭರತವಾಯುರಮಣೀಂ ತತ್ವಧಿಯಂ ಅರ್ಥಯತಿ ॥ ಕೃತೀತಿ ॥ ಕೃತೀತಿ ರಮಾರೂಪಂ ॥ ಪ್ರದ್ಯುಮ್ನಸುತಾ ತ್ವಂ । " ಪ್ರದ್ಯುಮ್ನತಶ್ಚಾಥ ಕೃತೇಃ ಸ್ತ್ರಿಯೌದ್ವೇ" ಇತಿ ನಿರ್ಣಯವಚನಂಮಾನಂ ॥ ಭೈಮಿಾತನುತ್ವೇ ರಾಮಾವಿಷ್ಟಶಚ್ಯಾದಿ ಸ್ತ್ರಿಯಾಂ ಹಿಡಿಂಬ್ಯಾದೀನಾಂ ಚ ವ್ಯಾವೃತ್ತಿ ರ್ನಿಜಪದೇನ ॥ ಅರವು=ತಿಳಿಸು ॥ ೬ ॥

## ಕನ್ನಡಾರ್ಥ

" ಯಾವಳ ಅನುಗ್ರಹವಿಲ್ಲದಿದ್ದರೆ ವಾಗ್ಮಿಯೂ ಮೂಕನಾಗುತ್ತಾನೆ; " ಅನುಗ್ರಹವಿದ್ದರೆ ಮೂಕನೂ ವಾಗ್ಮಿಯಾಗುತ್ತಾನೆ. " ಎಂದು, " ಜಡಮೂ ಕೋಽಪಿ " "ಜಡಮತಿರಪಿ" ಎಂಬಲ್ಲಿರುವ "ಅಪಿ" ಎಂಬ ಅವ್ಯಯವು "ವಿರೋಧ ಸಮುಚ್ಚಾಯಕವಾಗಿರುತ್ತದೆ " ಎಂದು, " ಭವತಿಯದನು ಭಾವಾ ಬೇಡಮೂಕೋಪಿ ವಾಗ್ಮೀ " ಎಂಬ ಸುಧಾಮಂಗಲ ಪದ್ಯದಲ್ಲಿ ಭಾರತೀ ಸ್ತುತಿ ಶ್ಲೋಕಕ್ಕೆ ವ್ಯಾಖ್ಯಾನ ಮಾಡಿರುವ ಶ್ರೀ ಯಾದವಾರ್ಯರ ರೀತಿಯನ್ನು ಅನುಸರಿಸುತ್ತ ಶ್ರೀ ದಾಸವರ್ಯರು' " ಭಾ ಎಂಬ ಪರಮಾತ್ಮನಲ್ಲಿ ರತಳಾದು ದರಿಂದ "ಭಾರತೀ," (೧) ಜಗತ್ತನ್ನು ಧರಿಸುವುದರಿಂದ ಭಾರತೀ, (೨) ಭರತ " ಪರಮಾತ್ಮನಲ್ಲಿ ನಿರತರಾದ " ವಾಯುವಿನ ಪತ್ನಿಯಾದುದರಿಂದ ಭಾರತೀ, (೩) ಇಂಥ ಭಾರತೀ ದೇವಿಯವರನ್ನು ತತ್ವಜ್ಞಾನವು ಬರಲೆಂದು ಬೇಡಿಕೊಳ್ಳುತ್ತಾರೆ. " ಕೃತಿರಮಣ " ಎಂಬ ಪದ್ಯದಿಂದ. "ಕೃತಿರಮಣ ಪ್ರದ್ಯುಮ್ನನಂದನೆ"=ಎಂಬಲ್ಲಿ "ಕೃತಿ" ಎಂಬುದು ರಮಾದೇವಿಯ ರೂಪವು; ಅವಳಿಗೆ ಪತಿಯಾದ ಪ್ರದ್ಯುಮ್ನರೂಪೀಪರಮಾತ್ಮನಸುತೆಯು ನೀನು; ಎಂದು

ಅರ್ಥ. “ ಪ್ರದ್ಯುಮ್ನ ನಾಮಕ ಭಗವಂತನಿಗೆ ಕೃತಿ ಎಂಬ ಲಕ್ಷ್ಮಿಯಲ್ಲಿ ಇಬ್ಬರು ಪುತ್ರಿಯರು ಆದರು ” ಎಂಬ ತಾತ್ಪರ್ಯ ನಿರ್ಣಯದ ವಚನವು ಈ ಅರ್ಥದಲ್ಲಿ ಪ್ರಮಾಣವಾಗಿರುತ್ತದೆ.

ಮಾರುತನ ”ನಿಜಪತ್ನಿ ಎಂಬಲ್ಲಿ “ನಿಜ”ವೆಂಬ ಪದವು,“ಭೀಮಾವತಾರ ದಲ್ಲಿ ವಾಯುದೇವನಿಗೆ ದ್ರೌಪದೀ ದೇವಿಯಲ್ಲಿ ಆವಿಷ್ಟರಾಗಿರುವ ಶಚಿ ಮುಂತಾದವರೂ, ಹಿಡಿಂಬೆ ಮುಂತಾದದವರು ಸತಿಯರಲ್ಲ ” ಎಂಬುದನ್ನುತಿಳಿಪಡಿಸಲು ಅಡಕವಾಗಿದೆ ಎಂದು ತಿಳಿಯಬೇಕು. ಅರವು=ತಿಳಿಸು ॥ ೬ ॥

## ವಾಸದಾಸ ಸಿದ್ಧಾಂತ ಕೌಮುದೀ

ಏವಂವಾಯುಶ್ಚ ಶುರತ್ವಂಕೃತೀಶಸ್ಯ“ಪ್ರದ್ಯುಮ್ನೋಜನಯಾಮಾಸಕೃತೌ ಕನ್ಯಾದ್ವಯಂ ತದಾ॥ಸರಸ್ವತೀಂತು ತತ್ರಾದ್ಯಾಂ ಬ್ರಹ್ಮಣಾ ಸಮಯೋಜಯತ್ ವಾಣೀಂ ಪ್ರಾಣೇನ ತಾಭ್ಯಾಂ ತು ಕ್ರೀಡಂತೌ ತಸ್ಥತುಶ್ಚಿರಮ್ ಇತಿ ಗಾರುಡ ವಾಚಾ ಅವಧಾರ್ಯ,ತತ್ರೈವ ಪ್ರಬಂಧಾಂತರೇ ದೇವೀಂಸರಸ್ವತೀಂ ವ್ಯಾಸಮಿತಿ ವ್ಯಾಸೇನ ಭಗವತಾ ಭಾರತದೌ ಕುತೋ ವೈಪರೀತ್ಯೈನಾತ್ಮನಮನಂ ವ್ಯರಚೀತಿ ವೈನತೇಯಪ್ರಶ್ನಂ ಪರಿಹರತಾ ನಂದಜೇನ “ ವ್ಯಾಸಸ್ತುಕಶ್ಚಿನ ಋಷಿಃ ಪುರಾಣೇ ತಾಮಸೇ ಸ್ಮೃತಃ । ಇತಿ ಜ್ಞಾನಾವಲಂಬೇನ ದೈತ್ಯಾ ದೈತ್ಯಾನುಗಾಃ ಸದಾ ॥ ಪ್ರವಿಶಂತು ಹ್ಯಂಧತಮಃ ಇತಿಹ್ಯಂತೇ ನಮಸ್ಕೃತಮಿತ್ಯುಕ್ತಮಾಲೋಚ್ಯ ಯಥಾ ಯೋಗ್ಯಾನ್ವಯಮಭಿಪ್ರೇತ್ಯಾಂತೇ ಸರಸ್ವತೀನತ್ಯಂತೇ ಬದರೀವಾಸಂ ರಕ್ಷಣಮಾಶಾಸ್ತೇ ॥ ವೇದೇತಿ ॥ ಪ್ರತಿಪಾದ್ಯತ್ವೇನ ತತ್ರ ಹರಿರಾಸ್ತೇಽತಃ ವೇದಾನಾಂ ಪೀಠತಾ ॥ ಯದ್ವಾ ಪೀಠಸ್ಯೇವ ವಿಸ್ತ್ರತಿಕರ್ತೃದ್ವಾ ॥ ಮೋದ ಚಿನ್ಮಯ = ಸುಖಜ್ಞಾನಪೂರ್ಣಃ । ಭೇದಃ=ಅಂತರ್ಬಹಿಶ್ಚ ಶಾರೀರ ಶತ್ರು ಶಸ್ತ್ರೈಃ, ಭೇದಃತ್ವಗಾದೇಃ। ಬದ್ಧೇರ್ವಾ ॥ ವಿಷಾದ=ಚಿತ್ತಃ ವ್ಯಥಾ, ಕುಟಿಲ= ವಕ್ರತಾ । ಅಂತಾದಿ ಮಧ್ಯೈಃ = ವಿನಾಶೋತ್ಪತ್ಯಾದ್ಯವಸ್ಥಾಃ । ಆದಾನಂ= ಲಯೇ ಜಗತಃ ಸ್ವೀಕಾರಃ । ಆದಿಃ ಬಹೀರೇಚನಮ್ । ಸ ತ್ರಾ ಣ= ಸದ್ರಕ್ಷಕ ॥೭॥

## ಕನ್ನಡಾರ್ಥ

ಹೀಗೆ “ಕೃತಿಪತಿಯಾದ ಪ್ರದ್ಯುಮ್ನನು ಕೃತಿ ಎಂಬ ಸತಿಯಲ್ಲಿ ಸರಸ್ವತಿ ಭಾರತಿ ಎಂಬ ಇಬ್ಬರು ಕನ್ಯೆಯರನ್ನು ಹುಟ್ಟಿಸಿದನು. ಹಿರಿಯಳಾದ ಸರಸ್ವತಿ



ಯನ್ನು ಬ್ರಹ್ಮದೇವನಿಗೂ, ಕಿರಿಯವಳಾದ ಭಾರತಿಯನ್ನು ವಾಯುದೇವನಿಗೂ, ಸಂಯೋಜನೆ ಮಾಡಿ, ಅವರೊಡನೆ ಕ್ರಿಡಿಸುತ್ತ, ಕೃತಿ ಪ್ರದ್ಯುಮ್ನರು ಕುಳಿತರು. (ಸಂತುಷ್ಟರಾದರು) ಎಂಬ ಗರುಡ ಪುರಾಣದಲ್ಲಿರುವ ವಚನಗಳಿಂದ ನಿಶ್ಚಯಿಸಿದರು. ( ಶ್ರೀ ಜಗನ್ನಾಥ ದಾಸರು. )

ಅದರಂತೆ ಉಳಿದ ಪುರಾಣಗಳಲ್ಲಿಯೂ “ದೇವೀಂ ಸರಸ್ವತೀಂ ವ್ಯಾಸಂ” ಎಂದು ವ್ಯಾಸರು ಭಾರತ ಮುಂತಾದವುಗಳಲ್ಲಿ ಆತ್ಮನಮನವನ್ನು ಕೊನೆಯಲ್ಲಿ ಯಾಕೆ ಮಾಡಿ ತೋರಿಸಿದರು ? ಎಂಬ ಗರುಡನ ಪ್ರಶ್ನೆಯನ್ನು ಉತ್ತರಿಸುತ್ತ “ತಾಮಸ ಪುರಾಣಗಳಲ್ಲಿ ವ್ಯಾಸನನ್ನು ಒಬ್ಬಸಾಮಾನ್ಯ ಋಷಿಯೆಂದು ಹೇಳಲಾಗಿರುತ್ತದೆ; ಹೀಗಿರುವ ಜ್ಞಾನವನ್ನು ಅವಲಂಬಿಸಿ (ಹೊಂದಿ) ದೈತ್ಯ ಹಾಗೂ ಅವರ ಅನುಯಾಯಿಗಳೆಲ್ಲರೂ ತಮಸ್ಸನ್ನು ಹೊಂದಲಿ !” ಈ ಉದ್ದೇಶವನ್ನು ಹೃದಯದಲ್ಲಿ ಇಟ್ಟುಕೊಂಡು, ವ್ಯಾಸರು ಕೊನೆಯಲ್ಲಿ ತಮ್ಮ ನಮಸ್ಕಾರವನ್ನು ಕೊನೆಯಲ್ಲಿ ಸೇರಿಸಿಕೊಂಡಿರುತ್ತಾರೆ. ” ಎಂದು ಹೇಳಿರುವ ಗರುಡ ಪುರಾಣದ ವಚನವನ್ನೂ ಯೋಚಿಸಿ, “ನಾರಾಯಣಂ ನಮಸ್ಕೃತ್ಯ ” ಎಂಬಲ್ಲಿ ಹೇಳಿದಂತೆ ಸರಸ್ವತಿಯನ್ನು, ನುತಿಸಿದ ನಂತರ ಬದರಿಕಾಶ್ರಮ ನಿವಾಸಿಗಳಾದ ಬಾದರಾಯಣರನ್ನು. ತಮ್ಮನ್ನು ಸಂರಕ್ಷಿಸಬೇಕೆಂದು ದಾಸವರ್ಯರು ಕೇಳಿಕೊಳ್ಳುತ್ತಾರೆ- “ ವೇದಪೀಠ ” ಎಂಬ ಪದ್ಯದಿಂದ.

“ವೇದಪೀಠ”– ವೇದಗಳು ಇವರನ್ನೇ ಪ್ರತಿಪಾದಿಸುವದರಿಂದ “ ಪೀಠಗಳು ” ಹೀಗೆ ವೇದಗಳೇ ಪೀಠಗಳಾಗಿವುಳ್ಳವನು. (೧) ಅಥವಾ ವೇದಗಳಿಗೆ ವಿಸ್ತಾರ ಕಾರಣನಾದುದರಿಂದ ಪೀಠದಂತೆ ಇರುವವನು. “ಮೋದಚಿನ್ಮಯ” ಸುಖಜ್ಞಾನಪೂರ್ಣ. ಭೇದಃ=ಕಾಮಮುಂತಾದ ಅಂತಶಸ್ತ್ರಗಳಿಂದ, ಹಾಗೂ ಖಡ್ಗಾದಿ ಬಾಹ್ಯಶಸ್ತ್ರಗಳಿಂದ ಆಗುವ ಎರಡು ತರಹದ ಭೇದಗಳು.

ಭೇದ ಶರೀರಕ್ಕೆ (ಚರ್ಮಕ್ಕೆ) ಮತ್ತು, ಬುದ್ಧಿಗೆ, ಹೀಗೆ ಭೇದದಲ್ಲಿಯೂ ಎರಡು ಬಗೆಗಳು. ವಿಷಾದಃ ಚಿತ್ತವ್ಯಥೆ. ಕುಟಿಲ=ವಕ್ರತೆ. ಅಂತಾದಿ ಮಧ್ಯ=ಮರಣ-ಜನನ ಸ್ಥಿತಿ (ಮಧ್ಯಮ) ಮುಂತಾದ ಅವಸ್ಥೆಗಳು. ಆದಾನಂ= ಲಯಕಾಲದಲ್ಲಿ ತನ್ನಲ್ಲಿ ಜಗತ್ತನ್ನು ಸ್ವೀಕರಿಸುವದು. ಆದಿ=(ಸೃಷ್ಟಿಯಲ್ಲಿ) ಹೊರಗೆ ತರುವದು. ಸತ್ರಾಣ=ಸಜ್ಜನರ ಸಂರಕ್ಷಕ. ॥ ೭ ॥

### ವ್ಯಾಸದಾಸ ಸಿದ್ಧಾಂತ ಕೌಮುದೀ

ಏವಂ ಪ್ರಸಂಗಾದ್ವ್ಯಾಸವೀಸೂನುಮಾನಮ್ಯ ತದ್ವಾಗ್ವಿನಿರ್ಣಾಯಕಮಧ್ಯಗೇಹಪ್ರಸೂತದೇಹಂ ಪರವಾಸುದೇವಂ ದುರ್ವಾದಿಗರ್ವಾದ್ರಿಪವಿಂ ನಮಂತಿ ಮಾಯೇಭಸಿಂಹಂ ಸುಖತೀರ್ಥಮಂಜಃ ॥ ಕ್ಷಿತೀತಿ ॥

ರಚಿಸೆ=ರಚಿಸಲು, ಸತಾಂ ಚಿತ್ತೇ ತೈರ್ದೂಷಿತೇ ಚೇ ತ್ಯ ಪಿ ಗ್ರಾಹ್ಯಂ ॥ ನಡುಮನೆ=ಮಧ್ಯಗೇಹಃ । ಸತೀತಿ=ವೇಗ(ದ) ವತ್ಯಾಖ್ಯಭಾರ್ಯಾಯಾಮಿತಿ ಸ್ಕಾಂದೋಕ್ತೇಃ । ಅಪ್ರತಿಮ=ಅಸದೃಶ॥ ಏಕವಿಂವಶತಿವಾದಿನಸ್ತು । ಭಾರತೀವಿಜಯಶ್ಚೈವ ಸಚ್ಚಿದಾನಂದ ಏವಚ । ಬ್ರಹ್ಮಘೋಷಃ ಶತಾನಂದಃ ಉದ್ಧರ್ತಶ್ಚೈವ ಪಂಚಮಃ ॥ ವಿಜಯೋ ರುದ್ರಭಟ್ಟಶ್ಚ ವಾಮನಾಖ್ಯಸ್ತಥಾಷ್ಟಮಃ ॥ ಸಯಾದವ ಪ್ರಕಾಶಶ್ಚ ನವಮಸ್ತತ್ರ ಕೀರ್ತಿತಃ ॥ ರಾಮಾನುಜಸ್ತಥಾ ಭತೃಪ್ರಪಂಚೋ ದ್ರುಮಿಳಸ್ತಥಾ ॥ ಬ್ರಹ್ಮದತ್ತೋ ಭಾಸ್ಕರಶ್ಚ ವಿಶಾಖೋ ವೃತ್ತಿಕಾರಕಃ ॥ ತಥಾ ವಿಜಯಭಟ್ಟಶ್ಚ ವಿಷ್ಣುಕ್ರಾಂತಃ ತಥೈವಚ ॥ ವಾದೀಂದ್ರಶ್ಚ ತತಃ ಪಶ್ಚಾತ್ತಥಾ ಮಾಧವದಾಸಕಃ॥ ತತಃ ಪಶ್ಚಾತ್ ಸಂಕರಶ್ಚೈಕವಿಂಶತಿ ವಾದಿಭಿಃ। ಪ್ರಣೀತಾನಿ ನಿರಾಚಕ್ರೇ ದುರ್ಭಾಷ್ಯಾಣಿ ಮಹಾಮತಿಃ॥ ಇತಿ ಶರ್ಕರೋಕ್ತಾಃ ಜ್ಞೇಯಾಃ ॥ ಮಧ್ವಃ ಆನಂದಸಂದಾಯಿಸುಶಾಸ್ತ್ರಕೃತ್ಸಯತ್ ॥ ಮಧು ಶಾಸ್ತ್ರಂ (ಮಧ್ವಶಾಸ್ತ್ರಂ) ಸಮ್ಯಕ್‌ವೇತ್ತಾ ಗುರುಃ ಸದಾ ॥ ಮಧ್ವ ಆನಂದತೀರ್ಥಃ ಸ್ಯಾದಿತ್ಯುಕ್ತೇಃ ॥ ಸುಭಾಷ್ಯಾದಿಕರ್ತೇತ್ಯರ್ಥಃ ॥ ೮ ॥

### ಕನ್ನಡಾರ್ಥ

ಹೀಗೆ ಪ್ರಸಂಗದಿಂದ (ವಾಸವೀಸೂನು) ವೇದ ವ್ಯಾಸರನ್ನು ಸಮಸ್ಕರಿಸಿ, "ಆ ವ್ಯಾಸರ ವಾಕ್ಯಗಳಿಗೆ ನಿರ್ಣಯವನ್ನೀಯುವ, ಮಧ್ಯಗೇಹರಲ್ಲಿ ಜನಿಸಿದ ದೇಹವುಳ್ಳವರೂ, ಬಾಲ್ಯದಲ್ಲಿ ವಾಸುದೇವನೆನಿಸಿಕೊಂಡವರೂ, ದುರ್ವಾದಿಗಳ ಗರ್ವಪರ್ವತಕ್ಕೆ ವಜ್ರರೂ ಮಾಯಿ ಮದ್ದಾನೆಗಳಿಗೆ ಕೇಸರಿಗಳೂ ಆದ ಆನಂದ ತೀರ್ಥರನ್ನು ನಮಸ್ಕರಿಸುತ್ತಾರೆ- "ಕ್ಷಿತಿಯೊಳಗೆ" ಎಂಬುದಾಗಿ.

ಕುಭಾಷ್ಯವರಚಿಸೆ=ಕುಭಾಷ್ಯಗಳನ್ನು ರಚಿಸಲು ಎಂಬಲ್ಲಿ ಆವುಗಳಿಂದ ಸಜ್ಜನರ ಚಿತ್ತವು ದೂಷಿತವಾಗಲು" ಎಂದು ಹೆಚ್ಚಿನದನ್ನೂ ಅಧ್ಯಾಹಾರದಿಂದ ಊಹಿಸಿಕೊಳ್ಳಬೇಕು. ನಡಮನೆ=ಮಧ್ಯಗೇಹ. ಅವರ "ಸತಿ"=ವೇದ(ಗ)ವತಿ



"ವೇದ(ಗ)ವತಿಯೆಂಬ ಮಧ್ಯಗೇಹ ಭಟ್ಟರ ಹೆಂಡತಿಯಲ್ಲಿ"ಎಂದು ಸ್ಕಂದ ಪುರಾಣದ ವಚನವಿರುವದು. ಅಪ್ರತಿಮ=ಅಸದೃಶ.

ಮಧ್ವಾಭಿಧಾನದಿ ಎಂಬಲ್ಲಿ "ಮಧ್ವ=ಆನಂದಕರ ಶಾಸ್ತ್ರವನ್ನು ವಿರಚಿಸಿದವರು; "ಮಧುವನ್ನು (ಸುಖವನ್ನು) ಕೊಡುವ ಶಾಸ್ತ್ರವು ಮಧ್ವಶಾಸ್ತ್ರವು. ಇದನ್ನು ಸರಿಯಾಗಿ ತಿಳಿದು ಉಪದೇಶಿಸುವರು ಆನಂದತೀರ್ಥರು ಸರ್ವಗುರುಗಳು; ಅವರೇ "ಮಧ್ವಎಂಬ ನಾಮವುಳ್ಳವರು."ಎಂಬ ಉಕ್ತಿಗೆ ಅನುಸಾರವಾಗಿ "ಸುಭಾಷ್ಯ ಮುಂತಾದವುಗಳನ್ನು ಮಾಡಿದವರು" ಎಂದು ಮಧ್ವಶಬ್ದಾರ್ಥವನ್ನು ತಿಳಿಯಬೇಕು ॥ ೮ ॥

### ವ್ಯಾಸದಾಸ ಸಿದ್ಧಾಂತ ಕೌಮುದೀ

ಪುನಸ್ತಮಭಿಷ್ಟೌತಿ ॥ ಪಂಚೇತಿ ॥ ಪ್ರಪಂಚೋ ಭೇದಪಂಚಕಃ ಇತ್ಯುಕ್ತೇಃ ಪಂಚೇತಿ । ಅನಿರುದ್ಧಾದಿನಾರಾಯಣಾಂತಾಃ । ಪಂಚೇತಿ ಬ್ರಹ್ಮಾ । ಪಂಚೇತಿ ಪ್ರಕೃತ್ಯಾ ಸಹ ॥ ಪ ಂ ಚ ಭಿಃ ಮ ಹಾ ಭೂ ತೈಃ ಪ ಂ ಚ ಭಿಃ ಮಾತ್ರಾಭಿಃ । ಬ್ರಹ್ಮ ಪೂರ್ಣಂ॥ ಚತುರ್ಭಿಃ ಮನೋಬುದ್ಧ್ಯ ಹಂಕಾರಚಿತ್ತೈಃ ದಶಭಿರಿಂದ್ರಿಯೈಃ । ಪಂಚಿಕೆ=ಹಂಚಿಗೆ । ಭಾವೀತಿ । "ವಾಯುರ್ಹಿ ಬ್ರಹ್ಮತಾಮೇತೀತ್ಯುಕ್ತೇಃ । ದಿನೇತಿ=ಸಪ್ತಮೀ ॥ ೯ ॥

### ಕನ್ನಡಾರ್ಥ

ಮತ್ತೊಮ್ಮೆ(ಮತ್ತೂ)ಆ ಆನಂದ ತೀರ್ಥರನ್ನೇ ನಮಿಸಿ, ಸ್ತುತಿಸುತ್ತಾರೆ. "ಪಂಚಭೇದ" ಎಂಬ ಪದ್ಯದಿಂದ. ಪಂಚಭೇದ=ಪ್ರಪಂಚದಲ್ಲಿ ಐದುಭೇದಗಳು. ಅವು ಯಾವವೆಂದರೆ "ಜೀವೇಶ್ವರ ಭೇದ, ಜಡೇಶ್ವರ ಭೇದ, ಜೀವ-ಜಡಭೇದ, ಜೀವ-ಜೀವರ ಭೇದ, ಜಡ-ಜಡಗಳಲ್ಲಿಯ ಭೇದ. ಹೀಗೆ."

ಪಂಚರೂಪ=ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ನಾರಾಯಣ. ಹೀಗೆ ಐದು ರೂಪಗಳು. ಪಂಚಮುಖ=ಬ್ರಹ್ಮದೇವರು. ಪಂಚವಿಂಶತಿ ತತ್ವ = (೫) ಪಂಚ ಮಹಾ ಭೂತಗಳು ೫. ಮಾತ್ರಾಗಳು ಇಂದ್ರಿಯಗಳು ೧೦. ಮನಸ್ಸು, ೧೧ ಬುದ್ಧಿ. ೧೨ ಅಹಂಕಾರ ೧೩ ಚಿತ್ತ, ೧೪ ಮೂಲ ಪ್ರಕೃತಿಃ ೧೫; ಹೀಗೆ ಒಟ್ಟಿಗೆ ೨೫ ತತ್ವಗಳು. ಪಂಚಿಕೆ=ಹಂಚಿಕೆಗಳನ್ನು, ಅಂದರೆ- ವಿಭಾಗಗಳನ್ನು ; ಎಂದು ಭಾವ ॥ ೯ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಮನೋ ಧೀಶ ಮೀಶ ಮಭೀಷ್ಟಂ ನಾಥತೇ ॥ ವಾಮೇತಿ="ಸ್ವವಾಮ ಭಾಗೇ

## ಕನ್ನಡಾರ್ಥ

ದಾಸವರೇಣ್ಯರು ಮನೋನಿಯಾಮಕರಾದ ರುದ್ರದೇವರನ್ನು ಮತ್ತೂ ಸ್ತುತಿಸುತ್ತಾರೆ. "ಕೃತ್ತಿ" ಎಂಬ ಪದ್ಯದಿಂದ. ಕೃತ್ತಿ=ಚರ್ಮ. ಹಿಂದೆ="ಉಗ್ರ ತಪ" ಎಂಬ ಹಿಂದಿನ ಅವಸ್ಥೆಯಲ್ಲಿ;ಎರಡು ಕಲ್ಪಗಳು ಸ್ವಲ್ಪಾವಧಿಯಾಗಿರುವದರಿಂದ ಅವುಗಳನ್ನು ಗಣನೆಗೆ ತರದೆ- "೩೮ ಕಲ್ಪಗಳಲ್ಲಿ" ಎಂದು ಅರ್ಥ ಮಾಡಬೇಕು. ಸಮೀರನಲಿ– ಸಮೀರಪದವಿಗೆ ಯೋಗ್ಯರಾದ ಲಾತವ್ಯರಲ್ಲಿ, ಶ್ರೀಮನ್ನ್ಯಾಯ ಸುಧೆಯಲ್ಲಿ "ಲಿಂಗಾಲ್ಲಾತವ್ಯತಃ" ಎಂಬ ಅನುವ್ಯಾಖ್ಯಾನವನ್ನು ವಿವರಿಸುವಾಗ "ಲಾತವ್ಯಃ ಶಿಷ್ಯರಿಂದ ಉಪಾಸಿತನಾಗುವವನು "ಎಂದುಜಯತೀರ್ಥರು ನಿರೂಪಿಸಿರುವರು. "ಕಲ್ಪ" ಬ್ರಹ್ಮಮಾನದಿಂದ ಕಲ್ಪವನ್ನು ಎಣಿಸಬೇಕು " ಎಂದು ಪ್ರಮಾಣವಿದ್ದುದರಿಂದ ಒಂದು ನೂರು ವರ್ಷಗಳು "ಕಲ್ಪ" ವೆನಿಸುವವು.

ಅನುವ್ಯಾಖ್ಯಾನದಲ್ಲಿ " ನಾಲ್ವತ್ತು ಕಲ್ಪಗಳಿಂದ ಶೈವಪದವು " ಎಂದು ಹೇಳಿರುವದರಿಂದ ಕಲ್ಪವು ಬ್ರಹ್ಮಮಾನವುಳ್ಳದ್ದು. ಶೈವಪದವಿಯು ಬಂದನಂತರ ಹತ್ತುಕಲ್ಪಗಳು " ಎಂದು ತಿಳಿಯಬೇಕು. " ಹತ್ತು ಕಲ್ಪಗಳನ್ನು ತಪಸ್ಸಿನಲ್ಲಿ ಕಳೆದು " ಎಂದು, ಅನುವ್ಯಾಖ್ಯಾನದ ಸುಧೆಯಲ್ಲಿ "ಬ್ರಹ್ಮದೇವರ ದಿವಸವು ಇಲ್ಲಿ ಕಲ್ಪವೆನಿಸುವದು " ಎಂದು ಹೇಳಿರುವರು, ಈ ಹತ್ತು ಕಲ್ಪ ಸಾಧನವನ್ನು "ಮೋಕ್ಷದಲ್ಲಿ ಆನಂದೋದ್ರೇಕವನ್ನು ಅಪೇಕ್ಷಿಸಿ ಮಾಡುತ್ತಾರೆ" ಎಂದು ತಿಳಿಯಬೇಕು. ಯಾಕಂದರೆ ಅನುವ್ಯಾಖಾನದಲ್ಲಿ " ಇತ್ಯೇದಖಿಲಂ " ಎಂಬುದಾಗಿ ಆಚಾರ್ಯರು ಅಪ್ಪಣೆ ಕೊಡಿಸಿರುತ್ತಾರೆ.

ಹಾಗಾದರೆ– "ಐವತ್ತು ಕಲ್ಪಗಳು" ಎಂಬ ವಚನ ವಿರೋಧವನ್ನೂ ಹೇಳಬರುವದಿಲ್ಲ. ಯಾಕಂದರೆ– ವಿಶೇಷದಿಂದ ಕೂಡಿದ ಅಪರೋಕ್ಷವನ್ನು ದೃಢೀಕರಿಸುವ ಹತ್ತುಕಲ್ಪ ಸಾಧನಗಳನ್ನು ಎಣಿಸುವ ಕಾರಣವಿಲ್ಲ. ಎಂದು ಹೇಳಬಹುದು. ಆದರೆ ಇದು ಸರಿಯಲ್ಲ; ಹೀಗೆ ಹೇಳಿದರೆ- "ಚತ್ವಾರಿಂಶದ್ಭಿಃ" ಇನರ ಮುಂದೆ "ದಶಭಿಃ" ಎಂದು ಹಚ್ಚಿಗೊಂಡು ಹತ್ತುಕಲ್ಪಗಳನ್ನು ಸೇರಿಸಿ ಐವತ್ತು ಕಲ್ಪಗಳನ್ನು ಮಾಡಬೇಕು" ಎಂದು ಹೇಳಿರುವ ಭಾಗವತ ತಾತ್ಪರ್ಯ ದೀಪಿಕೆಯು ವಿರೋಧ ಬರುತ್ತದೆ.



ಹೀಗೆಯೇ ಎರಡೂ ಸ್ಥಳಗಳಲ್ಲಿ ಐವತ್ತು ಕಲ್ಪಗಳನ್ನು ಪರಿಗ್ರಹಿಸಿದರೆ– "ಅಶಾದಿತ್ಯಷ್ಟಕಂ ಪ್ರೋಕ್ತಂ" ಎಂದು, ನಾಲ್ವತ್ತೇ ಕಲ್ಪಗಳು ಅವರ ಸಾಧನ ಮಾನ; ಎಂದು ನಿರ್ಣಯಿಸುವ ಗರುಡ ಪುರಾಣವಚನಕ್ಕೆ ವಿರುದ್ಧವಾಗುತ್ತದೆ.

ಆದುದರಿಂದ " ಐವತ್ತು ಕಲ್ಪಗಳು " ಎಂಬ ವಚನವು " ಸಮುದ್ರದಲ್ಲಿ ಮಾಡಿದ ತಪಸ್ಸಿನ ಕಾಲವನ್ನು ಸೇರಿಸಿ ಆದುದರ ಹೇಳಿಕೆ " ಎಂಬ ಭ್ರಮವನ್ನು ಮುಂದರಿಗೆ ಹುಟ್ಟಿಸುವದು; ಅದಕ್ಕಾಗಿಯೇ ಹೀಗೆ ಹೇಳಿದ್ದು" ಎಂದು ಕೃಷ್ಣನ ಹೃದಯು. ಯಾಕಂದರೆ— "ತತ್ವಗಳು ಬಹಳ ಗುಟ್ಟಿನಲ್ಲಿರತಕ್ಕವುಗಳು" ಎಂದು ಅಲ್ಲಿಯೇ ಗರುಡನಿಗೆ ಶ್ರೀಕೃಷ್ಣನು ಸಮಾಧಾನವನ್ನು ಹೇಳಿರುತ್ತಾನೆ.

ಸ್ಥೂಲ ಹೃದಯಗತನ ಅಪರೋಕ್ಷವು ಬಾಹ್ಯಾಪರೋಕ್ಷವೆನಿಸುತ್ತದೆ; ಸಾಮಾನ್ಯ ಅಪರೋಕ್ಷಕಾಲದಲ್ಲಿಯೇ ಆಗುತ್ತದೆ. ಆಗಲೇ ಪದದ ಜನನವಾಗುತ್ತದೆ, "ಸ್ವರೂಪಚಕ್ಷುಸ್ಸಿನಿಂದ ಸಾಕ್ಷಾತ್ಕರಿಸುವದು (ನಿಜವಾದ) ಅಪರೋಕ್ಷವು " ಎಂದು ಹೇಳಿರುವ ಬಿಂಬವಿಶೇಷ ಅಪರೋಕ್ಷವು ಸಾಧನ ಕಾಲದಲ್ಲಿಯೇ ಆಗುತ್ತದೆ. ಇದೇ ಮುಖ್ಯವಾದ ರಹಸ್ಯವು.

ಪ್ರಕಾಶ ಸಂಹಿತೆಯಲ್ಲಿ ಈ "ಹಿಂದೆ ಹೇಳಿದ ಕಲ್ಪಗಳಂದ ಮುಕ್ತರಾಗುತ್ತಾರೆ; ಅಷ್ಟು ಕಲ್ಪಗಳಿಂದ ಸಾಧನ; ಅದಕ್ಕೂ ಪೂರ್ವದಲ್ಲಿಯೇ ಅಪರೋಕ್ಷವನ್ನು ಸಂಪಾದಿಸಬೇಕು. " ಹೀಗೆ ಹೇಳಿರುತ್ತಾರೆ.

ಅಂದರೆ– ಹೀಗೆ ಕಾಲಕ್ರಮವಿರುತ್ತದೆ. ಬ್ರಹ್ಮದೇವರ ನಾಲ್ವತ್ತು ಕಲ್ಪಗಳಿಂದ ಸಾಮಾನ್ಯಾಪರೋಕ್ಷವಾಗುತ್ತದೆ. ಅನಂತರ ಮೂವತ್ತೆಂಟು (೩೮) ಕಲ್ಪಗಳಿಂದ ವಿಶೇಷಾಪರೋಕ್ಷದಿಂದ ಕೂಡಿದ ಶೈವಪದ. ಇದರ ನಂತರ ಒಂದು ಕಲ್ಪವಾದನಂತರ ಶೇಷಪದ. ಹೀಗೆ ಒಟ್ಟಿಗೆ- ಶೇಷಪದವಿಯನ್ನು ಪಡೆಯಲರ್ಹ ಚೇತನನಿಗೆ, ೭೮ (ಎಪ್ಪತ್ತೆಂಟು) ಕಲ್ಪಗಳು ಮುಗಿದನಂತರ ಆರಬ್ಧಕ್ಷಯವೂ ಶೇಷ ಪದವಿಯೂ ಆಗುವದು. " ಎಂದು ಅಭಿಪ್ರಾಯ. ‡

---

‡ ಇದೇ ವ್ಯಾಖ್ಯಾನಕಾರರು ಪ್ರಾಕೃತದಲ್ಲಿ ಬರೆದ ತಮ್ಮ ಟಿಪ್ಪಣಿಯಲ್ಲಿ ೫೦ ಕಲ್ಪಗಳೆಂದು ಬರೆದಿರುವದರಿಂದ, ಪರಸ್ಪರ ವಿರೋದ ಬರುವದರಿಂದ ಇಲ್ಲಿರುವ ಮೇಲಿನ ವಾಕ್ಯಗಳು " ಇವರವೇ ! " ಎಂಬಲ್ಲಿ ಸಂಶಯ ಬರುತ್ತದೆ. ಕಾರಣ ಸೂಜ್ಞರು ಇದರ ಸಾರಸಾರವನ್ನು ವಿಚಾರಿಸಿ ವಿರೋಧ ಪರಿಹರಿಸಿಕೊಳ್ಳಬೇಕು.

(ಹ. ಗೋ)

## ವ್ಯಾಸದಾಸ ಸಿದ್ಧಾಂತ ಕೌಮುದೀ

ಸರ್ವದೇವಾನ್ ವಂದತೇ || ಪಾಕೇತಿ || ಪಾಕೋನಾಮ ದೇತ್ಯಃ || ತಚ್ಛಾಸನಃ ಇಂದ್ರಃ|ದಿವೌಕಸಃ ದೇವಾಃ|ಕಮಲ ಪದ್ಮಂ|ಅನೀಕ ಸಮೂಹಃ||೧೨||

ಸ್ವಾಂಕಿತೇಂದಿರಾಂಕ ವಕ್ಷೋನಾಮಾನು ವದನ್ ಸಂಧಿಮುಪಸಂಹರತಿ|| ಪರಿಮಳೇತಿ || ಪುಷ್ಪಸೌರಭವದಜಾದೀನಾಂ || ತೋರಿ || ಅರಣಿಗಾಗ್ನಿವತ್ ಮಥನಾದೇವೇತರೇಷಾಂ | ನಚೇತ್ | ತೋರದಲೆ ||೧೩|| ಓಂ ಮಿತಿಶ್ರೀ ಶ್ರೀಮದ್ಧರಿ ಕಥಾಮೃತಸಾರ ವ್ಯಾಖ್ಯಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ವಿದ್ಯಾಧೀಶಪೂಜ್ಯ ಪಾದಾನಾಂ ಶಿಷ್ಯೇಣ ವಾದಿರಾಜೇನ ಬಿಂಬೇನ ರಚಿತಾಯಾಂ ಮಂಗಲಸಂಧಿಃ ಸಮಾಪ್ತಃ || ೧ ||

## ಕನ್ನಡಾರ್ಥ

ಸರ್ವದೇವತೆಗಳಿಗೂ ಸಮಸ್ಕರಿಸುತ್ತಾರೆ. "ಪಾಕ" ಎಂಬ ಪದ್ಯದಿಂದ.

ಪಾಕಶಾಸನ= ಪಾಕನೆಂಬ ದೈತ್ಯನನ್ನು ಶಾಸನಮಾಡುವವ, ಇಂದ್ರನು.

ದಿವೌಕಸಃ-ಸ್ವರ್ಗವಾಸಿಗಳು. ಅಂದರೆ ದೇವತೆಗಳು. ಕಮಲ=ಪದ್ಮ||೧೨||

ಲಕ್ಷ್ಮೀದೇವಿಯನ್ನುವಕ್ಷಸ್ಸಿದಲ್ಲಿ ಆಲಿಂಗಿಸಿದ ನಾರಾಯಣನನಾಮವನ್ನು ತಮ್ಮ ಅಂಕಿತದಿಂದ ಸಹಿತವಾಗಿಯೇ ಸಂಕೀರ್ತನೆಗೈಯುತ್ತ, ಈ ಸಂಧಿಯನ್ನು ಶ್ರೀ ದಾಸವರೇಣ್ಯರು ಉಪಸಂಹರಿಸುತ್ತಾರೆ "ಪರಿಮಳವು" ಎಂಬ ಪದ್ಯದಿಂದ. ಹೂವಿನೊಳಗಣ ಪರಿಮಳದಂತೆ ಬ್ರಹ್ಮಾದಿಗಳ ಮನದಲಿ "ತೋರಿ" ಎಂದು ಯೋಜಿಸಬೇಕು. ಮಂಥನದಿಂದಲೇ ವ್ಯಕ್ತನಾಗುವ-ಅರಣಿ (ಕಟ್ಟಿಗೆ) ಯೊಳಗಡಗಿದ ಅವ್ಯಕ್ತಅಗ್ನಿಯಂತೆ ಇತರರಿಗೆ,"ತೋರದಲೆ" ಎಂದೂ ಯೋಜಿಸಬೇಕು. ಪರಮಾತ್ಮನು ವ್ಯಕ್ತಾವ್ಯಕ್ತನಾಗಿರುವದರಿಂದ ಅವನನ್ನು ಉಪಾಸಿಸುವದು ಎಲ್ಲ ಸಜ್ಜನರ ಕರ್ತವ್ಯವೆಂಬುದು ನಿಜಾಭಿಪ್ರಾಯವು. ಇಂಥ ಜಗತ್ಸ್ವಾಮಿಯಾದ ನಾರಾಯಣನನ್ನು ಅನನ್ಯ ಭಾವದಿಂದ ಭಜಿಸುವ ಪರಮ ಭಾಗವತರನ್ನು ನಿತ್ಯದಲ್ಲಿಯೂ ಸ್ತುತಿಸಿ ಭಜಿಸುವದು ಮುಂದಿನ ಬಿಂಬೋಪಾಸನೆಗೆ ಮುಖ್ಯವಾದುದರಿಂದ ಈ ಸಂಗತಿಯನ್ನು- ಪರಮ ಸಾರವನ್ನು- ಆದರದಿಂದ ತಿಳಿಯುಬೇಕು." ಎಂಬುದು ಉಪಸಂಹಾರ ಪದ್ಯದ ಭಾವವು.

ಶ್ರೀವಿದ್ಯಾಧೀಶಶಿಷ್ಯವಾದಿರಾಜನಲ್ಲಿ ಬಿಂಬರೂಪದಿಂದ ತನ್ನಾಮಕನಾಗಿರುವ ಹರಿಯಿಂದ
ವಿರಚಿತವಾದ ಕೌಮುದೀ ಎಂಬ ಗ್ರಂಥದಲ್ಲಿ ಮೊದಲನೆಯ
ಮಂಗಲಸಂಧಿಯು ಸಮಾಪ್ತವಾಯಿತು
ಸುಖತೀರ್ಥ ಬಂಧುವಾದ ರಮಾನಾಥನು ಪ್ರೀತನಾಗಲಿ.

---

|| ಹರಿಃ ಓಂ ಶ್ರೀ ಗುರುರಾಜೋವಿಜಯತೇ ||

# ಕರುಣಾ ಸಂಧಿ ಸಾರ

ಮಂಗಲಾಚರಣ ಸಂಧಿಯಲ್ಲಿ ಶ್ರೀ ಹರಿರೂಪಿಯಾದ ಬಿಂಬನ ಧ್ಯಾನೋಪಾಸನೆ, ಮುಖ್ಯವೆಂದು ಶ್ರೀದಾಸರಾಯರ "ಶ್ರೀಹರಿಕಥಾಮೃತಸಾರ"ಇಂಗಿತವನ್ನರಿತ ಸಕಲ ಅಪರೋಕ್ಷ ಜ್ಞಾನಿಗಳು ಸಾರಿ ಹೇಳಿದರು. ಈ ಎರಡನೇ ಸಂಧಿಯಲ್ಲಿ ಆ ಬಿಂಬನಾದ ಹರಿಯು ಕರುಣಾಳು. ಆ ಬಿಂಬನ ಮಾಹಾತ್ಮೆ ಏನು ? ಆತನ ಕಾರುಣಿಕತೆಯನ್ನು ಅನೇಕ ದೃಷ್ಟಾಂತಗಳೊಂದಿಗೆ ನಾನಾವಿಧವಾಗಿ ಪದ್ಯಗಳಲ್ಲಿ ಕೊಂಡಾಡಿದ್ದಾರೆ.

ಮೊದಲನೆಯ ಪದ್ಯದಲ್ಲಿ ಆ ಬಿಂಬರೂಪೀ ಹರಿಯ ಕಥಾಮೃತ ಶ್ರವಣ ಮಹಾತ್ಮೆ ಹೇಳುತ್ತಾರೆ. ಶ್ರೀ ಹರಿಯ ಕಥಾಮೃತವು ಶ್ರವಣ ಮಾಡಲು ಮನಸ್ಸಿಗೆ ಆನಂದವನ್ನು ಕೊಡುವದು; ಭವದಲ್ಲಿ ಬಂದೊದಗುವ ಆಧ್ಯಾತ್ಮಿಕ ಆಧಿಭೌತಿಕ-ಆಧಿದೈವಿಕ ತ್ರಿವಿದ ದುಃಖಗಳನ್ನುಕಳೆಯುವುದು.ಶ್ರೀಹರಿಕಥೆಯು ಚಿತ್ರವಿಚಿತ್ರವಾದ ಭೋಗಗಳನ್ನು, ಜ್ಞಾನ ಭಕ್ತಿ ವಿರಕ್ತಿಗಳಿಂದ ಹುಟ್ಟುವ ಶಮದಮಾದಿ ಸಂಪತ್ತುಗಳನ್ನು ಈ ಲೋಕದಲ್ಲಿ, ಪಾರತ್ರಿಕವಾದ ಮಹದಾದಿ ಲೋಕಗಳಲ್ಲಿ ಜ್ಞಾನಾನಂದಾತ್ಮಕ ಸುಖದ ಸಂಭೋಗಾದಿಗಳನ್ನೂ ಕೊಟ್ಟು ರಕ್ಷಿಸುವದು. ಇಂಥ ಹರಿಚರಿತೆಯು ಸಕಲ ಲೋಕಗಳಲ್ಲಿಪ್ಪ ಮುಮುಕ್ಷುಗಳಾದ ಜೀವರನ್ನು ಪವಿತ್ರ ಮಾಡುವದು, ಇಂತಹ ಶ್ರೀಲಕ್ಷ್ಮೀರಮಣನ ಕಥೆಯನ್ನು ಜ್ಞಾನಿಗಳು ಪರಮ ಉತ್ಸಾಹದಿಂದ ಕಿವಿಗೊಟ್ಟು ಭಕ್ತಿಯಿಂದ ಕೇಳುವದೆಂದು, ಹರಿಕಥಾಶ್ರವಣದಲ್ಲಿ ಆದರಾತಿಶಯವನ್ನು ಹುಟ್ಟಿಸಿ, ತನ್ಮಾಹಾತ್ಮ್ಯೆ ಹೇಳಿದರು.

ಶ್ರೀ ಹರಿಕಥೆಯಂತೂ ಪರಮ ಮಂಗಳಕರ. ಆ ಹರಿಕಥೆಯನ್ನು ಹೇಳಿ ಶ್ರವಣ ಮಾಡಿಸುವರೂ ಉತ್ತಮರಾಗಿರಬೇಕು. ವಾಣಿಯು ಪರಿಶುದ್ಧವಾಗಿ ಪರಮಾತ್ಮನಲ್ಲಿ ರತಿ ಇರಬೇಕು. ಆದರೆ ನನ್ನ ವಚನಗಳು ಕಲುಷವಾಗಿರುವವು. ಇದರಿಂದ ಹರಿ ಮೆಚ್ಚುವನೆ? ಮೆಚ್ಚುವನು. ಮಳೆಯ ನೀರು ಓಣಿಯಲ್ಲಿ ಹರಿಯಲು ಆ ಅಶುದ್ಧನೀರನ್ನು ಯಾರೂಸ್ನಾನಪಾನ ಮಾಡಿ ಬಳಸವದಿಲ್ಲ. ಮುಂದೆ ಆ ನೀರು ಹರಿಯುತ್ತಗಂಗಾನದಿಗಳಲ್ಲಿಕೂಡಿದರೆ ಜನರು